ಮಾರ್ಚ್ 1997 ರೂ. 10

# ಬಿಸಿಲ ಬದುಕು

• ವಾಣಿಜ್ಯ • ವಿಕಾಸ • ಮಾಹಿತಿ • ಸಂಪರ್ಕ

ಪ್ರಥಮ ಸಂಚಿಕೆ



ದ್ಯೆ-ಉದ್ಯೋಗ ವಿಶೇಷ ವಿಭಾಗ

ಜುಲೈ ೧೯೯೭ ಸಂಪುಟ ೧ ಸಂಚಿಕೆ ೧

# ಬಿಸಿಲ ಬದುಕು

• ವಾಣಿಜ್ಯ • ವಿಕಾಸ • ಮಾಹಿತಿ • ಸಂಪರ್ಕ



ಮುಖಪುಟ ಚಿತ್ರ : ಶಶಿ ಸಾಲಿ
ವಿನ್ಯಾಸ : ಚಂದ್ರಶೇಖರ ಗುಬ್ಬಿ

ಸ್ಥಿರ ಶೀರ್ಷಿಕೆಗಳು





## ಸುನಿಲಕುಮಾರ್ ದೇಸಾಯಿ

### ಯಶಸ್ಸಿನ ರಹಸ್ಯ



ಹದಿನೈದು ವರ್ಷಗಳ ಹಿಂದೆ ದೂರದ ಬಿಜಾಪುರ ಜಿಲ್ಲೆಯ ಹಳ್ಳಿಯೊಂದರಿಂದ ಬೆಂಗಳೂರಿಗೆ ಬಂದು ಬಿದ್ದ ಸುನಿಲ್‌ಕುಮಾರ್ ದೇಸಾಯಿ ಎಂಬ ಹೈದ ಇಂದು ಸಿನಿಮಾ ಜಗತ್ತಿನಲ್ಲಿ ಸ್ಟಾರ್ ನಿರ್ದೇಶಕರಾಗಿ ಚಿಗಿತುನಿಂತಿದ್ದಾರೆ. ಅವರು ಸವೆಸಿದ ಹಾದಿ ಎಂತಹದು? ಅವರ ಯಶಸ್ಸಿನ ಹಿಂದೆ ಏನಿದೆ? ಯಾರಿದ್ದಾರೆ?

○ ಕೇಶವ

## ವಿದ್ಯೆ - ಉದ್ಯೋಗ



ಸಿ.ಎ. ಮಾಡುವುದು ಹೇಗೆ?
ಸಾಮಾನ್ಯ ಪ್ರವೇಶ ಪರೀಕ್ಷೆ ನಿಜಕ್ಕೂ ಬೇಕೇ?
ಟಿ.ವಿ.ಯಲ್ಲಿ ಮಿಂಚುವ ಅವಕಾಶ
ಕೆ.ಇ.ಬಿ.ಯಲ್ಲಿ ಖಾಲಿ ಹುದ್ದೆಗೆ ಅರ್ಜಿ
S.S.L.C. ನಂತರ ಏನು?
ಅಮೇರಿಕಾದಲ್ಲಿ ಉನ್ನತ ಶಿಕ್ಷಣ
ವೃತ್ತಿಪರ ಡಿಪ್ಲೊಮಾ ಕೋರ್ಸು
ಪಿ.ಯು.ಸಿ. ನಂತರ ಎಲ್‌ಎಲ್‌ಬಿ
ಇತ್ಯಾದಿ.. ಇತ್ಯಾದಿ...

○ ಡಾ. ನಾರಾಯಣ ಮಹಿಪಿ ○ ಡಾ. ಎಸ್.ಸಿ. ಶರ್ಮಾ



## ಹಂಪಿ ಕನ್ನಡ ವಿಶ್ವವಿದ್ಯಾಲಯದ ಒಳಹೊರಗು

ಕನ್ನಡ ವಿಶ್ವವಿದ್ಯಾಲಯ ಕಮಲಾಪುರದ ಗುಡ್ಡಗಳಿಗೆ ಸ್ಥಳಾಂತರಗೊಂಡ ಕ್ಷಣದಿಂದಲೇ ಕಂಬಾರರ ವ್ಯಕ್ತಿತ್ವದ ವೈರುಧ್ಯಗಳು ಢಾಳಾಗಿ ಕಾಣತೊಡಗಿದವು. ಶರಣರ ತಾತ್ವಿಕ ಆಶಯದ 'ಕಾಯಕದ ಮನೆ'ಯಲ್ಲೇ ಉದ್ಘಾಟನೆಯ ದಿನ ಬ್ರಾಹ್ಮಣರಿಂದ ಯಜ್ಞ ಮಾಡಿಸಿದರು.

○ ಎಸ್.ಎಸ್. ಹಿರೇಮಠ



## ಗರ್ಭಿಣಿಯರಿಗೆ ಅಪಾಯದ ಸಂಕೇತಗಳು



ಉದರದಲ್ಲಿ ಸಂತಾನದ ಕುಡಿ ಹೊತ್ತ ಪ್ರತಿಯೊಬ್ಬ ಗರ್ಭಿಣಿ ಸ್ತ್ರೀ ಹೃದಯದಲ್ಲಿ ಕನಸುಗಳ ಗಂಟು ಕಟ್ಟಿಕೊಂಡಿರುತ್ತಾಳೆ. ತುಸುವೇ ಎಚ್ಚರ ತಪ್ಪಿದರೂ ಗರ್ಭಿಣಿಯ ಕನಸುಗಳನ್ನು ನುಚ್ಚುನೂರಾಗಿಸುವ ಅಪಾಯಗಳೆಡೆ ಬಹುತೇಕ ಮಹಿಳೆಯರು ಗಮನ ನೀಡುವುದಿಲ್ಲ! ಇಂತಹ ಅಪಾಯದ ಸೂಚನೆಯನ್ನು ಅರಿತ ಮಹಿಳೆ ಮಾತ್ರ ತನ್ನ ಕಂದಮ್ಮನನ್ನು ಉಳಿಸಿಕೊಳ್ಳಬಲ್ಲಳು.

○ ಡಾ. ಸುನಂದಾ ಕುಲಕರ್ಣಿ

Edited, Printed, Published and Owned by CHANDRAKANTA VADDU
473, I Cross, I Block, III Stage, Near Water Tank Bus Stop, Basaveshwaranagar,
BANGALORE - 560 079. Tel : 080 3358198 Fax : 080 5091136






## ಟಪಾಲು

ಉತ್ತರ ಕರ್ನಾಟಕ, ದಕ್ಷಿಣ ಕರ್ನಾಟಕ ಮುಂತಾಗಿ ಪ್ರತ್ಯೇಕವಾಗಿ ನೋಡುವುದು ಇಡೀ ಕರ್ನಾಟಕಕ್ಕೆ ವಿಸಂಗತ ಅನ್ನಿಸುತ್ತದೇನೋ ನಿಜ. ಆದರೂ, ಬೇರೆ ಬೇರೆ ಭಾಗಗಳಲ್ಲಿರುವ ವಿಶಿಷ್ಟ ಸಮಸ್ಯೆಗಳನ್ನು ಇಡೀ ಕರ್ನಾಟಕದ ನಿಲುವಿನಿಂದ ಮತ್ತು ಚೌಕಟ್ಟಿನಲ್ಲಿ ಗ್ರಹಿಸಬೇಕಾದ ಅವಶ್ಯಕತೆಯೂ ಇದೆ.

**- ಎಸ್.ಬಿ. ನರಗುಂದಕರ**
ಧಾರವಾಡ

◆

ಅಖಿಲ ಕರ್ನಾಟಕಕ್ಕೆ ಧಕ್ಕೆಯಾಗದಂತೆ ತಾವು ತಮ್ಮ ಕರ್ತವ್ಯವನ್ನು ನೆರವೇರಿಸಬೇಕು.

**- ಡಾ. ಬಿ.ಡಿ. ಜತ್ತಿ**
ಬೆಂಗಳೂರು

◆

ನೀವು ಮಾಡುತ್ತಿರುವ ಕೆಲಸ ದೊಡ್ಡದು. ಆದರಲ್ಲಿ ನಿಮಗೆ ಎಲ್ಲ ಯಶಸ್ಸೂ ದೊರೆಯಲೆಂದು ಹೃದಯಪೂರ್ವಕ ಹಾರೈಸುತ್ತೇನೆ.

**- ಡಾ. ಹಾ.ಮಾ. ನಾಯಕ**
ಮೈಸೂರು

◆

ಸಾಧ್ಯವಾದ ಸಂದರ್ಭಗಳಲ್ಲಿ ತಮ್ಮ ಮಾಸಪತ್ರಿಕೆಯನ್ನು ಜ್ಞಾಪಕದಲ್ಲಿಟ್ಟುಕೊಂಡು ಲೇಖನವನ್ನು ಕಳುಹಿಸಲು ಪ್ರಯತ್ನಿಸುತ್ತೇನೆ.

**- ಡಾ. ಡಿ.ಎಂ. ನಂಜುಂಡಪ್ಪ**
ಬೆಂಗಳೂರು

ನಮ್ಮಲ್ಲಿ ಕೃಷಿ ಬಗ್ಗೆ ಸಾಕಷ್ಟು ಸಂಶೋಧನೆ ಯಾಗಿದ್ದರೂ ಶೇಕಡಾ 80ರಷ್ಟು ತಂತ್ರಜ್ಞಾನ ರೈತನ ಬಾಗಿಲಿಗೆ ತಲುಪಿರುವುದಿಲ್ಲ. ನಾನು ಉತ್ತರ ಕರ್ನಾಟಕಕ್ಕೆ ಸಂಬಂಧಿಸಿದ ಕೃಷಿಯ ಹೊಸ ತಂತ್ರಜ್ಞಾನಗಳ ಬಗ್ಗೆ ಲೇಖನ ಬರೆಯಲು ಉದ್ದೇಶಿಸಿದ್ದೇನೆ.

**- ಡಾ. ವಿ.ಎಸ್. ವೀರಣ್ಣ**, ಬಿಜಾಪುರ

ನೆರಳಿನಲ್ಲಿದ್ದರೂ ಬಿಸಿಲಿನ ಬಗ್ಗೆ ಯೋಚಿಸಿ ಪತ್ರಿಕೆ ಹೊರತರುತ್ತಿರುವುದಕ್ಕೆ ಅಭಿನಂದನೆಗಳು. ಯಶಸ್ವಿ ಯಾಗಲಿ.

**- ಸಿ. ಚನ್ನಬಸವಣ್ಣ**, ಬಳ್ಳಾರಿ

ಯಕ್ಷಗಾನದಂತೆ ಉ.ಕ.ದ ದೊಡ್ಡಾಟದ ಹಿರಿಮೆಯನ್ನು ಎತ್ತಿ ಹಿಡಿಯಿರಿ.

**- ಪ್ರಕಾಶ ಗ. ಖಾಡೆ**, ಲೋಕಾಪುರ

ನೊಂದವರ, ಪ್ರತಿಭಾವಂತರ ದನಿಯಾಗಿ ಹೊಸ ಸಾಂಸ್ಕೃತಿಕ ಆಸ್ತಿಗಳನ್ನು ಈ ನಾಡಿಗೆ ನೀಡುವಂತಾಗಬೇಕು.

**- ಸದಾನಂದ ಪಾಟೀಲ**, ಹಳಿಯಾಳ

ಪರಸ್ಪರ ಅರಿಯಲು, ಅರಳಲು ಅವಕಾಶ ಕಲ್ಪಿಸಿರಿ.

**- ಆರೂರು ಲಕ್ಷ್ಮಣ ಶೇಟ್**, ಹುಬ್ಬಳ್ಳಿ

ಪತ್ರಿಕೆಯು ಉತ್ತರ ಕರ್ನಾಟಕದ ಬಗೆಗಿನ ಸರಕಾರದ ಮಲತಾಯಿ ಧೋರಣೆಯನ್ನು ಖಂಡಿಸಲಿ.

**- ಗಂಗಾಧರ ನಂದಿ**, ಹಾವೇರಿ

ಕರ್ತವ್ಯ ಪಾಲನೆಯಲ್ಲಿ ನಿಮಗಿರುವ ಶ್ರದ್ಧೆಯೇ ಈ ಪತ್ರಿಕೆಯನ್ನು ಕೈಹಿಡಿದು ಮುನ್ನಡೆಸುತ್ತದೆ ಎಂಬ ದೃಢ ನಂಬಿಕೆ ನನ್ನದು.

**- ಗುರುರಾಜ ಜೋಶಿ**, ಹುಬ್ಬಳ್ಳಿ

ಬರೀ ಶುಭಾಶಯಗಳಿಂದಲೇ ಪತ್ರಿಕೆ ನಡೆಸಲಿಕ್ಕಾಗದು ಎಂಬ ಎಚ್ಚರ ನಿಮಗಿರಬೇಕು.

**- ಹುರುಕಡ್ಲಿ ಶಿವಕುಮಾರ**, ಬಾಚಿಗೊಂಡನಹಳ್ಳಿ

ನಮ್ಮ ನಾಡಿನ ಬಹು ದಿನಗಳ ಕನಸನ್ನು ನೀವೀಗ ನನಸು ಮಾಡಲು ಹೊರಟಿರುವುದರಿಂದ ತುಂಬ ಖುಷಿಯಾಯಿತು.

**- ಎಸ್.ಎಸ್. ಹಿರೇಮಠ**, ಹರಪನಹಳ್ಳಿ

ಬಹಳ ದಿನಗಳ ಬಯಕೆ ಈಗ ಮೂರ್ತಗೊಳ್ಳುತ್ತಿರುವ ಸಂದರ್ಭ ನನಗೆ ಖುಷಿ ತಂದಿದೆ.

**- ಅಬ್ಬಾಸ್ ಮೇಲಿನಮನಿ**, ಗುಳೇದಗುಡ್ಡ

ತಮ್ಮದು ಅತ್ಯಂತ ಮಹತ್ವಾಕಾಂಕ್ಷೆಯ ಯೋಜನೆಯಾದರೂ, ಉತ್ತರ ಕರ್ನಾಟಕದ ಜನತೆಗೆ ಪ್ರಯೋಜನಕಾರಿಯಾದದ್ದು.

**- ಡಿ.ಆರ್. ಬಳೂರಗಿ**, ರಾಯಚೂರು

ಉತ್ತರ-ದಕ್ಷಿಣವೆಂಬ ಭೇದಭಾವದಿಂದ ಮನಸ್ಸು ಗಳು ಒಡೆಯುತ್ತಿರುವ ಇಂದಿನ ದಿನಗಳಲ್ಲಿ ಮನಸ್ಸುಗಳನ್ನು ಬೆಸೆಯಲೆಳೆಸುವ ಪ್ರಯತ್ನ ಸ್ತುತ್ಯ.

**- ಡಾ. ಅನಿಲ ಕಮತಿ**, ಯಂಕಂಬಾ

ಕನ್ನಡದ ಪ್ರಪ್ರಥಮ ಪತ್ರಿಕೆಯಾದ ''ಮಂಗಳೂರು ಸಮಾಚಾರ'' ಬಳ್ಳಾರಿಯಲ್ಲೇ ಅಚ್ಚಾಗಿದ್ದರೂ ಇಂದಿನ ಬಳ್ಳಾರಿಯ ಪತ್ರಿಕೋದ್ಯಮ ಶೋಚನೀಯ ಸ್ಥಿತಿಯಲ್ಲಿರುವುದು ದುರಂತವೇ ಸರಿ! ಈ ಕೊರತೆಯನ್ನು ತಮ್ಮ ಪತ್ರಿಕೆ ನೀಗಿಸುವುದೆಂಬ ನಂಬಿಕೆ ನನ್ನದು.

**- ಟಿ.ಕೆ. ಗಂಗಾಧರ ಪತ್ತಾರ**, ಬಳ್ಳಾರಿ

ಮೊದಲ ಸಂಚಿಕೆಯಿಂದಲೇ ಪತ್ರಿಕೆ ಕಳಿಸಿಕೊಡಿ. ವಾರ್ಷಿಕ ಚಂದಾ ಹಣ ಕಳಿಸುವೆನು.

**- ಡಾ. ಭೋಜರಾಜ ಪಾಟೀಲ**, ಹಂಸಬಾವಿ

ಬೆಲೆ ಹೆಚ್ಚಾಗದಂತೆ ನಿಗಾವಹಿಸುವುದು ಪತ್ರಿಕೆಯ ಬೆಳವಣಿಗೆ ದೃಷ್ಟಿಯಿಂದ ಒಳ್ಳೆಯದು.

**- ಅಳಗುಂಡಿ ಅಂದಾನಯ್ಯ**, ದಾಂಡೇಲಿ

ಪತ್ರಿಕೆ ತನ್ನ ನಿರಂತರತೆಯನ್ನು, ಅನನ್ಯತೆಯನ್ನು ಕಾಪಾಡಿಕೊಂಡು ಈ ಪ್ರದೇಶದ ಸಾಂಸ್ಕೃತಿಕ ಒಳನೋಟಗಳನ್ನು ತೆರೆದಿಡುವಲ್ಲಿ ಸಹಾಯವಾಗಲೆಂದು ಆಶಿಸುತ್ತೇನೆ.

**- ಡಾ. ಬಸವರಾಜ ಸಬರದ**, ಕಲಬುರ್ಗಿ

ನನ್ನನ್ನು ತಮ್ಮವನನ್ನಾಗಿಸಿಕೊಂಡದ್ದಕ್ಕೆ ಧನ್ಯವಾದಗಳು.

**- ಬೀರಣ್ಣ ನಾಯಕ ಮೊಗಟಾ**, ಯಲ್ಲಾಪುರ

ನೀವು ಇಟ್ಟಿರುವ ಉದ್ದೇಶಗಳ ಬಗ್ಗೆ ನಮ್ಮ ಸಹಮತವಿದೆ.

**- ಡಾ. ಬಿ.ಶೇಷಾದ್ರಿ, ಟಿ.ಆರ್. ಚಂದ್ರಶೇಖರ್**, ಹಂಪಿ

ಈ ಪತ್ರಿಕೆಯ ಬೆಳವಣಿಗೆಗೆ ಪ್ರಯತ್ನಿಸುವುದು ನನ್ನ ಕರ್ತವ್ಯವೆಂದೇ ಭಾವಿಸುತ್ತೇನೆ.

**- ಎಂ.ಎಸ್. ಬಾದಾಮಿ**, ರಬಕವಿ

ಸ್ವಲ್ಪ ದಿನ ತಡವಾದರೂ ಅಡ್ಡಿಯಿಲ್ಲ. ಆರಂಭಶೂರ ಎಂಬ ಪದವಿ ಪಡೆಯದಿರಿ. ದುಡ್ಡಿನ ವಿಷಯದಲ್ಲಿ ನಿಷ್ಠುರವಾಗಿರಿ. ಪ್ರಥಮ ಚಂದಾದಾರನ ಭಾಗ್ಯ ನನಗಿರಲಿ.

**- ಶೇಖರ ಲದವಾ**, ಗದಗ

ತಮ್ಮ ಪ್ರಯತ್ನ ಎಷ್ಟು ಕೊಂಡಾಡಿದರೂ ಕಡಿಮೆಯೇ. ಪತ್ರಿಕೆಯನ್ನು ಗೌರವಾದರಗಳಿಂದ ಸ್ವಾಗತಿಸುವೆ. ನನ್ನನ್ನು ತಮ್ಮ ಬಳಗದವನೆಂದು ಭಾವಿಸಿರಿ.

**- ಈಶ್ವರ ಕಮ್ಮಾರ**, ಧಾರವಾಡ

ನೀವು ಏನನ್ನೇ ಮಾಡಲಿ ಅಚ್ಚುಕಟ್ಟಾಗಿ ಮಾಡುತ್ತೀರಿ, ಎತ್ತಿಡುವ ಪ್ರತಿ ಹೆಜ್ಜೆ ದೃಢವಾಗಿರುತ್ತದೆ, ಉಜ್ವಲ ಭವಿಷ್ಯ ತರುತ್ತದೆ ಎಂಬ ಭರವಸೆ ನನಗಿದೆ. ನಿಮ್ಮ ಬೆನ್ನಿಗೆ ನಾವು ಇರುತ್ತೇವೆ.

**- ಸಿ.ಪಿ. ಹೇಮಗಿರಿಮಠ, ಹುಬ್ಬಳ್ಳಿ**

ಹೆಚ್ಚಿನ ಪುಟಗಳನ್ನು ರಾಜಕೀಯ ಸುದ್ದಿಗಳೇ ಕಬಳಿಸದಿದ್ದರೆ ಕ್ಷೇಮವೇನೋ....

**- ಚಿತ್ರಶೇಖರ ಕಂಠಿ, ಕಲಬುರ್ಗಿ**

ಇದು ಎಂದೋ ಆಗಬೇಕಿದ್ದ ಕೆಲಸ. ತಮ್ಮ ಮನಃಪೂರ್ವಕ ಕಳಕಳಿ, ಕಾಳಜಿಯಿಂದ ಈ ಕೆಲಸ ಆಗುತ್ತಿದೆ ಎಂದರೆ ಅದಕ್ಕೂ ಹೆಚ್ಚಿನ ಹಿಗ್ಗು ಬೇರಿಲ್ಲ.

**- ಕೋ. ಅನಸೂಯ ಸಿದ್ಧರಾಮ, ಗೋಕಾಕ**

ಪತ್ರಿಕೆ ಹೊರಬಂದ ನಂತರ ನಮ್ಮ ಕಡೆಯಿಂದ ತಮಗೆ ಅದ್ಭುತ ಪ್ರತಿಕ್ರಿಯೆ ಕಂಡುಬಂದರೆ ಅಚ್ಚರಿಯಿಲ್ಲ.

**- ಉಮೇಶ ಬೆಳಕೂಡ, ಮೂಡಲಗಿ**

ಇಂಥ ಒಂದು ಪ್ರಾಮಾಣಿಕ ಪ್ರಯತ್ನದ ಅವಶ್ಯಕತೆಯಿದೆ. ಈ ತಮ್ಮ ಪ್ರಯತ್ನದಲ್ಲಿ ನನ್ನಿಂದ ಸಾಧ್ಯವಾದ ಸಹಕಾರ ಇದ್ದೇ ಇದೆ.

**- ಭಾಗೀರಥಿ ಹೆಗಡೆ, ಶಿರಸಿ**

ಈ ದೆಸೆಯಲ್ಲಿ ನನಗೆ ತಾವು ಏನು ವಹಿಸಿದರೂ ಹೊರಲು ಸಿದ್ಧ.

**- ಅರ್ಜುನ ತಾ. ಕೋರಟಕರ, ಜಮಖಂಡಿ**

ನಮ್ಮ ಸಾಹಿತ್ಯ ಮಧ್ಯಮ ವರ್ಗಕ್ಕೆ ಸೀಮಿತವಾಗಿದೆ. ಅದರಲ್ಲಿ ಆಶಾವಾದ ಕಡಿಮೆ ಹಾಗೂ ಅದು ಭಾವನಾ ಪ್ರಧಾನವಾಗಿದೆ ಎಂಬುದು ನನ್ನ ಭಾವನೆ. ಎಲ್ಲ ವರ್ಗದವರಲ್ಲಿ ಆಶಾವಾದ ಹಾಗೂ ವಿಚಾರವಾದ ತುಂಬಿ ಅವರಲ್ಲಿ ಪರಸ್ಪರ ಪೂರಕ ಉತ್ಪಾದಕ ಮನೋಭಾವನೆ ತುಂಬುವುದು ಅವಶ್ಯ ಎಂಬುದು ನನ್ನ ಭಾವನೆ.

**- ಬಾಪು ಶಿರಹಟ್ಟಿ, ಶಿರಹಟ್ಟಿ**

ಪತ್ರಿಕೆ ಆರಂಭಿಸುವುದು ಬಹಳ ಸುಲಭ. ಆದರೆ ಅದನ್ನು ಮುನ್ನಡೆಸಿಕೊಂಡು ಹೋಗುವುದು ತುಂಬ ತುಂಬ ಕಠಿಣವಾಗಿದೆ. ಅದರ ಕುರಿತಾಗಿ ಯೋಚಿಸಿರಿ.

**- ಅಶೋಕ ನರೋಡೆ, ಮಹಾಲಿಂಗಪುರ**

ಚರ್ವಿತಚರ್ವಣ ಬ್ಲಾಕ್‌ಮೇಲ್ ತಂತ್ರದ ಹಳದಿ ಪತ್ರಿಕೆಯಾಗದೆ ಕುಟುಂಬ ವರ್ಗದವರೆಲ್ಲರ ಮೆಚ್ಚುಗೆ ಗಳಿಸಲಿ. ನಿಮ್ಮ ಲೇಖಕರ ಸೈನ್ಯದಲ್ಲಿ ನಾನೂ ಇದ್ದೇನೆ.

**- ಡಾ. ಯಲಗುರೇಶ ಸಂಕನಾಳ, ಬಳ್ಳಾರಿ**

# ಇದೇನು 'ಪಾಪು' ಪತ್ರಿಕೆಯೇ?

*ತಮ್ಮ ಮಾಸಪತ್ರಿಕೆಯ ಪ್ರಚಾರಪತ್ರಿಕೆ ಹಾಗೂ ಏಜೆನ್ಸಿ ನಿಯಮಾವಳಿ ಕೈಸೇರಿವೆ. ತುಂಬಾ ಸಂತೋಷ.*

*ಉತ್ತರ ಕರ್ನಾಟಕಕ್ಕೆ ಸಂಬಂಧಿಸಿದಂತೆ ಕೆಲವು ಮಾತುಗಳಿವೆ. ಇದೇನು 'ಪಾಪು' ಪತ್ರಿಕೆಯೇ? ಹಾಗಿದ್ದರೆ ನಮಗೆ ಖಂಡಿತಾ ಏಜೆನ್ಸಿ ಬೇಡ. ಪಾಟೀಲ ಪುಟ್ಟಪ್ಪನವರ ಎಲ್ಲಾ ವಿಚಾರಗಳನ್ನೂ ನಾವು ಒಪ್ಪಬೇಕಾಗಿಲ್ಲ. ಅದರಲ್ಲೂ ಪ್ರತ್ಯೇಕತಾವಾದಕ್ಕೆ ನಾವು ಸಮ್ಮತಿಸುವುದಿಲ್ಲ.*

*ಉತ್ತರ ಕರ್ನಾಟಕಕ್ಕೆ ಅನ್ಯಾಯವಾಗಿದೆ. ಇದರಲ್ಲಿ ನಮ್ಮ ತಪ್ಪುಗಳೇ ಅಧಿಕವಾಗಿವೆ. ಅಖಂಡ ಕರ್ನಾಟಕ ರಾಜ್ಯ ನಿರ್ಮಾಣಕ್ಕಾಗಿ ಹೋರಾಡಿದ ಜನ ಎರಡು ಕರ್ನಾಟಕದ ಮಾತುಗಳನ್ನಾಡಿದರೆ, ಈ ನಾಡು ಮತ್ತೆ ತುಂಡು ತುಂಡಾಗುವದು ಖಂಡಿತ. ನಮ್ಮ ತಂದೆಯವರ ನಿಷ್ಠುರ ವಿಚಾರಗಳಿವು. ಅವರು ಚೆನ್ನಮ್ಮರಾಣಿಯ ಕಸುವಿನ ನೆಲದಲ್ಲಿ ಹುಟ್ಟಿ ಬೆಳೆದವರು. ನಾನು ಮೈಸೂರಿನಲ್ಲಿ ಜನಿಸಿದ್ದೇನೆ. ನನ್ನ ತಾಯಿ ಕೊಡಗಿನವರು.*

*ಪುಂಡೀಪಲ್ಯ - ನುಚ್ಚು - ಜೋಳದ ರೊಟ್ಟಿ, ಒಣ ಮೆಣಸಿನಕಾಯಿ ಖಾರ, ಗುರೆಳ್ಳ ಹಿಂಡಿ ನಮ್ಮ ನಿತ್ಯದ ಆಹಾರ. ಆದರೂ ನಾವು ವಿಶಾಲ ಕರ್ನಾಟಕದ - ಸಮೃದ್ಧ ಕರ್ನಾಟಕದ ಆರಾಧಕರು.*

*ನಮ್ಮ ತಂದೆ ಬೆಳಗಾವಿ ಕರ್ನಾಟಕದಲ್ಲೇ ಉಳಿಯಲೆಂದು ೧೯೬೭ರಲ್ಲಿ ವಿಧಾನಸೌಧದ ಮುಂದೆ ಆಮರಣ ಅನ್ನಸತ್ಯಾಗ್ರಹ ಕೈಕೊಂಡಿದ್ದರು. ನಮ್ಮವರೇ ಆದ ಮುಖ್ಯಮಂತ್ರಿ (ಅವರು ಜನನಾಯಕರಂತೆ...) ನಿಜಲಿಂಗಪ್ಪನವರ ಸರಕಾರ ತಂದೆಯವರನ್ನು ಬಂಧಿಸಿ ಜೈಲಿಗೆ ತಳ್ಳಿತು. ೩೦೯ ಸೆಕ್ಷನ್ನಿನ ಪ್ರಕಾರ ಆತ್ಮಹತ್ಯಾ ಕೇಸು ಹಾಕಿತು. ಬೆಳಗಾವಿಯಿಂದ ಬೆಂಗಳೂರಿನ ನ್ಯಾಯಾಲಯಕ್ಕೆ ಎಡತಾಕಿಸಿತು. ಕೊನೆಗೆ ನ್ಯಾಯಾಲಯದ ಕ್ಷಮೆಕೋರಿ ನನ್ನ ತಂದೆ ಬೆಳಗಾವಿಗೆ ಬಂದರು.*

*ಇಂಥ ಹಿನ್ನೆಲೆಯುಳ್ಳ ನನ್ನ ತಂದೆ ಏಜೆನ್ಸಿ ಹಿಡಿಯುವಾಗ ಕೇವಲ ಕಮೀಶನ್ನಿನ ಆಸೆ ಬೇಡ. ಪೂರ್ವಾಪರ ವಿಚಾರ ಮಾಡಿ ಈ ಕಾರ್ಯ ನಿರ್ವಹಿಸು ಎಂದಿದ್ದಾರೆ.*

*ಸಾಹಿತ್ಯಕ ಪತ್ರಿಕೆಯಾಗಿದ್ದರೆ ಆ ಮಾತೇ ಬೇರೆ. ಇದು ರಾಜಕೀಯ ಪತ್ರಿಕೆಯೂ ಹೌದು. ನನಗೊಂದಿಷ್ಟು ಕಾಲಾವಕಾಶ ಕೊಡಿ. ಮಾದರಿ ಪ್ರತಿ ನೋಡಿ ಏಜೆನ್ಸಿ ಹಿಡಿಯುತ್ತೇನೆ.*

*ಈ ಮೊದಲೇ ಯಾರಾದರೂ ಬರೆದುಕೊಂಡಿದ್ದರೆ ಏಜೆನ್ಸಿ ಕೊಟ್ಟು ಬಿಡಿ. ಮೊದಲ ಸಂಚಿಕೆ ಕಣ್ಣಾರೆ ಕಂಡು ನನ್ನ ಆರ್ಡರು ಕಳಿಸುತ್ತೇನೆ-ಮುಂಗಡದೊಂದಿಗೆ.*

*ಈ ಭಾಗದಲ್ಲಿ ಎಲ್ಲಾ ಇದ್ದೂ ಏಕೆ ಹೀಗೆ? ಎಂದಿದ್ದೀರಿ. ಸಮರ್ಥ ನಾಯಕತ್ವದ ಅಭಾವವೇ ಕಾರಣ ಎಂದಿದ್ದಾರೆ ನನ್ನ ತಂದೆ. ಹಳ್ಳೀಕೇರಿ, ವಾಲಿ ಚೆನ್ನಪ್ಪ, ದೊಡ್ಡಮೇಟಿ, ಗುಡದಿನ್ನಿಯಂಥವರು ಈಗೆಲ್ಲಿದ್ದಾರೆ? ಎಲ್ಲರೂ ಸ್ವಾರ್ಥಿಗಳೇ.*

***- ಮನೋಜ ಪಿ. ಆನಿಗೋಳ, ಬೆಳಗಾವಿ***

ನೀನು ತೇನಸಿಂಗ್ ಇದ್ದಂತೆ.... ನಿನಗೆ ಸಲಹೆ ಕೊಡೋ ಅಗತ್ಯವಿಲ್ಲ. ನೀನು ಈ ಫೀಲ್ಡಲ್ಲಿ ಸಾಕಷ್ಟು ಕೆಲಸ ಮಾಡಿದ್ದೀಯ. ಇಂಥದ್ರ ಬಗ್ಗೆ ಬರೆ ಅಂದ್ರೆ ಬರೆಯುವೆ ಆಯ್ತಾ?

**- ಕುಂ. ವೀರಭದ್ರಪ್ಪ**
ಕೊಟ್ಟೂರು

♦

ನಮ್ಮಂಥವರು ಉಚಿತ ಉಪದೇಶವನ್ನು ಧಾರಾಳವಾಗಿ ನೀಡಬಹುದು. ಆದರೆ ಪತ್ರಿಕೆಯ ಪ್ರಕಟಣೆ- ಪ್ರಚಾರ - ಮಾರಾಟಕ್ಕೆ ದೊಡ್ಡ ಜಾಲವನ್ನೇ ಸೃಷ್ಟಿಸಬೇಕು. ಮುಖ್ಯ ಹಣಕಾಸು ಬೇಕು. ಎಲ್ಲಕ್ಕೂ ಮುಖ್ಯ ಪ್ರಾಮಾಣಿಕ ದುಡಿಮೆಗಾರರು ಬೇಕು.

**- ಡಾ. ಮೃತ್ಯುಂಜಯ ಹೊರಕೇರಿ**
ಸೊಂಡೂರು

♦

ಗಡಿ ಭಾಗದಲ್ಲಿನ ಎಷ್ಟೋ ಜನ ಪ್ರತಿಭಾನ್ವಿತರು ಕಮರಿ ಹೋಗುತ್ತಿದ್ದಾರೆ. ಅವರೆಲ್ಲ ಬೆಳಕಿಗೆ ಬರುವಂತಾಗಲಿ.

**- ಕಲ್ಲೇಶ್ ಕುಂಬಾರ**
ಹಾರೂಗೇರಿ

♦

ಪ್ರಕಟಣೆಗೆ ಕೊಟ್ಟ ಮಹತ್ವವನ್ನು ಮಾರಾಟಕ್ಕೂ ಕೊಡಿ.

**- ವಿಜಯ್ ಅಂಗಡಿ**
ಹಾಸನ

**ಭಾಷೆ, ಪ್ರದೇಶ, ಧರ್ಮದ ವಿಷಯದಲ್ಲಿ ಸಾಮಾನ್ಯವಾಗಿ ಭಾವನೆಯೇ ಪ್ರಧಾನ ಪಾತ್ರ ವಹಿಸುತ್ತದೆ. ಭಾವನಾತ್ಮಕ ಸಂಗತಿಗಳಿಗೆ ಒಂದು ತೊಲೆ ರಾಜಕೀಯ ಬೆರೆತರಂತೂ ಹತ್ತಾರು ಟನ್ ಅನಾಹುತ ಖಂಡಿತ! ಹೀಗಾಗಿ ಇಂಥ ಸಂದರ್ಭಗಳಲ್ಲಿ ರಾಜಕಾರಣಿಗಿಂತ ವಿಷಯ ತಜ್ಞರು ಏನು ಹೇಳುತ್ತಾರೆ ಎಂಬುದು ಬಹುಮುಖ್ಯ. ಹಂಪಿ ವಿಶ್ವವಿದ್ಯಾಲಯದ ಅರ್ಥಶಾಸ್ತ್ರಜ್ಞರಾದ ಡಾ. ಬಿ.ಶೇಷಾದ್ರಿ ಹಾಗೂ ಟಿ.ಆರ್.ಚಂದ್ರಶೇಖರ ಅವರು ಪ್ರಾದೇಶಿಕ ಅಸಮತೋಲನ ಕುರಿತು ಸಮಗ್ರವಾಗಿ ಅಧ್ಯಯನ ಮಾಡಿದ ಅರ್ಥಪೂರ್ಣ ಲೇಖನ ಇಲ್ಲಿದೆ.**

# ಅಭಿವೃದ್ಧಿಯಲ್ಲಿ ಪ್ರಾದೇಶಿಕ ಅಸಮಾನತೆ



○ ಡಾ. ಬಿ. ಶೇಷಾದ್ರಿ
○ ಟಿ. ಆರ್. ಚಂದ್ರಶೇಖರ

ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ, ಬಳ್ಳಾರಿ ಜಿಲ್ಲೆ.

ಪ್ರತಿಯೊಂದು ಪ್ರದೇಶವೂ ತನ್ನದೇ ಆದ ವಿಭಿನ್ನ ಹಾಗೂ ವಿಶಿಷ್ಟ ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಸ್ವರೂಪಗಳನ್ನು ಹೊಂದಿರುತ್ತದೆ. ಈ ಕಾರಣದಿಂದಾಗಿಯೇ ಅಭಿವೃದ್ಧಿಯು ಪ್ರಶಸ್ತವಾದ ಕೆಲವು ಪ್ರದೇಶಗಳಲ್ಲಿ ಮಡುಗಟ್ಟಿಕೊಳ್ಳುವ ಪ್ರವೃತ್ತಿ ಕಂಡುಬರುತ್ತದೆ. ಒಂದು ದೇಶದ ಎಲ್ಲಾ ಪ್ರದೇಶಗಳಲ್ಲೂ, ಒಂದು ಪ್ರದೇಶದ ಎಲ್ಲಾ ಸ್ಥಳಗಳಲ್ಲೂ ಏಕಕಾಲದಲ್ಲಿ, ಏಕರೂಪವಾಗಿ ಮತ್ತು ಏಕಗತಿಯಲ್ಲಿ ಅಭಿವೃದ್ಧಿ ಸಂಭವಿಸುವುದಿಲ್ಲ. ಒಂದು ಪ್ರಶಸ್ತವಾದ ಪ್ರದೇಶ ಅಥವಾ ಸ್ಥಳದಲ್ಲಿ ಸಂಭವಿಸುವ ಅಭಿವೃದ್ಧಿಯು ಕಾಲಕ್ರಮೇಣ ಶಕ್ತಿ ಸಂಚಯನ ಮಾಡಿಕೊಂಡು ಉಳಿದೆಲ್ಲಾ ಪ್ರದೇಶ ಅಥವಾ ಸ್ಥಳಗಳಿಗಿಂತ ವೇಗವಾಗಿ ನಡೆಯ ತೊಡಗುತ್ತದೆ. ಅಭಿವೃದ್ಧಿಯಲ್ಲಿನ ಈ ಬಗೆಯ ಪ್ರದೇಶ ವಿಶಿಷ್ಟತೆಯನ್ನು 'ಉತ್ತರ-ದಕ್ಷಿಣ ವೈರುಧ್ಯ' ಎಂದು ಕರೆಯಲಾಗಿದೆ. ಈ 'ಉತ್ತರ-ದಕ್ಷಿಣ ವೈರುಧ್ಯ'ವು ಭಾರತಕ್ಕೆ ಅಥವಾ ಕರ್ನಾಟಕಕ್ಕೆ ಮಾತ್ರ ಸೀಮಿತವಾದ ಸಮಸ್ಯೆಯೇನಲ್ಲ. ಇದೊಂದು ಜಾಗತಿಕ ಸಮಸ್ಯೆಯಾಗಿದೆ. ರಾಜ್ಯಶಕ್ತಿಯು ಕನಿಷ್ಠವಾಗಿ ಮಾರುಕಟ್ಟೆಶಕ್ತಿ ಬಲಿಷ್ಠವಾಗಿರುವ ಸಂದರ್ಭದಲ್ಲಿ ಅಭಿವೃದ್ಧಿಯಲ್ಲಿನ ಪ್ರದೇಶವಾರು ಅಂತರಗಳು ಉಲ್ಬಣಗೊಳ್ಳುವ ಸಾಧ್ಯತೆ ಇದೆ.

ಇಂದು ಕರ್ನಾಟಕದಲ್ಲಿ ಇಂಥ ಪರಿಸ್ಥಿತಿ ನಿರ್ಮಾಣವಾಗಿರುವಂತೆ ಕಾಣುತ್ತದೆ. ಅಭಿವೃದ್ಧಿಯಲ್ಲಿನ ಪ್ರದೇಶವಾರು ಅಂತರಗಳನ್ನು ಕುರಿತ ವಾಗ್ವಾದದಲ್ಲಿ ಪರಸ್ಪರ ವಿರೋಧಿಯಾದ ಎರಡು ಗುಂಪುಗಳು ಹುಟ್ಟಿಕೊಂಡಿವೆ. ಅಧ್ಯಯನದ ದೃಷ್ಟಿಯಿಂದ ಕರ್ನಾಟಕ ರಾಜ್ಯವನ್ನು ದಕ್ಷಿಣ ಕರ್ನಾಟಕ (ದ.ಕ.) ಮತ್ತು ಉತ್ತರ ಕರ್ನಾಟಕ (ಉ.ಕ.)ವೆಂದು ವಿಭಾಗಿಸಿಕೊಳ್ಳಬಹುದಾಗಿದೆ. ಬೆಂಗಳೂರು ಮತ್ತು ಮೈಸೂರು ವಿಭಾಗಗಳನ್ನೊಳಗೊಂಡ ೧೨ ಜಿಲ್ಲೆಗಳನ್ನು ದ.ಕ.ಪ್ರದೇಶವು ಹೊಂದಿದ್ದರೆ ಬೆಳಗಾವಿ ಮತ್ತು ಗುಲಬರ್ಗಾ ವಿಭಾಗಗಳನ್ನೊಳಗೊಂಡ ೮ ಜಿಲ್ಲೆಗಳನ್ನು ಉ.ಕ.ಪ್ರದೇಶವು ಹೊಂದಿದೆ. ಕರ್ನಾಟಕ ರಾಜ್ಯವು ಉದಯವಾದ ೧೯೫೬ರಿಂದೀಚೆಗೆ ಉ.ಕ.ವು ಗಣನೀಯವಾದ ಪ್ರಗತಿಯನ್ನು ಸಾಧಿಸಿದೆ ಎಂದೂ, ಹಿಂದುಳಿದಿರುವಿಕೆ ಆಧಾರದ ಮೇಲೆ ಪ್ರತ್ಯೇಕ ರಾಜ್ಯವನ್ನು ರಚಿಸಬೇಕೆಂಬ ಬೇಡಿಕೆ ಅತಾರ್ಕಿಕ ಹಾಗೂ ಅಪ್ರಸ್ತುತ ಎಂದೂ ಒಂದು ಗುಂಪು ವಾದ ಮಾಡುತ್ತಿದೆ. ಇದಕ್ಕೆ ಪ್ರತಿಯಾಗಿ ಇನ್ನೊಂದು ಗುಂಪು ಉ.ಕ.ದ ಹಿತಾಸಕ್ತಿಗಳನ್ನು ರಾಜ್ಯ ಸರ್ಕಾರ ಕಡೆಗಣಿಸುತ್ತಿದೆ ಎಂದೂ, ಉ.ಕ.ಪ್ರದೇಶವು ದ.ಕ. ಪ್ರದೇಶಕ್ಕಿಂತ ತೀರಾ ಹಿಂದುಳಿದಿದೆ ಎಂದೂ, ಉ.ಕ.ವನ್ನು ಪ್ರತ್ಯೇಕ ಪ್ರಾಂತವನ್ನಾಗಿ ಮಾಡುವುದೇ ಅಭಿವೃದ್ಧಿಯಲ್ಲಿನ ಪ್ರದೇಶವಾರು ಅಂತರಗಳ ನಿವಾರಣೆಗೆ ಪರಿಹಾರ ಎಂದೂ ಗಟ್ಟಿಯಾಗಿ ವಾದಿಸುತ್ತಿದೆ. ಸೂಕ್ಷ್ಮವಾಗಿ ಸಮಸ್ಯೆಯನ್ನು ಪರಿಶೀಲಿಸಿದಾಗ, ಈ ಎರಡೂ ಗುಂಪುಗಳ ವಾದಗಳು ಅರೆಸತ್ಯಗಳೆಂದೂ, ಅಪಕ್ವವಾದವುಗಳೆಂದೂ ತಿಳಿದುಬರುತ್ತದೆ. ಪ್ರತ್ಯೇಕತೆಯು ಅಭಿವೃದ್ಧಿಯಲ್ಲಿನ ಪ್ರದೇಶವಾರು ಅಂತರಗಳ ನಿವಾರಣೆಗೆ ಪರಿಹಾರವಲ್ಲ ಎಂಬ ಮೊದಲ ಗುಂಪಿನ ವಾದ ಹಾಗೂ ಉ.ಕ.ಪ್ರದೇಶವು ದ.ಕ.ಪ್ರದೇಶಕ್ಕಿಂತ ಹಿಂದುಳಿದಿದೆ ಎಂಬ ಎರಡನೇ ಗುಂಪಿನ ವಾದ ಸ್ವಲ್ಪಮಟ್ಟಿಗೆ ಸತ್ಯಕ್ಕೆ ಹತ್ತಿರವಾಗಿರುವಂತೆ ತೋರುತ್ತವೆ. ಆದರೆ ಅಭಿವೃದ್ಧಿಯಲ್ಲಿನ ಪ್ರದೇಶವಾರು ಅಂತರಗಳನ್ನು ಅಲ್ಲಗಳೆಯುವ ಮೊದಲ ಗುಂಪಿನ ವಾದ ಹಾಗೂ ಹಿಂದುಳಿದಿರುವಿಕೆ ಆಧಾರದ ಮೇಲೆ ಪ್ರತ್ಯೇಕ ರಾಜ್ಯದ ರಚನೆಗೆ ಒತ್ತಾಯಿಸುತ್ತಿರುವ ಎರಡನೇ ಗುಂಪಿನ ವಾದ-ಇವುಗಳು ಮಾತ್ರ ಅಪ್ರಸ್ತುತ ಹಾಗೂ ಅಸಂಗತವಾಗಿ ಕಾಣುತ್ತವೆ.

ಜನಸಂಖ್ಯೆಯ ಗತಿಶೀಲಗುಣಗಳು,

ಸಾಕ್ಷರತೆ, ಆರೋಗ್ಯ ಸೌಲಭ್ಯಗಳು ಮತ್ತು ವರಮಾನ-ಈ ನಾಲ್ಕು ಸಮಾಜೋ-ಆರ್ಥಿಕ ಸೂಚ್ಯಂಕಗಳನ್ನು ಉಪಯೋಗಿಸಿಕೊಂಡು, ಗತಿಶೀಲನೆಲೆಯಲ್ಲಿ ಕರ್ನಾಟಕ ರಾಜ್ಯವು ಎದುರಿಸುತ್ತಿರುವ ಪ್ರದೇಶವಾರು ಹಾಗೂ ವಿಭಾಗವಾರು ಅಭಿವೃದ್ಧಿ ಅಂತರಗಳ ಸಮಸ್ಯೆಯನ್ನು ಈ ಬರಹದಲ್ಲಿ ಚರ್ಚಿಸಲಾಗಿದೆ. ಪ್ರದೇಶವಾರು ಅಭಿವೃದ್ಧಿ ಅಂತರಗಳ ಮೂಲದಲ್ಲಿರುವ ಸಂಕೀರ್ಣತೆ ಹಾಗೂ ಬಹುಳತೆಗಳನ್ನು ಗಮನದಲ್ಲಿಟ್ಟುಕೊಂಡು ಕರ್ನಾಟಕದ ಅಖಂಡತೆ ಹಾಗೂ ಸಮತೂಕ ಅಭಿವೃದ್ಧಿ ಸಾಧಿಸಲು ಅಗತ್ಯವಾದ ಕ್ರಮಗಳ ಬಗ್ಗೆ ಚರ್ಚಿಸಲು ಇಲ್ಲಿ ಪ್ರಯತ್ನಿಸಲಾಗಿದೆ. ಅಧ್ಯಯನ ಹಾಗೂ ಶೈಕ್ಷಣಿಕ ಉದ್ದೇಶಗಳು ಈ ಲೇಖನದ ಹಿಂದೆ ಕೆಲಸ ಮಾಡಿವೆಯೆಂಬುದನ್ನು ಇಲ್ಲಿ ಸ್ಪಷ್ಟಪಡಿಸಲು ಇಚ್ಛಿಸುತ್ತೇವೆ.

### ಚಾರಿತ್ರಿಕ ಹಿನ್ನೆಲೆ

ಸಂಘಟಿತ ಕೈಗಾರಿಕೀಕರಣವನ್ನು ಸಾಧಿಸಿದ ರಾಜ್ಯಗಳಲ್ಲಿ ಕರ್ನಾಟಕಕ್ಕೆ ಅಗ್ರಸ್ಥಾನವಿದ್ದ ಕಾಲವೊಂದಿತ್ತು. ಪ್ರಾದೇಶಿಕವಾಗಿ ಸಮತೂಕ ಅಭಿವೃದ್ಧಿಗೆ ರಾಜ್ಯದಲ್ಲಿ ದೀರ್ಘ ಚರಿತ್ರೆ ಇದೆ. ಈ ಶತಮಾನದ ಆರಂಭದಿಂದಲೂ ನಮ್ಮ ನಾಡಿನ ಆಡಳಿತಗಾರರು ಹಾಗೂ ತಜ್ಞರು ಪ್ರಾದೇಶಿಕ ಸಮತೂಕ ಅಭಿವೃದ್ಧಿಗಾಗಿ ಶ್ರಮಿಸುತ್ತಲೇ ಬಂದಿದ್ದಾರೆ. ಕರ್ನಾಟಕದ ಉದ್ದಿಮೆ ರಂಗದ ನಿರ್ಮಾತೃಗಳಾದ ಸರ್ ಎಂ.ವಿಶ್ವೇಶ್ವರಯ್ಯ ಮತ್ತು ಸರ್ ಮಿರ್ಜಾ ಇಸ್ಮಾಯಿಲ್‌ರವರಿಬ್ಬರೂ ಅಭಿವೃದ್ಧಿಯಲ್ಲಿನ ಪ್ರದೇಶವಾರು ಅಂತರಗಳು ಉಂಟು ಮಾಡುವ ಕೆಟ್ಟ ಪರಿಣಾಮಗಳನ್ನು ಅರಿತುಕೊಳ್ಳಲು ಉತ್ಸುಕರಾಗಿದ್ದಂತೆ ಕೈಗಾರಿಕಾಭಿವೃದ್ಧಿಯಲ್ಲಿ ಪ್ರಾದೇಶಿಕ ಸಮತೂಕ ಸಾಧನೆಗೆ ಬೇಕಾದ ಕ್ರಮಗಳನ್ನು ಜಾರಿಗೊಳಿಸುವಲ್ಲಿಯೂ ಉತ್ಸುಕರಾಗಿದ್ದರು. ಅವರ ಕೈ ಮೀರಿದ ಪರಿಸ್ಥಿತಿ ಒತ್ತಡ ಹಾಗೂ ಕೆಲವು ಅನಿವಾರ್ಯ ಕಾರಣಗಳಿಂದ ಪ್ರದೇಶವಾರು ಅಭಿವೃದ್ಧಿ ಅಂತರಗಳು ಗಂಭೀರವಾಗುತ್ತಾ ಬಂದವು. ಭಾಷಾವಾರು ಪ್ರಾಂತವಾಗಿ ೧೯೫೬ರಲ್ಲಿ ಕರ್ನಾಟಕ ರಾಜ್ಯ (ಅಂದಿನ ಮೈಸೂರು ರಾಜ್ಯ) ರೂಪುಗೊಂಡಾಗ ಅಭಿವೃದ್ಧಿ ಅಂತರಗಳು ತೀವ್ರಗೊಂಡವು. ಕೇಂದ್ರ ಸರ್ಕಾರದ ಪ್ರಾದೇಶಿಕ ಸಮತೂಕ ಅಭಿವೃದ್ಧಿ ನೀತಿಗೆ ಅನುಸಾರವಾಗಿ ಉದ್ದಿಮೆಗಳನ್ನು ರಾಜ್ಯದ ಎಲ್ಲಾ ಪ್ರದೇಶಗಳಲ್ಲೂ ಸ್ಥಾಪಿಸಲು ರಾಜ್ಯ ಸರ್ಕಾರವು ಪ್ರಯತ್ನಿಸುತ್ತಾ ಬಂದಿದೆ. ಆರ್ಥಿಕ ಯೋಜನೆ ಮೂಲಕವೂ ಪ್ರಯತ್ನ ನಡೆಯುತ್ತಿದೆ. ಆದರೆ ಎಂಟು ಪಂಚವಾರ್ಷಿಕ ಯೋಜನೆಗಳು (೧೯೫೧-೧೯೯೭) ಮುಗಿದ ಮೇಲೂ ಕರ್ನಾಟಕದಲ್ಲಿನ ಪ್ರದೇಶವಾರು, ವಿಭಾಗವಾರು ಹಾಗೂ ಜಿಲ್ಲಾವಾರು ಅಭಿವೃದ್ಧಿ ಅಂತರಗಳು ತೀವ್ರ ಸಮಸ್ಯೆಯಾಗಿಬಿಟ್ಟಿವೆ.

---

**ಅಭಿವೃದ್ಧಿ ಕಾರ್ಯಕ್ರಮಗಳು ಹಾಗೂ ಅಭಿವೃದ್ಧಿ ಸಂಪನ್ಮೂಲಗಳ ಹಂಚಿಕೆಯಲ್ಲಿ ಉತ್ತರ ಕರ್ನಾಟಕ ಪ್ರದೇಶಕ್ಕೆ ಅನ್ಯಾಯ ಮಾಡಲಾಗಿದೆ ಎಂಬ ಆರೋಪವನ್ನು ಸುಲಭವಾಗಿ ತಳ್ಳಿ ಹಾಕಲು ಸಾಧ್ಯವಿಲ್ಲ. ಭಾವಾವೇಶ ಹಾಗೂ ಉದ್ರೇಕಕಾರಿ ಸಂಗತಿಗಳು ಇಲ್ಲಿ ಜಾಗೃತವಾಗಿರುವುದರಿಂದ ಇಂಥ ಆರೋಪಗಳ ಮೂಲದಲ್ಲಿ ಸಮಸ್ಯೆಯ ಸೂಕ್ಷ್ಮತೆ ಹಾಗೂ ಸಂಕೀರ್ಣತೆಗಳಿಗೆ ಸ್ಥಾನವಿಲ್ಲದಂತಾಗಿಬಿಡುತ್ತದೆ.**

---

### ಅಭಿವೃದ್ಧಿಯಲ್ಲಿ ಪ್ರದೇಶವಾರು ಅಂತರಗಳು

ಅಭಿವೃದ್ಧಿಯಲ್ಲಿನ ಪ್ರದೇಶವಾರು ಅಂತರಗಳು ಕರ್ನಾಟಕಕ್ಕೆ ಜನ್ಮತಃ ಬಂದ ರೋಗವಾಗಿದೆ. ಈ ರಾಜ್ಯವು ಉದಯವಾದ ೧೯೫೬ರಲ್ಲಿ ೧೦ ಜಿಲ್ಲೆಗಳನ್ನು ಒಳಗೊಂಡ ಹಳೇ ಮೈಸೂರು ಹಾಗೂ ೯ ಜಿಲ್ಲೆಗಳನ್ನು ಒಳಗೊಂಡ ಹೊಸ ಮೈಸೂರು ಪ್ರದೇಶಗಳು ಅಭಿವೃದ್ಧಿಯ ದೃಷ್ಟಿಯಿಂದ ವಿವಿಧ ಮಟ್ಟಗಳಲ್ಲಿದ್ದವು. ಪ್ರತಿಯೊಂದು ಪ್ರದೇಶದೊಳಗೂ ಜಿಲ್ಲೆ-ಜಿಲ್ಲೆಗಳ ನಡುವೆ ವಿಪರೀತ ಅಂತರಗಳಿದ್ದವು. ಏಕೀಕರಣದ ಸಂದರ್ಭದಲ್ಲಿ ಹಳೇ ಮೈಸೂರು ಪ್ರದೇಶವು ಹೊಸ ಮೈಸೂರು ಪ್ರದೇಶಕ್ಕಿಂತ ಬಹಳ ಮುಂದುವರಿದಿತ್ತು. ಹಳೇ ಮೈಸೂರು ಪ್ರದೇಶದಲ್ಲಿ ಬೆಂಗಳೂರು ಮತ್ತು ಮೈಸೂರು ಜಿಲ್ಲೆಗಳು ಹಾಗೂ ಹೊಸ ಮೈಸೂರು ಪ್ರದೇಶದಲ್ಲಿ ಮಂಗಳೂರು ಮತ್ತು ಬೆಳಗಾವಿ ಜಿಲ್ಲೆಗಳು ರಾಜ್ಯದ ಅಭಿವೃದ್ಧಿ ಚಟುವಟಿಕೆಗಳಲ್ಲಿ ಸಿಂಹಪಾಲು ಪಡೆದಿದ್ದವು. ಅಭಿವೃದ್ಧಿ ಕಾರ್ಯಕ್ರಮಗಳು ಹಾಗೂ ಅಭಿವೃದ್ಧಿ ಸಂಪನ್ಮೂಲಗಳ ಹಂಚಿಕೆಯಲ್ಲಿ ಉ.ಕ. ಪ್ರದೇಶಕ್ಕೆ ಅನ್ಯಾಯ ಮಾಡಲಾಗಿದೆ ಎಂಬ ಆರೋಪವನ್ನು ಸುಲಭವಾಗಿ ತಳ್ಳಿ ಹಾಕಲು ಸಾಧ್ಯವಿಲ್ಲ. ಭಾವಾವೇಶ ಹಾಗೂ ಉದ್ರೇಕಕಾರಿ ಸಂಗತಿಗಳು ಇಲ್ಲಿ ಜಾಗೃತವಾಗಿರುವುದರಿಂದ ಇಂಥ ಆರೋಪಗಳ ಮೂಲದಲ್ಲಿ ಸಮಸ್ಯೆಯ ಸೂಕ್ಷ್ಮತೆ ಹಾಗೂ ಸಂಕೀರ್ಣತೆಗಳಿಗೆ ಸ್ಥಾನವಿಲ್ಲದಂತಾಗಿಬಿಡುತ್ತದೆ. ಈ ಬಗೆಯ ದುಡುಕಿನ ಆರೋಪಗಳಲ್ಲಿ ಉ.ಕ. ಪ್ರದೇಶದೊಳಗೆ ಇರುವ ವಿಭಾಗವಾರು ಅಭಿವೃದ್ಧಿ ಅಂತರಗಳು ಮೂಲೆಗೆ ಸರಿದುಬಿಡುತ್ತವೆ. ವಾಸ್ತವವಾಗಿ ವಿಭಾಗಗಳ ನಡುವಿನ ಅಭಿವೃದ್ಧಿ ಅಂತರಗಳ ನಿವಾರಣೆಯು ಬಹಳ ಮುಖ್ಯವಾದುದಾಗಿದೆ.

ದ.ಕ. ಮತ್ತು ಉ.ಕ. ಪ್ರದೇಶಗಳನ್ನು ಏಕರೂಪಿ ಘಟಕಗಳನ್ನಾಗಿ ಪರಿಭಾವಿಸುವುದು ಸಾಧುವಲ್ಲ. ಏಕೆಂದರೆ ಪ್ರತಿಯೊಂದು ಪ್ರದೇಶದೊಳಗೂ ಅನೇಕ ಬಗೆಯ ವೈವಿಧ್ಯಗಳಿವೆ. ಕರ್ನಾಟಕದ ಸಂದರ್ಭದಲ್ಲಿ ದ.ಕ. ಮತ್ತು ಉ.ಕ. ಪ್ರದೇಶಗಳ ನಡುವಿನ ಅಭಿವೃದ್ಧಿ ಅಂತರಗಳಿಗಿಂತ ಉ.ಕ. ಪ್ರದೇಶದೊಳಗಿನ ಗುಲಬರ್ಗಾ ವಿಭಾಗದ ಅರ್ಥಾತ್ ಹೈದರಾಬಾದ-ಕರ್ನಾಟಕ ಪ್ರದೇಶದ ಅಭಿವೃದ್ಧಿ ಸಮಸ್ಯೆಗಳು ಆತಂಕಕ್ಕೆ ಕಾರಣವಾಗಬೇಕು.

### ಜನಸಂಖ್ಯೆಯ ಗತಿಶೀಲತೆ

ಜನಸಂಖ್ಯೆಯ ದೃಷ್ಟಿಯಿಂದ ದ.ಕ.ಪ್ರದೇಶವು (ಶೇ ೫೭.೨೪) ಉ.ಕ.ಪ್ರದೇಶಕ್ಕಿಂತ (ಶೇ ೪೨.೭೬) ಹೆಚ್ಚು ಜನಸಾಂದ್ರ ಪ್ರದೇಶವಾಗಿದೆ. ಆದರೆ ಭೌಗೋಳಿಕವಾಗಿ ಉ.ಕ. ಪ್ರದೇಶವು (ಶೇ ೫೨.೧೮) ದ.ಕ.ಪ್ರದೇಶಕ್ಕಿಂತ ದೊಡ್ಡದಾಗಿದೆ.

ದ.ಕ. ಪ್ರದೇಶದಲ್ಲಿ ಜನಸಾಂದ್ರತೆ ಪ್ರತಿ ಚದರ ಕಿಲೊಮೀಟರ್‌ಗೆ ೨೭೮ ಇದ್ದರೆ ಉ.ಕ. ಪ್ರದೇಶದಲ್ಲಿ ಜನಸಾಂದ್ರತೆಯು ಕೇವಲ ೧೯೧ (೧೯೯೦-೯೧). ಉ.ಕ.ಪ್ರದೇಶದಲ್ಲಿ ಜನ ಸಂಖ್ಯೆಯ ದಶಕವಾರು ಬೆಳೆವಣಿಗೆ ಪ್ರಮಾಣವು ದ.ಕ. ಪ್ರದೇಶದಲ್ಲಿನ ಜನಸಂಖ್ಯೆಯ ಬೆಳೆವಣಿಗೆ ಪ್ರಮಾಣಕ್ಕಿಂತ ಅಧಿಕವಿದ್ದರೂ ಸಹ ೧೯೬೦-೬೧ ರಿಂದ ೧೯೯೦-೯೧ರ ಅವಧಿಯಲ್ಲಿ ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಉ.ಕ. ಪ್ರದೇಶದ ಪಾಲು ಶೇ ೪೩.೯೪ ರಿಂದ ಶೇ ೪೨.೭೬ಕ್ಕೆ ಇಳಿದಿರುವುದು ಅಚ್ಚರಿಯ ಸಂಗತಿಯಾಗಿದೆ. ಕಳೆದ ಮೂರು ದಶಕಗಳ ಕಾಲಾವಧಿಯಲ್ಲಿ ಇವೆರಡೂ ಪ್ರದೇಶಗಳಲ್ಲಿ ಜನಸಂಖ್ಯೆಯ ಬೆಳೆವಣಿಗೆ ಪ್ರಮಾಣ ಇಳಿದಿದೆ ಎಂಬುದು ನಿಜ. ಆದರೆ ಈ ಇಳಿತವು ೧೯೬೦-೬೧ರಿಂದ ೧೯೯೦-೯೧ರ ಅವಧಿಯಲ್ಲಿ ದ.ಕ. ಪ್ರದೇಶದಲ್ಲಿ ಶೇ ೨೩.೧೫ ಇದ್ದರೆ ಉ.ಕ. ಪ್ರದೇಶದಲ್ಲಿ ಇಳಿತ ಕೇವಲ ಶೇ ೦.೮೪. ಜನಸಂಖ್ಯೆಯ ಬೆಳೆವಣಿಗೆಯ ಗತಿಶೀಲತೆಯ ವಿಶ್ವಾಸಾರ್ಹ ಸೂಚ್ಯಂಕವಾದ ಜನನ ದರವು ಸಹ ಎರಡೂ ಪ್ರದೇಶಗಳಲ್ಲಿ ವಿವಿಧ ಗತಿಯಲ್ಲಿ ಇಳಿದಿದೆ. ೧೯೭೪-೮೦ರಿಂದ ೧೯೮೪-೯೦ರ ಅವಧಿಯಲ್ಲಿ ದ.ಕ. ಪ್ರದೇಶದಲ್ಲಿ ಜನನ ದರವು ಶೇ ೨೮.೮೫ರಷ್ಟು ಇಳಿದಿದ್ದರೆ ಉ.ಕ. ಪ್ರದೇಶದಲ್ಲಿ ಜನನ ದರವು ಶೇ ೭.೬೧ರಷ್ಟು ಇಳಿದಿದೆ.

### ಸಾಕ್ಷರತಾ ಪ್ರಮಾಣ

ಸಾಕ್ಷರತೆಯು ಒಂದು ಪ್ರದೇಶದ ಸ್ವಯಂ ಪೋಷಿತ ಮಾನವ ಅಭಿವೃದ್ಧಿಯ ಸೂಚ್ಯಂಕವೂ, ಸಾಧನವೂ ಆಗಿದೆ. ಕರ್ನಾಟಕದಲ್ಲಿ ಪ್ರದೇಶವಾರು ಹಾಗೂ ಪ್ರದೇಶದೊಳಗೆ ವಿಭಾಗವಾರು ಹಾಗೂ ವಿಭಾಗದೊಳಗೆ ಜಿಲ್ಲಾವಾರು ಸಾಕ್ಷರತಾ ಅಂತರಗಳು ತೀವ್ರವಾಗಿವೆ. ಕಳೆದ ೩ ದಶಕಗಳಲ್ಲಿ ಅಂದರೆ ೧೯೬೦-೬೧ರಿಂದ ೧೯೯೦-೯೧ರ ಅವಧಿಯಲ್ಲಿ ದ.ಕ.

# ಬಡತನದ ಲಿಂಗೀಕರಣ ಮತ್ತು ಕೃಷಿ ಕಾರ್ಮಿಕರ ಪ್ರಮಾಣ

ಅಭಿವೃದ್ಧಿ-ಬಡತನಗಳ ಲಿಂಗ ಸ್ವರೂಪ ಹಾಗೂ ಕೃಷಿ ಕಾರ್ಮಿಕರ ಪ್ರಮಾಣ - ಇವುಗಳ ಆಧಾರದ ಮೇಲೆ ಪ್ರತ್ಯೇಕ ರಾಜ್ಯ ಬೇಡಿಕೆಯು ಹೇಗೆ ಅರ್ಥಹೀನ ಮತ್ತು ಅಪ್ರಸ್ತುತ ಎಂಬುದನ್ನು ತೋರಿಸಬಹುದಾಗಿದೆ. ಅಭಿವೃದ್ಧಿಯು ಮೂಲಭೂತವಾಗಿ ಏಕ ಲಿಂಗ ಮುಖಿಯಾಗಿರುತ್ತದೆ. ಅಭಿವೃದ್ಧಿಯ ಪ್ರದೇಶವಾರು ಅಂತರಗಳ ಚರ್ಚೆಯಲ್ಲಿ ಪ್ರತ್ಯೇಕತಾವಾದಿಗಳು ಲಿಂಗ ಸಂಬಂಧ, ಕೃಷಿ ಕಾರ್ಮಿಕರ ಪ್ರಮಾಣ, ಸ್ತ್ರೀ-ಪುರುಷರ ನಡುವಿನ ಸಾಕ್ಷರತಾ ಅಂತರ ಮುಂತಾದ ಸೂಕ್ಷ್ಮ ಸಂಗತಿಗಳನ್ನು ಪರಿಗಣಿಸುವುದಿಲ್ಲ.

ಬಡತನ, ಹಸಿವು, ನಿರುದ್ಯೋಗ ಮುಂತಾದವು ಉಲ್ಬಣ ಸ್ಥಿತಿಯಲ್ಲಿರುವ ಸಂದರ್ಭದಲ್ಲಿ, ಅವುಗಳ ನಿರ್ವಹಣೆ ಜವಾಬ್ದಾರಿ ಮಹಿಳೆಯರ ಮೇಲೆ ಬೀಳುತ್ತದೆ ಎಂಬುದು ಈಗಾಗಲೇ ಅಧ್ಯಯನಗಳಿಂದ ದೃಢಪಟ್ಟಿದೆ. ಕೆಳಗೆ ನೀಡಿರುವ ಕೋಷ್ಟಕ ೧ ನೋಡಿ.

ದುಡಿಮೆಯಲ್ಲಿ ಮಹಿಳೆಯರ ಸಹ ಭಾಗಿತ್ವದ ಪ್ರಮಾಣ ಉಳಿದೆಲ್ಲಾ ವಿಭಾಗಗಳಿಗಿಂತ ಗುಲಬರ್ಗಾ ವಿಭಾಗ ದಲ್ಲಿ, ಅಂದರೆ ಹೈದರಾಬಾದ್-ಕರ್ನಾಟಕ ಪ್ರದೇಶದಲ್ಲಿ ಅಧಿಕವಿದೆ. ಇದೇ ರೀತಿ ಸ್ತ್ರೀ-ಪುರುಷರ ನಡುವಿನ ಸಾಕ್ಷರತಾ ಅಂತರವೂ ಸಹ ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಅಧಿಕವಿದೆ. ಇವು ಏನನ್ನು ಸೂಚಿಸುತ್ತವೆ? ಮಹಿಳೆಯರ ಸ್ಥಾನಮಾನ, ಅವಳ ಸ್ವಾತಂತ್ರ್ಯ ಉತ್ತಮವಾಗಿರುವುದನ್ನು ಇವು ಸಂಕೇತಿಸುತ್ತವೆಯೆ? ಹೀಗೆಂದು ಸ್ತ್ರೀವಾದಿಗಳು ವಾದಿಸಿಬಿಡಬಹುದು. ಆದರೆ ವಾಸ್ತವ ಸ್ಥಿತಿ ಹೀಗಿಲ್ಲ!

ಹೈದರಾಬಾದ್-ಕರ್ನಾಟಕ ಪ್ರದೇಶದ ಸಂದರ್ಭದಲ್ಲಿ ಇವು ಬಡತನದ ತೀವ್ರತೆಯ ಸಂಕೇತಗಳಾಗಿವೆ. ಇಲ್ಲಿ ಮಹಿಳೆಯರಿಗೆ ದುಡಿಮೆಯು ಆಯ್ಕೆಯಾಗಿಲ್ಲ. ಅದು ಅನಿವಾರ್ಯ ಜವಾಬ್ದಾರಿಯಾಗಿದೆ. ಮಹಿಳೆಯರ ದುಡಿಮೆಯಲ್ಲಿ ಸಹಭಾಗಿತ್ವ ಅಧಿಕ

ಕೋಷ್ಟಕ-೧

**ದುಡಿಮೆಯಲ್ಲಿ ಮಹಿಳೆಯರ ಸಹಭಾಗಿತ್ವ ಮತ್ತು ಸಾಕ್ಷರತಾ ಅಂತರ**

| ವಿಭಾಗಗಳು | ದುಡಿಮೆಯಲ್ಲಿ ಮಹಿಳೆಯರ ಸಹಭಾಗಿತ್ವ ಪ್ರಮಾಣ (ಶೇಕಡ) | ಸ್ತ್ರೀ-ಪುರುಷರ ನಡುವಿನ ಸಾಕ್ಷರತಾ ಅಂತರ ಶೇಕಡ (೧೯೯೧) | | |
|---|---|---|---|---|
| | | ಪುರುಷರು | ಸ್ತ್ರೀಯರು | ಅಂತರ |
| ಬೆಂಗಳೂರು ವಿಭಾಗ | ಶೇ ೧೯.೬೬ | ಶೇ ೭೧.೪೮ | ಶೇ ೫೦.೮೨ | ಶೇ ೨೯.೩೨ |
| ಬೆಳಗಾವಿ ವಿಭಾಗ | ಶೇ ೨೨.೧೪ | ಶೇ ೬೯.೯೯ | ಶೇ ೪೩.೧೦ | ಶೇ ೩೮.೪೧ |
| ಗುಲಬರ್ಗಾ ವಿಭಾಗ | ಶೇ ೩೦.೦೦ | ಶೇ ೫೪.೦೧ | ಶೇ ೨೬.೫೨ | ಶೇ ೫೦.೮೯ |
| ಮೈಸೂರು ವಿಭಾಗ | ಶೇ ೨೩.೪೨ | ಶೇ ೬೭.೭೯ | ಶೇ ೪೯.೧೫ | ಶೇ ೨೭.೪೯ |
| ಕರ್ನಾಟಕ ರಾಜ್ಯ | ಶೇ ೨೨.೯೬ | ಶೇ ೬೭.೨೬ | ಶೇ ೪೪.೩೪ | ಶೇ ೩೪.೦೭ |

ಪ್ರದೇಶದಲ್ಲಿನ ಸಾಕ್ಷರತಾ ಪ್ರಮಾಣವು ಉ.ಕ. ಪ್ರದೇಶದಲ್ಲಿನ ಸಾಕ್ಷರತಾ ಪ್ರಮಾಣಕ್ಕಿಂತ ಉನ್ನತವಾಗಿತ್ತು. ಈ ಅವಧಿಯಲ್ಲಿ ದ.ಕ. ದಲ್ಲಿ ಸಾಕ್ಷರತೆ ಪ್ರಮಾಣವು ಶೇ ೨೬.೩೯ ರಿಂದ ಶೇ ೫೮.೮೧ಕ್ಕೆ ಏರಿಕೆಯಾಗಿದ್ದರೆ ಇದೇ ಅವಧಿಯಲ್ಲಿ ಉ.ಕ.ದಲ್ಲಿ ಸಾಕ್ಷರತೆಯು ಶೇ ೨೨.೮೭ರಿಂದ ಶೇ ೪೯.೮೫ಕ್ಕೆ ಏರಿಕೆಯಾಗಿದೆ. ಸಾಕ್ಷರತಾ ಸಮಾನತಾ ಸೂಚ್ಯಂಕದ ದೃಷ್ಟಿಯಿಂದ ೧೯೬೦-೬೧ ಹಾಗೂ ೧೯೯೦-೯೧ ಇವೆರಡೂ ಕಾಲಘಟ್ಟಗಳಲ್ಲಿ ಸೂಚ್ಯಂಕ ದ.ಕ. ಪ್ರದೇಶದಲ್ಲಿ ೧೦೩.೮೯ರಿಂದ ೧೦೪.೯೪ಕ್ಕೆ ಏರಿಕೆಯಾಗಿದ್ದರೆ ಉ.ಕ. ಪ್ರದೇಶದಲ್ಲಿ ಅದು ೯೦.೦೩ರಿಂದ ೮೯.೯೧ಕ್ಕೆ ಇಳಿದಿದೆ.

೧೯೬೦-೬೧ ಮತ್ತು ೧೯೯೦-೯೧ರ ಅವಧಿಯಲ್ಲಿ ಬೆಂಗಳೂರು, ಮೈಸೂರು ಮತ್ತು ಬೆಳಗಾವಿ ವಿಭಾಗಗಳಲ್ಲಿ ಸಾಕ್ಷರತಾ ಸಮಾನತಾ ಸೂಚ್ಯಂಕಗಳು ಕ್ರಮವಾಗಿ ೧೦೩.೪೭, ೧೦೩.೫೮ ಮತ್ತು ೧೧೫.೩೯ ಹಾಗೂ ೧೦೩.೫೬,೧೦೬.೩೩ ಮತ್ತು ೧೦೪.೧೭ ಆಗಿದ್ದವು. ಈ ಅವಧಿಯಲ್ಲಿ ಗುಲಬರ್ಗಾ ವಿಭಾಗದಲ್ಲಿನ ಸೂಚ್ಯಂಕವು ೬೪.೭೫ ಮತ್ತು ೭೩.೬೭ ಅಗಿತ್ತು. ಇದರಿಂದ ಸ್ಪಷ್ಟವಾಗುವುದೇನೆಂದರೆ ಏಕೀಕರಣದ ನಂತರದ ಕಾಲಾವಧಿಯಲ್ಲಿ ಬೆಂಗಳೂರು, ಮೈಸೂರು ಮತ್ತು ಬೆಳಗಾವಿ ವಿಭಾಗಗಳಲ್ಲಿ ಸಾಕ್ಷರತಾ ಸಮಾನತಾ ಸೂಚ್ಯಂಕವು ಸಮಾಂಕ ೧೦೦ಕ್ಕಿಂತ ಅಧಿಕವಿದ್ದರೆ ಗುಲಬರ್ಗಾ ವಿಭಾಗದ ಸೂಚ್ಯಂಕವು ಸಮಾಂಕ ೧೦೦ಕ್ಕಿಂತ ಕಡಿಮೆ ಇದೆ.

ಇದೇ ಪ್ರಕಾರ ಸ್ತ್ರೀ-ಪುರುಷರ ನಡುವಿನ ಸಾಕ್ಷರತಾ ಅಂತರವು ಬೆಂಗಳೂರು, ಮೈಸೂರು ಮತ್ತು ಬೆಳಗಾವಿ ವಿಭಾಗಗಳಲ್ಲಿ ಕ್ರಮವಾಗಿ ಶೇ ೧೯.೫೯, ಶೇ ೧೮.೬೪ ಮತ್ತು ಶೇ ೨೬.೮೯ ಇದ್ದರೆ ಗುಲಬರ್ಗಾ ವಿಭಾಗದಲ್ಲಿ ಇದು ಅತ್ಯಧಿಕ ಶೇ ೨೭.೪೯ ಇದೆ. ೧೯೯೧ರ ಜನಗಣತಿ ಪ್ರಕಾರ ಗುಲಬರ್ಗಾ ವಿಭಾಗದಲ್ಲಿ ಗ್ರಾಮೀಣ ಮಹಿಳೆಯರ ಸಾಕ್ಷರತಾ ಪ್ರಮಾಣವು ಕೇವಲ ಶೇ ೧೬.

ಕೋಷ್ಟಕ-೨

**ಕೃಷಿ ಕಾರ್ಮಿಕರ ಪ್ರಮಾಣ**

| ವಿಭಾಗಗಳು | ಒಟ್ಟು ದುಡಿಯುವ ವರ್ಗದಲ್ಲಿ ಕೃಷಿ ಕಾರ್ಮಿಕರ ಪ್ರಮಾಣ | | ಒಟ್ಟು ಕೃಷಿ ಕಾರ್ಮಿಕರಲ್ಲಿ ಮಹಿಳೆಯರ ಪ್ರಮಾಣ |
|---|---|---|---|
| | ೧೯೬೧ | ೧೯೯೧ | ೧೯೯೧ |
| ಬೆಂಗಳೂರು ವಿಭಾಗ | ಶೇ ೬೯.೧೯ | ಶೇ ೬೨.೦೦ | ಶೇ ೪೦.೨೯ |
| ಬೆಳಗಾವಿ ವಿಭಾಗ | ಶೇ ೭೦.೫೪ | ಶೇ ೬೬.೫೫ | ಶೇ ೫೫.೩೬ |
| ಗುಲಬರ್ಗಾ ವಿಭಾಗ | ಶೇ ೭೩.೮೪ | ಶೇ ೭೬.೦೦ | ಶೇ ೬೯.೪೦ |
| ಮೈಸೂರು ವಿಭಾಗ | ಶೇ ೬೬.೯೭ | ಶೇ ೫೭.೮೪ | ಶೇ ೩೨.೮೩ |
| ಕರ್ನಾಟಕ ರಾಜ್ಯ | ಶೇ ೭೦.೫೫ | ಶೇ ೬೩.೧೨ | ಶೇ ೪೯.೦೬ |

ವಾಗಿರುವುದು ಹಾಗೂ ಅಲ್ಲಿ ಸ್ತ್ರೀ-ಪುರುಷರ ನಡುವಿನ ಸಾಕ್ಷರತಾ ಅಂತರ ಅಧಿಕವಾಗಿರುವುದು-ಇವುಗಳ ನಡುವೆ ಸಂಬಂಧವಿದೆ. ದುಡಿಮೆಯಲ್ಲಿ ಮಹಿಳೆಯರು ಹೆಚ್ಚು ಪಾಲುಗೊಳ್ಳುತ್ತಿರುವುದರಿಂದ ಅವರ ಸಾಕ್ಷರತಾ ಪ್ರಮಾಣವು ಹೈದರಾಬಾದ್-ಕರ್ನಾಟಕ ಪ್ರದೇಶದಲ್ಲಿ ಅತ್ಯಂತ ಕೆಳಮಟ್ಟದಲ್ಲಿದೆ.

ಕರ್ನಾಟಕದಲ್ಲಿ ಒಟ್ಟು ಕೃಷಿ ಕಾರ್ಮಿಕರ ಪ್ರಮಾಣದ ವಿವರವನ್ನು ಕೋಷ್ಟಕ-೨ರಲ್ಲಿ ನೀಡಿದೆ.

ಕರ್ನಾಟಕದಲ್ಲಿ ಒಟ್ಟು ದುಡಿಯುವ ವರ್ಗದಲ್ಲಿ (ಪ್ರಧಾನ) ಕೃಷಿ ಕಾರ್ಮಿಕರ ಪ್ರಮಾಣವು ಗುಲಬರ್ಗಾ ವಿಭಾಗದಲ್ಲಿ ಅತ್ಯಧಿಕವಿದೆ. ಇದಕ್ಕಿಂತ ಮುಖ್ಯವಾದ ಸಂಗತಿಯೆಂದರೆ ೧೯೬೧ರಿಂದ ೧೯೯೧ರ ಅವಧಿಯಲ್ಲಿ ಕರ್ನಾಟಕದ ಮೂರು ವಿಭಾಗಗಳಲ್ಲಿ ಅಂದರೆ ಬೆಂಗಳೂರು, ಬೆಳಗಾವಿ ಹಾಗೂ ಮೈಸೂರು ವಿಭಾಗಗಳಲ್ಲಿ ಕೃಷಿ ಕಾರ್ಮಿಕ ಪ್ರಮಾಣ ಕಡಿಮೆಯಾಗುತ್ತಿದ್ದರೆ ಗುಲಬರ್ಗಾ ವಿಭಾಗದಲ್ಲಿ ಅದು ಅಧಿಕಗೊಳ್ಳುತ್ತಿದೆ. ಒಟ್ಟು ಕೃಷಿ ಕಾರ್ಮಿಕರಲ್ಲಿ ಮಹಿಳೆಯರ ಪ್ರಮಾಣವು ಅಧಿಕವಾಗಿರುವುದೂ ಸಹ ಗುಲಬರ್ಗಾ ವಿಭಾಗದಲ್ಲಿ ಎಂಬುದು ಇಲ್ಲಿ ಮುಖ್ಯ.

ದುಡಿಮೆಯಲ್ಲಿ ಮಹಿಳೆಯರ ಸಹಭಾಗಿತ್ವ ಮತ್ತು ಕೃಷಿ ಕಾರ್ಮಿಕರಲ್ಲಿ ಮಹಿಳೆಯರ ಪ್ರಮಾಣ-ಇವು ಹೈದರಾಬಾದ್ ಕರ್ನಾಟಕ ಪ್ರದೇಶದ ಸಂದರ್ಭದಲ್ಲಿ ಬಡತನದ ಲಿಂಗ ಸ್ವರೂಪವನ್ನು ತೋರಿಸುತ್ತವೆ. ಪ್ರತ್ಯೇಕ ರಾಜ್ಯದ ರಚನೆಯು ಅಭಿವೃದ್ಧಿ-ಬಡತನಗಳ ಮೂಲದಲ್ಲಿರುವ ಈ ಬಗೆಯ ವಿಕೃತಿ-ವಿಕಾರಗಳನ್ನು ಸರಿಪಡಿಸಲಾರದು. ಲಿಂಗ ತಾರತಮ್ಯ, ಮಹಿಳೆಯರ ಶೋಷಣೆ, ಭೂಮಾಲೀಕತ್ವದಲ್ಲಿನ ಅಸಮಾನತೆ, ಅವರ ಅಟ್ಟಹಾಸ ಮುಂತಾದವುಗಳ ದೃಷ್ಟಿಯಿಂದ ಪ್ರತ್ಯೇಕ ರಾಜ್ಯದ ಬೇಡಿಕೆಯು ಅರ್ಥಹೀನ. ಏಕೆಂದರೆ ಇವೆಲ್ಲಾ ಪ್ರತ್ಯೇಕ ರಾಜ್ಯ ರಚನೆಯಿಂದ ನಿವಾರಣೆಯಾಗಬಲ್ಲ ಸಮಸ್ಯೆಗಳಲ್ಲ. ಆದ್ದರಿಂದ ಅಭಿವೃದ್ಧಿಯ ಮೂಲದಲ್ಲಿರುವ ಸೂಕ್ಷ್ಮ ಸಂಕೀರ್ಣ ಸಂಗತಿ ಕಡೆ ನಮ್ಮ ಗಮನ ಹರಿಯಬೇಕಾಗಿದೆ.

**- ಡಾ. ಶೌಕತ್ ಅಝೀಮ್**

ಅಧ್ಯಾಪಕರು, ಅಭಿವೃದ್ಧಿ ಅಧ್ಯಯನ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ, ಬಳ್ಳಾರಿ ಜಿಲ್ಲೆ.

**ಉತ್ತರ ಕರ್ನಾಟಕ ಪ್ರದೇಶವನ್ನು ಪ್ರತ್ಯೇಕ ರಾಜ್ಯವನ್ನಾಗಿ ಮಾಡಬೇಕೆಂಬ ಬೇಡಿಕೆಯು ರಾಜಕೀಯವಾಗಿಯೂ ಸ್ವಾಗತಾರ್ಹವಾಗಿಲ್ಲ ಮತ್ತು ಆರ್ಥಿಕವಾಗಿಯೂ ಸ್ವಾಗತಾರ್ಹವಾಗಿಲ್ಲ.**

### ಆರೋಗ್ಯ ಸೌಲಭ್ಯಗಳು

ಆರೋಗ್ಯ ಸೌಲಭ್ಯಗಳ ಹಂಚಿಕೆ ದೃಷ್ಟಿಯಿಂದ ದ.ಕ. ಮತ್ತು ಉ.ಕ. ಪ್ರದೇಶಗಳ ನಡುವೆ ಜನಸಂಖ್ಯೆ ಹಂಚಿಕೆಗನುಗುಣವಾದ ಸಮಾನತೆ ಇರುವಂತೆ ಕಂಡುಬರುತ್ತದೆ. ೧೯೯೪ರಲ್ಲಿ ಇಡೀ ರಾಜ್ಯದಲ್ಲಿ ಸಮುದಾಯ ಆರೋಗ್ಯ ಕೇಂದ್ರಗಳು, ಪ್ರಾಥಮಿಕ ಆರೋಗ್ಯ ಕೇಂದ್ರಗಳು, ICDS ಘಟಕಗಳು ಮತ್ತು ಉಪ ಕೇಂದ್ರಗಳಲ್ಲಿ ದ.ಕ. ಪ್ರದೇಶದ ಪಾಲು ಕ್ರಮವಾಗಿ ಶೇ ೫೪.೭೧, ಶೇ ೫೭.೯೩, ಶೇ ೫೬.೦೯ ಮತ್ತು ಶೇ ೫೯.೫೮ ಇದ್ದರೆ ಉ.ಕ. ಪ್ರದೇಶದ ಪಾಲು ಶೇ ೪೫.೨೯, ಶೇ ೪೨.೦೭, ಶೇ ೪೦.೪೨ ಮತ್ತು ಶೇ ೪೩,೯೧ ಇದ್ದಿತು. ಒಟ್ಟಾರೆ ದ.ಕ. ಮತ್ತು ಉ.ಕ. ಪ್ರದೇಶಗಳ ಆರೋಗ್ಯ ಸೌಲಭ್ಯಗಳಲ್ಲಿನ ಪಾಲು ಈ ಪ್ರದೇಶಗಳ ಜನಸಂಖ್ಯೆಯ ಪಾಲಿಗೆ ಅನುಸಾರವಾಗಿ ಇರುವಂತೆ ಕಾಣುತ್ತದೆ. ಆದರೆ ಇದೇ ಸಂಗತಿಯನ್ನು ಈ ಪ್ರದೇಶಗಳಲ್ಲಿನ ಜನಸಂಖ್ಯೆ ಮತ್ತು ವೈದ್ಯಕೀಯ ಸಂಸ್ಥೆಗಳು ಹಾಗೂ ಜನಸಂಖ್ಯೆ ಮತ್ತು ಆಸ್ಪತ್ರೆ ಹಾಸಿಗೆಗಳ ನಡುವಿನ ಅನುಪಾತಗಳ ಬಗ್ಗೆ ಹೇಳಲು ಸಾಧ್ಯವಿಲ್ಲ. ೧೯೯೩-೯೪ರಲ್ಲಿ ದ.ಕ. ಪ್ರದೇಶದಲ್ಲಿ ಪ್ರತಿ ೧೬,೦೦೦ ಜನರಿಗೆ ಒಂದು ವೈದ್ಯಕೀಯ ಸಂಸ್ಥೆಯಿದ್ದರೆ ಉ.ಕ. ಪ್ರದೇಶದಲ್ಲಿ ಪ್ರತಿ ೨೨,೦೦೦ ಜನರಿಗೆ ಒಂದು ವೈದ್ಯಕೀಯ ಸಂಸ್ಥೆ ಇದೆ. ಇದೇ ರೀತಿ ದ.ಕ.ದಲ್ಲಿ ಪ್ರತಿ ಒಂದು ಲಕ್ಷ ಜನರಿಗೆ ೧೦೨ ಆಸ್ಪತ್ರೆ ಹಾಸಿಗೆಗಳಿದ್ದರೆ ಉ.ಕ.ದಲ್ಲಿ ಪ್ರತಿ ಒಂದು ಲಕ್ಷ ಜನರಿಗೆ ಕೇವಲ ೭೦ ಆಸ್ಪತ್ರೆ ಹಾಸಿಗೆಗಳಿವೆ.

ಸಾಕ್ಷರತೆಗೆ ಸಂಬಂಧಿಸಿ ಹೇಳಿದಂತೆ ಆರೋಗ್ಯ ಸೌಲಭ್ಯ ಕುರಿತಂತೆ ಸಹ ಗುಲಬರ್ಗಾ ವಿಭಾಗದಲ್ಲಿ ಆರೋಗ್ಯ ಸೌಲಭ್ಯಗಳು ಉಳಿದೆಲ್ಲಾ ವಿಭಾಗಗಳಿಗಿಂತ ನಿಕೃಷ್ಟವಾಗಿವೆ ಎಂದು ಹೇಳಬಹುದು. ಗುಲಬರ್ಗಾ ವಿಭಾಗದಲ್ಲಿ ಪ್ರತಿ ೨೩,೦೦೦ ಜನರಿಗೆ ಒಂದು ಆಸ್ಪತ್ರೆ ಹಾಗೂ ಪ್ರತಿ ಒಂದು ಲಕ್ಷ ಜನರಿಗೆ ೬೨ ಆಸ್ಪತ್ರೆ ಹಾಸಿಗೆಗಳಿವೆ.

### ವರಮಾನ ಹಂಚಿಕೆ

೧೯೬೦-೬೧ರಿಂದ ೧೯೯೨-೯೩ರ ಕಾಲಾವಧಿಯಲ್ಲಿ ಕರ್ನಾಟಕ ರಾಜ್ಯದ ಆಂತರಿಕ ಉತ್ಪನ್ನ (SDP)ದಲ್ಲಿ ದ.ಕ. ಪ್ರದೇಶದ ಪಾಲು ಶೇ ೬೦.೭೬ ರಿಂದ ಶೇ ೬೪.೧೬ಕ್ಕೆ ಏರಿಕೆಯಾಗಿದ್ದರೆ ಉ.ಕ.ದ ಪಾಲು ಶೇ ೩೯.೨೪ ರಿಂದ ಶೇ ೩೫.೮೪ಕ್ಕೆ ಇಳಿದಿದೆ. ರಾಜ್ಯ ಆಂತರಿಕ ಉತ್ಪನ್ನದಲ್ಲಿನ ಎರಡೂ ಪ್ರದೇಶಗಳ ಪಾಲನ್ನೂ ಈ ಪ್ರದೇಶಗಳ ಜನಸಂಖ್ಯೆಯ ಪಾಲಿನ ಜೊತೆ ತುಲನೆ ಮಾಡಿದಾಗ ದ.ಕ. ಪ್ರದೇಶವು ತಾನು ಜನಸಂಖ್ಯೆಯಲ್ಲಿ ಪಡೆದಿರುವ ಪಾಲಿಗಿಂತ ಸಾಪೇಕ್ಷವಾಗಿ ಅಧಿಕ ಪಾಲನ್ನು ವರಮಾನದಲ್ಲಿ ಪಡೆದಿದ್ದರೆ ಉ.ಕ. ಪ್ರದೇಶವು ತಾನು ಜನಸಂಖ್ಯೆಯಲ್ಲಿ ಪಡೆದಿರುವ ಪಾಲಿಗಿಂತ ಸಾಪೇಕ್ಷವಾಗಿ ಕಡಿಮೆ ಪಾಲನ್ನು ವರಮಾನದಲ್ಲಿ ಪಡೆದಿರುವುದು ತಿಳಿದು ಬರುತ್ತದೆ. ಆತಂಕಕ್ಕೆ ಕಾರಣವಾಗಿರುವ ಸಂಗತಿಯೆಂದರೆ ರಾಜ್ಯ ಆಂತರಿಕ ಉತ್ಪನ್ನದಲ್ಲಿ ದ.ಕ. ಪ್ರದೇಶದ ಪಾಲು ಏರಿಕೆಯಾಗುತ್ತಿದೆ ಮತ್ತು ಉ.ಕ. ಪ್ರದೇಶದ ಪಾಲು ಕಡಿಮೆಯಾಗುತ್ತಿದೆ. ಸಾಂಖ್ಯಿಕವಾಗಿ ಹೇಳುವುದಾದರೆ ೧೯೬೦-೬೧ ಮತ್ತು ೧೯೯೨-೯೩ರ ಅವಧಿಯಲ್ಲಿ ದ.ಕ. ಪ್ರದೇಶಕ್ಕೆ ಸಂಬಂಧಿಸಿದ ವರಮಾನ ಸಮಾನತಾ ಸೂಚ್ಯಂಕವು ೧೦೮ ರಿಂದ ೧೧೨ ಕ್ಕೆ ಏರಿಕೆಯಾಗಿದ್ದರೆ ಇದೇ ಅವಧಿಯಲ್ಲಿ ಉ.ಕ. ಪ್ರದೇಶದ ಸೂಚ್ಯಂಕವು ೮೯ ರಿಂದ ೮೩ಕ್ಕೆ ಇಳಿದಿದೆ. ಸೂಚ್ಯಂಕಗಳು ಪ್ರದೇಶದೊಳಗಿನ ವಿಭಾಗವಾರು ಅಂತರಗಳನ್ನು ತೋರಿಸುವುದಿಲ್ಲ. ೧೯೬೦-೬೧ರಿಂದ ೧೯೯೨-೯೩ರ ಅವಧಿಯಲ್ಲಿ ಬೆಳಗಾವಿ ವಿಭಾಗದ ವರಮಾನ ಸಮಾನತಾ ಸೂಚ್ಯಂಕವು ೧೦೧.೨೩ ರಿಂದ ೯೦.೪೨ಕ್ಕೆ ಇಳಿದಿದ್ದರೆ ಗುಲಬರ್ಗಾ ವಿಭಾಗದಲ್ಲಿ ಈ ಸೂಚ್ಯಂಕವು ೮೦.೭೧ ರಿಂದ ೮೬.೮೩ಕ್ಕೆ ಏರಿಕೆಯಾಗಿದೆ. ಆದರೆ ಗುಲಬರ್ಗಾ ವಿಭಾಗದ ಸೂಚ್ಯಂಕವು ಬೆಳಗಾವಿ ವಿಭಾಗದ ಸೂಚ್ಯಂಕಕ್ಕಿಂತ ಕಡಿಮೆ ಇದೆ. ೧೯೯೨-೯೩ ರಲ್ಲಿ ಉ.ಕ. ಪ್ರದೇಶದೊಳಗೆ ಬೆಳಗಾವಿ ವಿಭಾಗದ ಸೂಚ್ಯಂಕವು ಸಮಾಂಕ ೧೦೦ ಕ್ಕೆ ಹತ್ತಿರವಿದ್ದರೆ ಗುಲಬರ್ಗಾ ವಿಭಾಗದ ಸೂಚ್ಯಂಕವು ಸಮಾಂಕ ೧೦೦ಕ್ಕೆ ಅತ್ಯಂತ ದೂರದಲ್ಲಿದೆ.

### ಅಭಿವೃದ್ಧಿ ಅಂತರಗಳ ವಿಶ್ಲೇಷಣೆ

ಕರ್ನಾಟಕದ ಏಕೀಕರಣದ ಸಂದರ್ಭದಲ್ಲಿ (೧೯೫೬) ದ.ಕ. ಮತ್ತು ಉ.ಕ.ಪ್ರದೇಶಗಳು ಮತ್ತು ಉ.ಕ.ಪ್ರದೇಶದೊಳಗೆ ಬಾಂಬೆ ಕರ್ನಾಟಕ ಹಾಗೂ ಹೈದರಾಬಾದ್-ಕರ್ನಾಟಕ ಪ್ರದೇಶಗಳು ಅಭಿವೃದ್ಧಿಯ ವಿವಿಧ ಮಟ್ಟದಲ್ಲಿದ್ದವು ಎಂಬುದು ಚಾರಿತ್ರಿಕ ಸತ್ಯವಾಗಿದೆ. ಅಂದು ಅಭಿವೃದ್ಧಿಯಲ್ಲಿ ದ.ಕ. ಪ್ರದೇಶವು ಉ.ಕ. ಪ್ರದೇಶಕ್ಕಿಂತ ಮುಂದುವರಿದ ಸ್ಥಿತಿಯಲ್ಲಿತ್ತು ಹಾಗೂ ಉ.ಕ. ಪ್ರದೇಶದೊಳಗೆ ಹೈದರಾಬಾದ್-ಕರ್ನಾಟಕವು ತೀವ್ರ ತರಹದ ಆರ್ಥಿಕ ಸಂಕಷ್ಟಗಳಿಂದ ನರಳುತ್ತಿತ್ತು. ಹೀಗೆ ೧೯೫೦ರ ದಶಕದಲ್ಲಿ ಶುರುವಾದ ಅಭಿವೃದ್ಧಿಯಲ್ಲಿನ ಪ್ರದೇಶವಾರು ಹಾಗೂ ವಿಭಾಗವಾರು ಅಂತರಗಳು ಇಂದಿಗೂ ಮುಂದುವರಿದಿವೆ ಹಾಗೂ ಉಲ್ಬಣಗೊಳ್ಳುತ್ತಿವೆ. ಇದನ್ನು ಮೇಲಿನ ಭಾಗದಲ್ಲಿ ಚರ್ಚಿಸಲಾಗಿದೆ. ಅಭಿವೃದ್ಧಿಯಲ್ಲಿ ಸಮತೂಕವನ್ನು ಸಾಧಿಸುವ ಸಲುವಾಗಿ ಹಾಗೂ ಅಂತರಗಳನ್ನು ತಗ್ಗಿಸುವ ಸಲುವಾಗಿ ಸರ್ಕಾರವು ತೆಗೆದುಕೊಂಡ 'ಉತ್ತೇಜನ-ನಿರುತ್ತೇಜನ' ಕ್ರಮಗಳು ಯಶಸ್ವಿಯಾಗಲಿಲ್ಲ. ಅಭಿವೃದ್ಧಿ ಅಂತರವೆಂಬುದು ಸಂಕೀರ್ಣ ಸಮಸ್ಯೆಯಾಗಿದೆ.

ಕೆಲವು ಸೂಚ್ಯಂಕಗಳು ಉ.ಕ.ಪ್ರದೇಶವು ದ.ಕ.ಪ್ರದೇಶಕ್ಕಿಂತ ಹಿಂದುಳಿದಿರುವುದನ್ನು ತೋರಿಸಿದರೆ ಮತ್ತೆ ಕೆಲವು ಅದು ಮುಂದುವರಿದಿರುವುದನ್ನು ಸೂಚಿಸುತ್ತವೆ. ಈ ಬಗೆಯ ಸೂಕ್ಷ್ಮತೆ ಹಾಗೂ ಸಂಕೀರ್ಣತೆಯಿಂದಾಗಿ ಪ್ರದೇಶವಾರು ಅಭಿವೃದ್ಧಿ ಅಂತರಗಳ ಬಗ್ಗೆ ಅಂತಿಮವಾಗಿ ಏನನ್ನೂ ಹೇಳಲು ಸಾಧ್ಯವಿಲ್ಲದಂತಾಗಿದೆ. ಆದರೆ ಹೈದರಾಬಾದ್-ಕರ್ನಾಟಕ ಪ್ರದೇಶದಲ್ಲಿನ ಅಭಿವೃದ್ಧಿ ಅಂತರದ ಸಮಸ್ಯೆ ಬಗ್ಗೆ

ನಿರ್ಣಯಾತ್ಮಕವಾಗಿ ತೀರ್ಮಾನಗಳನ್ನು ಹೇಳಿ ಬಿಡಬಹುದು.

ಉದ್ರೇಕಕಾರಿ ರಾಜಕೀಯ ಸ್ವರೂಪ ಪಡೆಯಬಹುದಾದ ಈ ಸಮಸ್ಯೆಯ ವಾಗ್ವಾದದಲ್ಲಿ ನಿರತರಾಗಿರುವವರು ಸಮಸ್ಯೆಯ ಮೂಲದಲ್ಲಿರುವ ಸೂಕ್ಷ್ಮ ಹಾಗೂ ಸಂಕೀರ್ಣ ಸಾಮಾಜಿಕ-ಆರ್ಥಿಕ ಸಂಗತಿಗಳ ಬಗ್ಗೆ ಕುರುಡಾಗಿಬಿಡಬಾರದು. ಅಭಿವೃದ್ಧಿಗೆ ಸಂಬಂಧಿಸಿದ ನೀತಿಗಳು ಕೆಲವೊಮ್ಮೆ ರಾಜಕೀಯವಾಗಿ ಸ್ವಾಗತಾರ್ಹವಾಗಿದ್ದರೆ ಆರ್ಥಿಕವಾಗಿ ಸ್ವಾಗತಾರ್ಹವಾಗಿರುವುದಿಲ್ಲ ಅಥವಾ ಆರ್ಥಿಕವಾಗಿ ಸ್ವಾಗತಾರ್ಹವಾಗಿದ್ದರೆ ರಾಜಕೀಯವಾಗಿ ಸ್ವಾಗತಾರ್ಹವಾಗಿರುವುದಿಲ್ಲ. ಆದರೆ ಉ.ಕ. ಪ್ರದೇಶವನ್ನು ಪ್ರತ್ಯೇಕ ರಾಜ್ಯವನ್ನಾಗಿ ಮಾಡಬೇಕೆಂಬ ಬೇಡಿಕೆಯು ರಾಜಕೀಯವಾಗಿಯೂ ಸ್ವಾಗತಾರ್ಹವಾಗಿಲ್ಲ ಮತ್ತು ಆರ್ಥಿಕವಾಗಿಯೂ ಸ್ವಾಗತಾರ್ಹವಾಗಿಲ್ಲ. ಉ.ಕ. ಪ್ರದೇಶವು ದ.ಕ.ಪ್ರದೇಶಕ್ಕಿಂತ ಅಭಿವೃದ್ಧಿಯಲ್ಲಿ ಹಿಂದುಳಿದಿದೆ ಎಂಬುದು ಸರಿ! ಈ ಬಗೆಯ ಪ್ರದೇಶವಾರು ಅಭಿವೃದ್ಧಿ ಅಂತರ ಹಾಗೂ ಉ.ಕ. ಪ್ರದೇಶದ ಹಿಂದುಳಿದಿರುವಿಕೆ ಮೂಲದಲ್ಲಿ ಅನೇಕ ಸಮಾಜೋ-ಆರ್ಥಿಕ, ರಾಜಕೀಯ-ಸಾಂಸ್ಕೃತಿಕ ಹಾಗೂ ಚಾರಿತ್ರಿಕ ಕಾರಣಗಳಿವೆ ಎಂಬುದೂ ಅಷ್ಟೇ ಸತ್ಯ.

೧೯೫೦ರ ದಶಕದಲ್ಲಿ ಜಾಗತಿಕ ಮಟ್ಟದಲ್ಲಿ ಅಭಿವೃದ್ಧಿಯ ಪ್ರಾದೇಶಿಕ ಆಯಾಮವನ್ನು ಸೂಕ್ಷ್ಮ ಅಧ್ಯಯನ ನಡೆಸಿದ ಜೆ.ಜಿ. ವಿಲಿಯಂಸನ್‌ರವರ ಪ್ರಕಾರ ಒಂದು ಪ್ರದೇಶದ ಅಭಿವೃದ್ಧಿಯ ಹಿಂದಿನ ಅನೇಕ ಚಾಲಕ ಶಕ್ತಿಗಳಲ್ಲಿ ಬಹು ಮುಖ್ಯವಾದುದು ರಾಜಕೀಯ ಪ್ರಾತಿನಿಧ್ಯ. ಅಭಿವೃದ್ಧಿಗೆ ಸಂಬಂಧಿಸಿದ ನೀತಿ-ನಿರೂಪಣೆ ಪ್ರಕ್ರಿಯೆಯಲ್ಲಿ ರಾಜಕೀಯ ಪ್ರತಿನಿಧಿಗಳು ಕ್ರಿಯಾಶೀಲರಾಗಿ ಭಾಗವಹಿಸದೇ ಇದ್ದಾಗ ಅಥವಾ ಇಂಥ ಕೆಲಸಗಳ ಬಗ್ಗೆ ಉಪೇಕ್ಷೆ ತಳೆದಾಗ ಪ್ರದೇಶವಾರು ಅಭಿವೃದ್ಧಿ ಅಂತರಗಳು ತಲೆದೋರುತ್ತವೆ. ಬಹುಶಃ ಉ.ಕ. ಪ್ರದೇಶದ ಹಿಂದುಳಿದಿರುವಿಕೆ ಮತ್ತು ಹೈದರಾಬಾದ್-ಕರ್ನಾಟಕ ಪ್ರದೇಶದಲ್ಲಿರುವ ಆತಂಕಕಾರಿ ಪರಿಸ್ಥಿತಿ ಹಿಂದೆ ಈ ಬಗೆಯ ರಾಜಕೀಯ ಪ್ರತಿನಿಧಿಗಳ ಔದಾಸೀನ್ಯ ಅಥವಾ ನಿರಾಸಕ್ತಿ ಕೆಲಸ ಮಾಡಿರಬಹುದೆಂದು ಊಹಿಸಬಹುದಾಗಿದೆ.

ಒಟ್ಟಂದದಲ್ಲಿ ಪ್ರತ್ಯೇಕ ರಾಜ್ಯ ರಚನೆಯು ಪ್ರದೇಶವಾರು ಅಭಿವೃದ್ಧಿ ಅಂತರಗಳಿಗೆ ಪರಿಹಾರವಲ್ಲ ಎಂಬುದು ಸ್ಪಷ್ಟ. ದ.ಕ. ಪ್ರದೇಶ ಮತ್ತು ಉ.ಕ. ಪ್ರದೇಶದೊಳಗೆ ಇರುವ ವಿಭಾಗವಾರು ಅಭಿವೃದ್ಧಿ ಅಂತರಗಳೂ ತುಂಬಾ ಮುಖ್ಯವಾಗಿವೆ. ಈ ವಿಭಾಗವಾರು ಅಭಿವೃದ್ಧಿ ಅಂತರವು ಉ.ಕ. ಪ್ರದೇಶದಲ್ಲಿ ತೀವ್ರವಾಗಿದೆ. ಈ ರೀತಿಯಲ್ಲಿ ತೀವ್ರ ಅಸಮಾನತೆ ಹಾಗೂ ಅಂತರಗಳಿಂದ ನರಳುತ್ತಿರುವ ಸಂದರ್ಭದಲ್ಲಿ ಪ್ರತ್ಯೇಕ ರಾಜ್ಯವು ಸಮಸ್ಯೆಗಳನ್ನು ಉಲ್ಬಣಗೊಳಿಸುವ ಸಾಧ್ಯತೆ ಇದೆ. ಹಿಂದುಳಿದಿರುವ ಪ್ರದೇಶಗಳಿಗೆ, ವಿಭಾಗಗಳಿಗೆ, ಜಿಲ್ಲೆಗಳಿಗೆ ಅಭಿವೃದ್ಧಿ ಕಾರ್ಯಕ್ರಮ, ಅಭಿವೃದ್ಧಿ ಯೋಜನೆಗಳಲ್ಲಿ ವಿಶೇಷ ಗಮನ ನೀಡುವಂತೆ ರಾಜಕೀಯ ಪ್ರತಿನಿಧಿಗಳ ಮೇಲೆ ಹಾಗೂ ರಾಜ್ಯ ಸರ್ಕಾರದ ಮೇಲೆ ಒತ್ತಡ ತರುವುದೇ ಸಮಸ್ಯೆಯ ಪರಿಹಾರಕ್ಕೆ ಇರುವ ವ್ಯವಹಾರಿಕ ಹಾಗೂ ವಿವೇಕಯುತ ಮಾರ್ಗವಾಗಿದೆ. 'ಸಹಭಾಗಿ ಅಭಿವೃದ್ಧಿ' ವಿಚಾರವನ್ನೂ, ವಿಧಾನವನ್ನೂ ಜನಪ್ರಿಯಗೊಳಿಸಿ ಹಾಗೂ ಅದನ್ನು ಅನುಷ್ಠಾನಗೊಳಿಸಿ ಉ.ಕ. ಪ್ರದೇಶದ ಅಭಿವೃದ್ಧಿ ಅಂತರದ ಸಮಸ್ಯೆಯನ್ನು ನಿವಾರಿಸಿಕೊಳ್ಳಬಹುದು. ಪ್ರದೇಶವಾರು ಅಭಿವೃದ್ಧಿ ಅಂತರಗಳನ್ನು ಉತ್ಪ್ರೇಕ್ಷಿಸುತ್ತಿರುವವರು, ಸರಳಗೊಳಿಸುತ್ತಿರುವವರು ಹಾಗೂ ಈ ಸಮಸ್ಯೆಯನ್ನೇ ಅಲ್ಲಗಳೆಯುತ್ತಿರುವವರು, ಪ್ರತ್ಯೇಕ ರಾಜ್ಯದ ಬೇಡಿಕೆಯನ್ನು ತಳ್ಳಿ ಹಾಕುತ್ತಿರುವವರು- ಇವರೆಲ್ಲಾ ಅಭಿವೃದ್ಧಿಯಲ್ಲಿ ಅಂತರ್ಗತವಾಗಿಬಿಟ್ಟಿರುವ 'ಉತ್ತರ-ದಕ್ಷಿಣ ವೈರುಧ್ಯ'ವನ್ನು ನಿರ್ಲಿಪ್ತ ಹಾಗೂ ಚಿಕಿತ್ಸಕ ದೃಷ್ಟಿಯಿಂದ ಪರಿಶೀಲಿಸಿ, ಸಮಸ್ಯೆಯ ನಿವಾರಣೆಗೆ ಕ್ರಿಯಾಶೀಲ ಹಾಗೂ ಗತಿಶೀಲ ಕಾರ್ಯಕ್ರಮ ರೂಪಿಸುವ ಕೆಲಸದ ಕಡೆ ಗಮನ ಹರಿಸುವುದು ಇಂದಿನ ಅಗತ್ಯವಾಗಿದೆ.

*[ಈ ಲೇಖನದಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯಗಳಿಗೂ ಮತ್ತು ಲೇಖಕರು ಕೆಲಸ ಮಾಡುತ್ತಿರುವ ಸಂಸ್ಥೆಗೂ ಯಾವುದೇ ಸಂಬಂಧವಿಲ್ಲ]*

**ಉದರದಲ್ಲಿ ಸಂತಾನದ ಕುಡಿ ಹೊತ್ತ ಪ್ರತಿಯೊಬ್ಬ ಗರ್ಭಿಣಿ ಸ್ತ್ರೀ ಹೃದಯದಲ್ಲಿ ಕನಸುಗಳ ಗಂಟು ಕಟ್ಟಿಕೊಂಡಿರುತ್ತಾಳೆ. ಆ ಕನಸುಗಳು ದಿನದಿನಕ್ಕೂ ರೆಕ್ಕೆಪುಕ್ಕ ಕಟ್ಟಿಕೊಂಡು ಹಾರಾಡುತ್ತಿರುತ್ತವೆ. ಈ ಮಧ್ಯೆ ತುಸುವೇ ಎಚ್ಚರ ತಪ್ಪಿದರೂ ಗರ್ಭಿಣಿಯ ಕನಸುಗಳನ್ನು ನುಚ್ಚುನೂರಾಗಿಸುವ ಅಪಾಯದ ಸಂಕೇತಗಳೆಡೆ ಬಹುತೇಕ ಮಹಿಳೆಯರು ಗಮನ ನೀಡುವುದಿಲ್ಲ! ಇಂತಹ ಅಪಾಯದ ಸೂಚನೆಯನ್ನು ಅರಿತ ಮಹಿಳೆ ಮಾತ್ರ ತನ್ನ ಕಂದಮ್ಮನನ್ನು ಉಳಿಸಿಕೊಳ್ಳಬಲ್ಲಳು.**

# ಗರ್ಭಿಣಿಯರಿಗೆ ಅಪಾಯದ ಸಂಕೇತಗಳು

○ ಡಾ. ಸುನಂದಾ ಕುಲಕರ್ಣಿ

ಪ್ರತಿಯೊಬ್ಬ ಗರ್ಭಿಣಿ ಸ್ತ್ರೀಯು ಬಸಿರಾದ ನಂತರ ತಾಯ್ತನದ ಕನಸುಗಳನ್ನು ಕಾಣುತ್ತಿರುತ್ತಾಳೆ. ಮುಂದೆ ಹುಟ್ಟಲಿರುವ ಮಗುವಿಗಾಗಿ ಅಂಗಿ, ಟೊಪ್ಪಿಗೆ, ಫ್ರಾಕು ಹೊಲಿಯುವುದರಲ್ಲಿ, ಇಲ್ಲವೇ ಕಾಲುಚೀಲ, ಸ್ವೆಟರ್ ಹೆಣೆಯುವದರಲ್ಲಿ ಕಾಲ ಕಳೆಯುತ್ತ ಹುಟ್ಟುವ ಮಗುವಿಗೆ ಏನು ಹೆಸರಿಡಬೇಕೆಂಬ ಯೋಚನೆಯಲ್ಲಿ ಇರುತ್ತಾಳೆ. ಆದರೆ ಈ ಕನಸು ಕೆಲವು ಸಲ ಕನಸಾಗಿಯೇ ಉಳಿಯುತ್ತದೆ. ಗರ್ಭಿಣಿ ಸ್ತ್ರೀಯು ಅಪಾಯದ ಸಂಕೇತವನ್ನು ಅರಿತಿದ್ದರೆ ಮಾತ್ರ ತನ್ನ ಕೂಸನ್ನು ಉಳಿಸಿಕೊಳ್ಳಬಲ್ಲಳು. ಎಷ್ಟೋ ಸಲ ಮೂಢ ನಂಬಿಕೆ, ಅಜ್ಞಾನ, ಮುಂಜಾಗ್ರತೆ ಕೊರತೆಯಿಂದ ಬಸಿರು ಹೋಗಿಬಿಡಬಹುದು.

ಗರ್ಭಿಣಿಯರಲ್ಲಿ ಕಾಲು ಬಾವು ಬಂದಾಗ ಅದು ಬಸಿರಿರುವಾಗ ಎಲ್ಲರಿಗೂ ಬರುವಂಥದ್ದೇ ಎಂದು ತಾತ್ಸಾರ ಮಾಡುವದು ಇವುಗಳಲ್ಲೊಂದು. ಈ ಮೂಢನಂಬಿಕೆಗೆ ಜೋತುಬಿದ್ದ ತಾಯಿ ವೈದ್ಯರ ಹತ್ತಿರ ತೋರಿಸಿಕೊಳ್ಳದಿದ್ದರೆ ಮಗು ಉಳಿಯುವುದಿಲ್ಲ. ಕೆಲವು ಸಲ ಬಾವು ಹೆಚ್ಚಾಗಿ, ರಕ್ತದೊತ್ತಡ ಹೆಚ್ಚಿ, ಫಿಟ್ಸು ಬಂದು ತಾಯಿ ತನ್ನ ಜೀವಕ್ಕೂ ಎರವಾಗಬಹುದು.

ಫಿಟ್ಸ್ ಬಂದಾಗ ಅದು ದೇವರು ಕೊಟ್ಟ ಶಾಪವೆಂದು ಪರಿಗಣಿಸಿ ಅದು ಮುಂದೆ ಬಾರದಂತೆ ಕಾಲಿಗೆ ಉಂಗುರ ಹಾಕಿ ಸುಮ್ಮನಾಗಿ ಬಿಡುವುದು ಇನ್ನೊಂದು ತರಹದ ಮೂಢನಂಬಿಕೆ. ಫಿಟ್ಸ್ ಬಂದನಂತರ ಕೆಲವು ಸ್ತ್ರೀಯರ ಪುಪ್ಪುಸಗಳಲ್ಲಿ ನಂಜಾಗಿ, ನೀರು ತುಂಬಿಕೊಂಡು ಸಾಯುಬಹುದು. ಇಲ್ಲವೆ ಫಿಟ್ಸ್ ಬಂದಾಗ ಅಕ್ಕ ಪಕ್ಕದಲ್ಲಿದ್ದ ಹರಿತ ವಸ್ತುಗಳ ಮೇಲೆ ಬಿದ್ದು ಗಾಯ ಮಾಡಿಕೊಳ್ಳಬಹುದು. ಕೆಲವು ಸಲ ನಾಲಗೆಯೇ ಹಲ್ಲುಗಳ ಮಧ್ಯೆ ಸಿಕ್ಕಿ ರಕ್ತ ಸುರಿಯಬಹುದು. ಕೈಕಾಲುಗಳನ್ನು ಮುರಿದುಕೊಳ್ಳಬಹುದು.

ಬಸಿರು ನಿಂತ ನಂತರ ೨ನೇ ತಿಂಗಳಿಗೆ ಬರುವುದು ವಾಂತಿಯ ಅವಾಂತರ. ಗರ್ಭಿಣಿ ಸ್ತ್ರೀಗೆ ವಾಂತಿಯು ಸಹಜವೆಂದು ಎಷ್ಟೋ ಸಲ ಅದನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ. ಈ ವಾಂತಿಯು ಅತಿಯಾದಾಗ ರಕ್ತವಾಂತಿಯಾಗಬಹುದು. ಇಲ್ಲವೆ ಊಟವಿಲ್ಲದೆ, ಕುಡಿಯುವ ನೀರೂ ಸಹ ವಾಂತಿಯಾಗಲು ಶುರುವಾದರೆ, ದೇಹ ಸೊರಗಿ ಎಚ್ಚರ ಹೋಗಬಹುದು. ಕೆಲವು ಸಲ ಕಾಮಾಲೆಗೆ ತಿರುಗಬಹುದು. ವಾಂತಿ ಮೊದಲ ತ್ರೈಮಾಸಿಕದಲ್ಲಿ ಸಹಜವಾದರೂ ಅದು ಅತಿಯಾಗಬಾರದು.

ಮೊದಲನೆಯ ಸಲ ಮಗು ತಾಯ ಗರ್ಭದಲ್ಲಿ ಚಲಿಸಿದಾಗ ತಾಯಿಗೆ ಅತೀವ ಸಂತೋಷವಾಗುತ್ತದೆ. ಈ ಚಲನೆ ಸದಾ ಕಾಲವೂ ಒಂದೇ ಸಮನಾಗಿ ಇರುವದಿಲ್ಲ. ಕೆಲವು ವೇಳೆ ಅದು ಕಾಣಿಸಿದಾಗ ಸಂತಸಗೊಂಡು ಇನ್ನು ಕೆಲವು ಸಲ ಮಗುವು ಆಡದಿದ್ದಾಗ ಮಲಗಿರಬಹುದು ಎಂದು ನಿರ್ಲಕ್ಷ್ಯ ಮಾಡುತ್ತಾರೆ. ಒಂದು ವಾರ, ಹತ್ತು ದಿನ ಆದ ಮೇಲೆ ಅದನ್ನು ಗಣನೆಗೆ ತರಬಹುದು. ಹೀಗೆ ನಿರ್ಲಕ್ಷಿಸದೆ ಮಗುವಿನ ಚಲನವಲನದ ಬಗ್ಗೆ ಸದಾ ನಿಗಾ ಇಡುವುದು ಅಗತ್ಯ.

ಹೆರಿಗೆಯ ಸಮಯದಲ್ಲಿ ಮಗುವು ಮುಖವನ್ನು ಮುಂದೆ ಮಾಡಿ ಹುಟ್ಟಿದರೆ, ಅದು ಸೂಲಗಿತ್ತಿಗೆ ಒಳ್ಳೆಯದಲ್ಲ ಎಂಬ ಪ್ರತೀತಿ ಇದೆ. ಇದಕ್ಕೆ ಯಾವುದೇ ಆಧಾರಗಳಿಲ್ಲ. ಈ ಅಜ್ಞಾನದಿಂದ ಎಷ್ಟೋ ಮಕ್ಕಳು ಈಗಲೂ ಸಾಯುತ್ತವೆ. ಸೂಲಗಿತ್ತಿಯು ತನಗೆ ಕೇಡಾಗುವುದನ್ನು ತಪ್ಪಿಸಲು ಹೆರಿಗೆಯಾದ ಮಗುವನ್ನು ಕುತ್ತಿಗೆ ಹಿಸುಕಿ ಸಾಯಿಸುತ್ತಾಳಂತೆ. ಚೆನ್ನಾಗಿ ಬೆಳೆದ ಮಗುವು ಹುಟ್ಟಿದ ತಕ್ಷಣ ಹೀಗೆ ಯಮನ ಪಾದ ಸೇರಿಕೊಳ್ಳುತ್ತದೆ!

ಹುಟ್ಟಿದ ಮಗುವು ಕಾಲು ಮುಂದೆ ಮಾಡಿ ಹುಟ್ಟಿದರೆ, ಆ ಮಗುವಿನ ತಾಯಿಯ ಆಸೆ ಏನಿರುತ್ತದೆಯೋ ಅದು ಈಡೇರುತ್ತದೆ ಎಂಬ ನಂಬಿಕೆಯೊಂದಿದೆ.

**ಗರ್ಭಿಣಿಯರಿಗೆ ಈ ಕೆಳಗಿನ ಯಾವುದಾದರೂ ತೊಂದರೆಯಿದ್ದರೆ ವೈದ್ಯರ ಹತ್ತಿರ ತೋರಿಸಿಕೊಳ್ಳಬೇಕು.**

೧. ವಿಪರೀತ ವಾಂತಿ, ರಕ್ತವಾಂತಿ
೨. ಜ್ವರ
೩. ಮೂತ್ರ ಉರಿಯುವಿಕೆ
೪. ಗರ್ಭಸ್ಥ ಮಗು ಆಡುವದನ್ನು ಕಡಿಮೆ ಮಾಡಿದರೆ
೫. ತಲೆ ತಿರುಗು, ತಲೆ ನೋವು
೬. ಹೊಟ್ಟೆನೋವು
೭. ರಕ್ತಸ್ರಾವ
೮. ನೀರು ಹೋಗುವದು
೯. ಕಾಲು ಬಾವು

ಈಗಲೂ ಮಹಾರಾಷ್ಟ್ರದಲ್ಲಿ ಇದನ್ನು ನಂಬುತ್ತಾರೆ. ಈ ನಂಬಿಕೆಯಲ್ಲಿ ಹುರುಳಿಲ್ಲ. ಕಾಲು ಮುಂದೆ ಮಾಡಿದ ಮಗುವಿನ ಹೆರಿಗೆ ಯಾವಾಗಲೂ ಯೋನಿದ್ವಾರದಿಂದ ನೈಸರ್ಗಿಕವಾಗಿಯೇ ಇರಬೇಕೆಂದಿಲ್ಲ. ಕೆಲವು ಸಲ ಮಗುವು ದೊಡ್ಡದಿದ್ದರೆ. ಸಿಝೇರಿಯನ್ ಶಸ್ತ್ರಚಿಕಿತ್ಸೆಯಾಗಿ ಹುಟ್ಟ ಬಹುದು.



**ಡಾ. ಸುನಂದಾ ಕುಲಕರ್ಣಿ**

೫೭೫, ೨೧ನೇ ಮೇನ್, ೩೫ನೇ ಕ್ರಾಸ್,
ಜಯನಗರ ೪ನೇ 'ಟಿ' ಬ್ಲಾಕ್,
ಬೆಂಗಳೂರು - ೫೬೦ ೦೪೧.

**ಡಾ. ಸುನಂದಾ ಕುಲಕರ್ಣಿಯವರು ತಮ್ಮ ವೈದ್ಯಕೀಯ ಲೇಖನಗಳ ಮೂಲಕ ಕನ್ನಡ ಓದುಗರಿಗೆ ಚಿರಪರಿಚಿತರಾಗಿದ್ದಾರೆ. ಸಾಮಾನ್ಯ ಓದುಗರ ಮನಮುಟ್ಟುವಂತೆ ಆರೋಗ್ಯ ವಿಷಯ ನಿರೂಪಿಸುವಲ್ಲಿ ಅವರು ನಿಷ್ಣಾತರು. ಪ್ರಸ್ತುತ ಬೆಂಗಳೂರು ವೈದ್ಯಕೀಯ ಕಾಲೇಜಿನ ವಾಣಿವಿಲಾಸ ಆಸ್ಪತ್ರೆಯಲ್ಲಿ ಸ್ತ್ರೀ ರೋಗ ಹಾಗೂ ಪ್ರಸೂತಿ ತಜ್ಞರಾಗಿದ್ದಾರೆ. ಮೈಸೂರು ವಿಶ್ವವಿದ್ಯಾಲಯದಿಂದ ವೈದ್ಯಕೀಯ ಪದವಿಯನ್ನು ಬಂಗಾರದ ಪದಕದೊಂದಿಗೆ ಪಡೆದಿರುವ ಡಾ.ಸುನಂದ ಕುಲಕರ್ಣಿಯವರು ಸಹಾಯಕ ಪ್ರಾಧ್ಯಾಪಕರಾಗಿಯೂ ಸೇವೆ ಸಲ್ಲಿಸುತ್ತಿದ್ದಾರೆ. ಇನ್ನು ಮೇಲೆ ಅವರು 'ಬಿಸಿಲ ಬದುಕು' ಪತ್ರಿಕೆಗೆ ಆರೋಗ್ಯಕ್ಕೆ ಸಂಬಂಧಿಸಿದ ಲೇಖನಗಳನ್ನು ನಿಯಮಿತವಾಗಿ ಬರೆಯಲಿದ್ದಾರೆ.**

ಬಸಿರು ಇರುವಾಗ ಗರ್ಭಿಣಿ ಸ್ತ್ರೀಗೆ ಯಾವುದೋ ಕಾರಣಕ್ಕೂ ಜ್ವರ ಬರ ಬಹುದು. ಅದರಲ್ಲಿ ಒಂದು ಮೂತ್ರ ದೋಷ. ಮೂತ್ರದೋಷವಾದರೆ, ಮೇಲಿಂದ ಮೇಲೆ ಮೂತ್ರಕ್ಕೆ ಹೋಗು ವದು, ಮೂತ್ರ ವಿಸರ್ಜನೆ ಮಾಡುವಾಗ ಉರಿಯುವುದು ಕಂಡುಬರುತ್ತದೆ. ಆದರೆ ಮೊದಮೊದಲು ಬರೀ ಜ್ವರ ಬರಬಹುದು. ಚಳಿ ಜ್ವರವು ಕಾಣಿಸಬಹುದು. ಜ್ವರ ಕೇವಲ ನೆಗಡಿಗಾಗಿರಬಹುದು, ಚಳಿಗಾಗಿರಬಹುದು ಎಂದು ಶಂಕಿಸುತ್ತಾ ವೈದ್ಯರ ಹತ್ತಿರ ಹೋಗುವ ಬದಲು, ಮನೆಯಲ್ಲಿಯೇ ಕಷಾಯ ಕುಡಿಯುತ್ತ ಕುಳಿತರೆ ಮುಂದೆ ಗರ್ಭಪಾತ, ಅಕಾಲ ಹೆರಿಗೆಗೆ ಕಾರಣವಾಗುತ್ತದೆ. ಇನ್ನೂ ಕೆಲವು ಸಲ ಮಗು ಗರ್ಭದಲ್ಲೇ ಸತ್ತುಹೋಗ ಬಹುದು.

ಬಸಿರು ಹೆಂಗಸಿಗೆ ಬೆಳಿಗ್ಗೆ ಎದ್ದಾಗ ತಲೆ ತಿರುಗುವದು ಸಹಜ. ಅದೂ ಮೊದಲ ತ್ರೈಮಾಸಿಕದಲ್ಲಿ. ಬೆಳಿಗ್ಗೆ ಎದ್ದಾಗ ಹೊಟ್ಟೆ ಖಾಲಿಯಿದ್ದು, ಉಂಡ ಊಟ ವಾಂತಿಯಾಗಿ, ತಲೆ ತಿರುಗಬಹುದು. ಆದರೆ ಇದು ಮೂರು ತಿಂಗಳು ಮುಗಿಯುವ ಹೊತ್ತಿಗೆ ಶೇಕಡಾ ೭೫ರಷ್ಟು ಕಡಿಮೆಯಾಗಿ, ೪ನೆಯ ತಿಂಗಳಿಗೆ ಪೂರ್ತಿ ನಿಂತು ಹೋಗುತ್ತದೆ. ನಂತರದ ತಿಂಗಳಿನಲ್ಲಿ ಆಗಾಗ್ಗೆ ತಲೆ ತಿರುಗುವದು ರಕ್ತದೊತ್ತಡಕ್ಕೆ ಇರಬಹುದು. ತಲೆ ತಿರುಗುವುದು ಹೆಚ್ಚಾಗಿ, ರಕ್ತದೊತ್ತಡ ಏರಿ, ಅದು ಫಿಟ್ಸ್ ಬರಲು ನಾಂದಿಯಾಗಬಹುದು. ಆದ್ದರಿಂದ ತಲೆ ತಿರುಗುವದು ಯಾವಾಗಲೂ ಪಿತ್ತದ ಲಕ್ಷಣವಲ್ಲ ಎಂಬುದನ್ನು ನೆನಪಿನಲ್ಲಿ ನೆಟ್ಟುಕೊಳ್ಳಬೇಕು.

ಬಸಿರು ಇರುವಾಗ ಮನಸ್ಸು ಬದಲಾಗುತ್ತದೆ. ಹಾಗೆಯೇ ಬಾಯಿಯ ರುಚಿಯೂ ಬದಲಾಗುತ್ತದೆ. ಗರ್ಭಿಣಿ ಸ್ತ್ರೀಯು ಹಲವಾರು ಪದಾರ್ಥಗಳನ್ನು ತಿನ್ನಬೇಕೆಂದು ಬಯಸುವದು ಸಹಜ. ಪ್ರತಿಯೊಬ್ಬರ ಮನೆಯಲ್ಲಿ ಊಟದ ಪದ್ಧತಿಯು ಬೇರೆ ಬೇರೆ ಇರುತ್ತದೆ. ದಕ್ಷಿಣ ಭಾರತೀಯರ ಪದ್ಧತಿಗೂ ಉತ್ತರದವರಿಗೂ ಬಿಡುತ್ತದೆ. ಹಾಗೆಯೇ ಅದು ರಾಜ್ಯ - ರಾಜ್ಯಕ್ಕೂ, ಪ್ರದೇಶಕ್ಕೂ ಅಷ್ಟೇ ಏಕೆ ಮನೆಯಿಂದ ಮನೆಗೆ ಬೇರೆ ಬೇರೆಯಾಗಿಯೇ ಇರುತ್ತದೆ. ಗರ್ಭಿಣಿ ಸ್ತ್ರೀಯು ದಿನ ನಿತ್ಯದ ಅಡಿಗೆಯನ್ನು ಬಯಸದೇ ಮದುವೆ ಮುಂಜಿಗಳಲ್ಲಿ ಅಂದರೆ ದೊಡ್ಡ - ದೊಡ್ಡ ಸಮಾರಂಭಗಳಲ್ಲಿ ಮಾಡುವ ಕಷ್ಟದಿಂದ ತಯಾರಿಸುವ ಪದಾರ್ಥಗಳನ್ನೇ ಬಯಸ ಬಹುದು. ಹುಡುಗಿಯು ಮೊದಲ ಸಲ ಗರ್ಭವತಿಯಾದಾಗ ಅವಳನ್ನು ಅವಳ ಸಖಿಯರು ಊಟಕ್ಕೆ ಆಮಂತ್ರಿಸುವ ಪದ್ಧತಿಯಿದೆ. ಒಬ್ಬರ ಮನೆಯ ಅಡಿಗೆಯಲ್ಲಿ ಕಬ್ಬಿಣದ ಅಂಶದ ಕೊರತೆಯಿದ್ದರೆ, ಇನ್ನೊಬ್ಬರ ಮನೆಯ ಊಟದಲ್ಲಿ ಈ ಕೊರತೆಯನ್ನು ನೀಗಿಸುವ ಈ ಪದ್ಧತಿ ನಿಜವಾಗಿಯೂ ಒಳ್ಳೆಯದು. ಹೆಂಗಸರೂ ಸಹ ಬೆಳಿಗ್ಗೆ ಎದ್ದು ಕೆಲಸಕ್ಕೆ ಹೋಗುವ ಈ ಶತಮಾನ ದಲ್ಲಿ ಯಾರಿಗೂ ಬಿಡುವೆಂಬುದು ಇಲ್ಲದ್ದರಿಂದ, ಈಗೀಗ ಅನೂಚಾನವಾಗಿ ನಡೆದುಕೊಂಡು ಬಂದ ಈ ಪದ್ಧತಿಯು ನಿಧಾನವಾಗಿ ಮಾಯವಾಗುತ್ತಿದೆ.

ಇನ್ನು ಕೆಲವು ಹೆಂಗಸರು ಬಸಿರು ಇರುವಾಗ ಇಟ್ಟಿಗೆ, ಖಡು (ಚಾಕ್‌ಪೀಸ್) ಜೇಡಿಮಣ್ಣು ಇವನ್ನೆಲ್ಲ ತಿನ್ನಬಯಸುತ್ತಾರೆ. ಬಸಿರು ಹೆಂಗಸು ಬಯಸಿದ್ದಾಳೆಂದು ಅದನ್ನು ತಂದು ಕೊಡುವವರಿಗೂ ಕೊರತೆಯಿಲ್ಲ. ಈ ತರಹದ ಆಸೆಯು ದೇಹದಲ್ಲಿ ಸತುವೆಂಬ ಧಾತುವಿನ ಕೊರತೆಗೋ ಅಥವಾ ಕಬ್ಬಿಣದ ಅಂಶದ ಕೊರತೆಗೋ ಬರಬಹುದು. ಈ ತರಹದ ವಸ್ತುಗಳನ್ನು ತಿನ್ನುವುದು ಒಳಿತಲ್ಲ ಎಂಬ ತಿಳಿವಳಿಕೆ ನಮ್ಮ ಹೆಂಗಸರಿಗೆ ಬರಬೇಕು.

ಬಸಿರು ಇರುವಾಗ ಹೊಟ್ಟೆ ನೋವು ಬಂದರೆ ಜಾಗ್ರತೆ ಯಾಗಿರಬೇಕು. ಹೊಟ್ಟೆ ನೋವು ಬಂದಾಗ ಯಾವಾಗಲೂ ಅದು ಅಜೀರ್ಣಕ್ಕೆ ಇರಬಹುದು,

## ಇವುಗಳನ್ನು ಮಾಡಬೇಡಿ

೧. ಸ್ವಂತ ಚಿಕಿತ್ಸೆ (ತಲೆನೋವಿಗೆ, ವಾಂತಿಗೆ ತಮಗೆ ಬೇಕಾದ ಮಾತ್ರೆ ತೆಗೆದುಕೊಳ್ಳಲಾಗದು).
೨. ಅತ್ಯಂತ ಕಷ್ಟಕರವಾದ ವ್ಯಾಯಾಮ ಹಾಗೂ ಕೆಲಸ.
೩. ಧೂಮಪಾನ, ಸುರಪಾನ.
೪. ಮೇಲಿಂದ ಮೇಲೆ ಊರಿನಿಂದ ಊರಿಗೆ ಪ್ರಯಾಣ.
೫. ಬಸಿರು ಇರುವಾಗ ಜ್ವರ ಹೈತಿಗೆ ಎದ್ದವರಲ್ಲಿ ಹೋಗಿ ಕುಳಿತು ಮಾತನಾಡುವದು.
೬. ಸಿಕ್ಕ ಸಿಕ್ಕ ಸ್ಥಳದಲ್ಲಿ ತಿನ್ನುವುದು ಹಾಗೂ ಕುಡಿಯುವುದು.

ಏನೋ ಹೆಚ್ಚು ತಿಂದಿದ್ದಕ್ಕೆ ಇರಬಹುದು ಎಂದು ಲೆಕ್ಕಹಾಕಬಾರದು. ಈ ನೋವು ಗರ್ಭಪಾತದ್ದೇ ಇರಬಹುದು! ಹಾಗೆಯೇ ಹೊಟ್ಟೆನೋವಿಗೆ ಮಲಬದ್ಧತೆಯೇ ಕಾರಣವೆಂದು ಯಾವಾಗಲೂ ಶಂಕಿಸಬಾರದು. ಸರಿಯಾದ ಸಮಯಕ್ಕೆ ವೈದ್ಯರ ಹತ್ತಿರ ಹೋಗದಿದ್ದರೆ, ಅಕಾಲಜಾತ ಮಗುವನ್ನು ನೋಡಿಕೊಳ್ಳಬೇಕಾಗುತ್ತದೆ. ತೀರ ಸಣ್ಣದಿದ್ದ ಮಗುವು ಎಷ್ಟೇ ಪ್ರಯತ್ನ ಮಾಡಿದರೂ ಉಳಿದೇ ಉಳಿಯುತ್ತದೆಂದು ಹೇಳಲಾಗದು.

ಮಲಬದ್ಧತೆಯು ಗರ್ಭಿಣಿ ಸ್ತ್ರೀಯರಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ದೇಹದಲ್ಲಿ ಮಗುವು ಬೆಳೆಯುತ್ತಿದ್ದಾಗ ರಸದೂತ (Hormones) ಗಳು ಹೆಚ್ಚಾದಾಗ, ಹಲವಾರು ಬದಲಾವಣೆಯಾಗಿ ಮಲಬದ್ಧತೆಯಾಗಬಹುದು. ಮಲಬದ್ಧತೆಯನ್ನು ಸರಿ ಮಾಡಲು ದೊಡ್ಡ ರೇಚಕಗಳನ್ನು ತೆಗೆದುಕೊಂಡರೆ, ಮಲವು ಹೋಗುವದಲ್ಲದೇ ಅದರ ಜೊತೆಗೆ ಹೊಟ್ಟೆನೋವೂ ಬಂದು ಹೆರಿಗೆಯಾಗಬಹುದು. ಸೌಮ್ಯರೇಚಕ ತಗೆದುಕೊಂಡರೆ ಮಾತ್ರ ಕೇವಲ ಮಲಬದ್ಧತೆ ಹೋಗುವದು. ಮನೆಯಲ್ಲಿ ಔಡಲ ಎಣ್ಣೆ ಕುಡಿದು ಈ ಅನಾಹುತ ಮಾಡಿಕೊಳ್ಳುವವರಿಗೆ ಇದು ಗೊತ್ತಾಗುವುದು ಒಳಿತು.

ಬಸಿರು ಇರುವಾಗ ತಾಯಿಯು ಜಾಸ್ತಿ ತಿನ್ನಬೇಕು, ಇಬ್ಬರಿಗೆ ಆಗುವಷ್ಟು ತಿನ್ನಬೇಕು ಎಂದು ಕೆಲವರು ಹೇಳಿದರೆ, ಇನ್ನು ಕೆಲವರು ತಾಯಿಯು ಹೆಚ್ಚು ತಿನ್ನಬಾರದು, ತಿಂದರೆ ಮಗುವು ಬೆಳೆದು ಹೆರಿಗೆಯಾಗಲು ಕಷ್ಟವಾಗುತ್ತದೆ ಎನ್ನುತ್ತಾರೆ. ತಿನ್ನಲು ಹಿಂದೇಟು ಹಾಕಿದರೆ, ಹೊಟ್ಟೆಯಲ್ಲಿಯ ಮಗು ತಾಯಿಯು ತಿನ್ನಲಿ ಬಿಡಲಿ ಅದು ತನಗೆ ಬೇಕಾದುದನ್ನು ಹೀರಿಕೊಂಡು ಬಿಡುತ್ತದೆ. ಇದರಿಂದ ತಾಯಿಯು ತನ್ನ ಶಕ್ತಿಯನ್ನು ಕಳೆದುಕೊಳ್ಳುತ್ತಾಳೆ. ಹೆರಿಗೆಯಲ್ಲಿ ಬೇಕಾದ ಶಕ್ತಿ, ಆಗುವ ರಕ್ತಸ್ರಾವವನ್ನು ತಡೆದುಕೊಳ್ಳಲು ಅವಳಿಗೆ ಸಾಧ್ಯವಾಗುವುದಿಲ್ಲ.

ಗರ್ಭವು ೪೦ ವಾರಗಳು ಇಲ್ಲವೆ ೯ ಕ್ಯಾಲೆಂಡರ್ ತಿಂಗಳ ಮೇಲೆ ೭ ದಿನ ಇರುತ್ತದೆ. ನಂತರ ಹೆರಿಗೆಯಾಗುತ್ತದೆ. ಆದರೆ ಕೆಲವು ಸಲ ದಿನ ತುಂಬಿದರೂ ಹೆರಿಗೆಯಾಗುವದಿಲ್ಲ. ದಿನಗಳು ಮುಂದೆ ಹೋದರೆ ಗಂಡು ಮಗು ಹುಟ್ಟುತ್ತದೆಯೆಂಬ ನಂಬಿಕೆಯಿಂದ ಕೆಲವರು ಆರಾಮವಾಗಿರುತ್ತಾರೆ. ಆದರೆ ದಿನಗಳು ಹೆಚ್ಚಾದಂತೆ ಮಗುವಿಗೆ ಅಪಾಯವಾಗುವ ಸಂಭವವಿದೆ. ಆದಷ್ಟು ಜಾಗ್ರತೆಯಾಗಿ ವೈದ್ಯರಿಗೆ ತೋರಿಸುವದು ಒಳ್ಳೆಯದು.

ಬಸಿರು ಇರುವಾಗ ತಾಯಿಯ ಬಣ್ಣ ಬಿಳಿಯಾಗಬಹುದು ಇಲ್ಲದೆ ಕಪ್ಪಾಗಬಹುದು. ಕಪ್ಪಾದರೆ ಗಂಡುಮಗು ಹುಟ್ಟಬಹುದೆಂಬ ಸಂತೋಷ. ಇಲ್ಲವೆ ಬೆಳ್ಳಗಾದರೆ ಹೆಣ್ಣು ಹುಟ್ಟುವದೆಂಬ ದುಃಖ ಹಲವರದು. ಆದರೆ ಇದೊಂದು ಮೂಢ ನಂಬಿಕೆ. ಹೆಂಗಸು ಕಪ್ಪಾಗಲಿ, ಇಲ್ಲವೆ ಬೆಳ್ಳಗಾಗಲಿ ಅದಕ್ಕೆ ಕಾರಣ ರಕ್ತಹೀನತೆ. ಮಗುವು ತಾಯಿಯ ರಕ್ತ ಹೀರುವದರಿಂದ ಅವಳು ರಕ್ತಹೀನತೆಯಿಂದ ಬಳಲುತ್ತಾಳೆ. ಆದ್ದರಿಂದ ಗರ್ಭಿಣಿ ಹೆಂಗಸರು ಮೊದಲಿನಿಂದಲೂ ವೈದ್ಯರಿಗೆ ತೋರಿಸಿ ರಕ್ತ ವೃದ್ಧಿಸುವ ಮಾತ್ರೆಗಳನ್ನು ತೆಗೆದುಕೊಳ್ಳಬೇಕು.

ಒಂಬತ್ತು ತಿಂಗಳ ಕಾಲ ಜತನದಿಂದ ತಮ್ಮ ದೇಹಾರೋಗ್ಯವನ್ನು ಕಾಪಾಡಿಕೊಂಡು, ಗರ್ಭದಲ್ಲಿರುವ ಮಗುವಿನ ಬೆಳವಣಿಗೆಗೆ ಬೇಕಾಗುವ ಆಹಾರವನ್ನು, ಮಾತ್ರೆಯನ್ನು ತೆಗೆದುಕೊಂಡು, ಅಪಾಯದ ಸಂಕೇತಗಳನ್ನು ಗಮನಿಸಿ, ಜಾಗ್ರತೆಯಾಗಿದ್ದರೆ ಮಾತ್ರ ಒಂಬತ್ತು ತಿಂಗಳು ಕಷ್ಟಪಟ್ಟ ಫಲ ಕೈಗೆ ಬರುವದು. ಹೆತ್ತ ಮಗುವಿನ ಒಂದೇ ಒಂದು ನಗುವಿನಿಂದ ಎಲ್ಲ ಕಷ್ಟಪರಿಹಾರವಾಗಿ ಮನಸ್ಸಿಗೆ ಶಾಂತಿ, ಆನಂದ ಸಿಕ್ಕುವದು.

## ಅಡುಗೆ ಮನೆ

### ಕಡಲೆ ಹಿಟ್ಟಿನ ಕಡುಬು

**ಸಾಮಗ್ರಿ :** ೩೦೦ ಗ್ರಾಂ ಕಡಲೆ ಹಿಟ್ಟು, ೧೦೦ ಗ್ರಾಂ ರವೆ, ಒಂದು ಚಿಟಕಿ ಸೋಡಾ, ರುಚಿಗೆ ತಕ್ಕಷ್ಟು ಉಪ್ಪು, ಅರ್ಧ ಚಮಚ ಓಮ, ಸಾಟಿ ಹಾಕಲು (ನಾದಲು) ಅರ್ಧ ಬಟ್ಟಲು ತುಪ್ಪ, ಕರಿಯಲು ಎಣ್ಣೆ.

**ಹೂರಣಕ್ಕಾಗಿ ಸಾಮಗ್ರಿ :** ಒಂದು ಚಿಟಕಿ ಇಂಗು, ೨೫೦ ಗ್ರಾಂ ಬೇಯಿಸಿದ ಅಲೂಗಡ್ಡೆ, ೧ ಬಟ್ಟಲು ಹಸಿ ಬಟಾಣಿ, ೧ ಸೌಟು ಎಣ್ಣೆ, ಅರ್ಧ ಚಮಚ ಅರಿಷಿಣ, ರುಚಿಗೆ ತಕ್ಕಷ್ಟು ಉಪ್ಪು, ೧ ಚಮಚ ದನಿಯಾ ಪುಡಿ, ಅರ್ಧ ಚಮಚ ಚನಾ ಮಸಾಲೆ, ಸ್ವಲ್ಪ ದಾಳಿಂಬೆ ಕಾಳು, ಅರ್ಧ ಚಮಚ ಹುಣಸೆಪುಡಿ, ಅರ್ಧ ಚಮಚ ಗರಂ ಮಸಾಲೆ, ಅರ್ಧ ಚಿಕ್ಕ ಚಮಚ ಜೀರಿಗೆ ಮತ್ತು ದನಿಯ, ಅರ್ಧ ಚಮಚ ಅಚ್ಚ ಮೆಣಸಿನ ಪುಡಿ, ೨-೩ ಹಸಿ ಮೆಣಸಿನಕಾಯಿ, ಸ್ವಲ್ಪ ಕೊತ್ತಂಬರಿ ಸೊಪ್ಪು ೨-೩ ದೊಡ್ಡ ಚಮಚ ಹುರಿದು ತರಿಯಾಗಿ ಪುಡಿ ಮಾಡಿದ ಗೋಡಂಬಿ, ೧ ದೊಡ್ಡ ಚಮಚ ಒಣ ದ್ರಾಕ್ಷಿ, ಕರಿಯಲು ಎಣ್ಣೆ.

**ತಯಾರಿಸುವ ವಿಧಾನ :** ಕಡಲೆ ಹಿಟ್ಟು ಮತ್ತು ರವೆಗೆ ಉಪ್ಪು ಹಾಗೂ ಸೋಡಾ ಬೆರೆಸಿಡಿ. ಇದಕ್ಕೆ ಓಮ ಮತ್ತು ಸಾಟಿಯಾಗಿ ಇಟ್ಟಿರುವ ತುಪ್ಪವನ್ನು ಬೆರೆಸಿ ಬೆಚ್ಚಗಿನ ನೀರಿನಿಂದ ಕಲಸಿಡಿ.

ಒಂದು ಬಾಣಲೆಯಲ್ಲಿ ಸ್ವಲ್ಪ ಎಣ್ಣೆ ಬಿಸಿ ಮಾಡಿಕೊಂಡು, ಇಂಗಿನ ಪುಡಿ ಮತ್ತು ಜೀರಿಗೆಯ ಒಗ್ಗರಣೆ ಕೊಡಿ. ನಂತರ ಇದಕ್ಕೆ ಅರಿಷಿಣ ಪುಡಿ, ಅಚ್ಚ ಮೆಣಸಿನ ಪುಡಿ ಮತ್ತು ದನಿಯಾ ಪುಡಿಯನ್ನು ಹಾಕಿ ತಕ್ಷಣವೇ ಬಟಾಣಿಯನ್ನು ಹಾಕಿ, ಸ್ವಲ್ಪ ಹೊತ್ತಿನ ಬಳಿಕ ಬೆಂದ ಆಲೂಗಡ್ಡೆ, ಉಪ್ಪು, ಹಸಿ ಮೆಣಸಿನ ಕಾಯಿಯನ್ನು ಚೆನ್ನಾಗಿ ಬೆರೆಸಿ ಮಂದ ಉರಿಯಲ್ಲಿ ಬಾಡಿಸಿ. ಈ ತರಕಾರಿ ತೇವವಾಗಿದ್ದರೆ ಕಡುಬು ಚೆನ್ನಾಗಿರುವುದಿಲ್ಲ. ದ್ರಾಕ್ಷಿ ಮತ್ತು ಉಳಿದೆಲ್ಲಾ ಒಣ ಮಸಾಲೆಯನ್ನು ಹಾಕಿ ಚೆನ್ನಾಗಿ ಕಲಸಿ ಕೆಳಗಿಳಿಸಿ ಮಿಶ್ರಣವನ್ನು ತಣ್ಣಗಾಗಲು ಬಿಡಿ.

ರವೆಯ ಚಿಕ್ಕ ಚಿಕ್ಕ ತುಂಡುಗಳನ್ನು ಮಾಡಿ ಒಂದು ಪ್ಲಾಸ್ಟಿಕ್ ಹಾಳೆಯ ಮೇಲೆ ಎಣ್ಣೆ ಹಚ್ಚಿ ಹಿಟ್ಟಿನ ಉಂಡೆಗಳನ್ನು ಮಧ್ಯದಲ್ಲಿಟ್ಟು ಪ್ಲಾಸ್ಟಿಕ್ ಹಾಳೆಯಿಂದ ಮುಚ್ಚಿ ತೆಳ್ಳಗೆ ತಟ್ಟಿಕೊಳ್ಳಿ. ನಂತರ ಅದರ ಮಧ್ಯದಲ್ಲಿ ಹೂರಣವನ್ನು ಹಾಕಿ ತುದಿಯನ್ನು ಮಡಚಿ ಕಡುಬುಗಳನ್ನು ತಯಾರಿಸಿ ನಂತರ ಎಣ್ಣೆಯಲ್ಲಿ ಗರಿಗರಿಯಾಗಿ ಕರಿಯಿರಿ. ಈ ಗರಂ ಗರಂ ಕಡುಬನ್ನು ಖಾರದ ಹಸಿರು ಚಟ್ನಿಯ ಜೊತೆ ಬಡಿಸಿ.

❍ ಸುಧಾ ಎಂ. ಹಿರೇಮಠ

# ಈ ಕಳ್ಳನ ಕೈ ಆ ಕಳ್ಳನ ಜೇಬಿನಲ್ಲಿ!




ಕೋ. ಚೆನ್ನಬಸಪ್ಪ
ನಿವೃತ್ತ ನ್ಯಾಯಾಧೀಶರು
೧೨೭, ಪಶ್ಚಿಮ ಕಾರ್ಡ್ ರಸ್ತೆ, ಮಹಾಲಕ್ಷ್ಮೀಪುರ,
ಬೆಂಗಳೂರು - ೫೬೦ ೦೮೬

**ನೂ**ತನ ಪ್ರಧಾನಿ ಇಂದ್ರಕುಮಾರ್ ಗುಜ್ರಾಲ್ ವಿಶ್ವಾಸಮತ ಪಡೆದ ನಂತರ ಮಾಡಿದ ಪ್ರಥಮ ಭಾಷಣದಲ್ಲಿ, ಕೊಟ್ಟ ಪತ್ರಿಕಾ ಸಂದರ್ಶನದಲ್ಲಿ-'ಬಡತನ ನಿವಾರಣೆ, ಸಾಕ್ಷರತೆ, ಪಾರದರ್ಶಕ ಆಡಳಿತೆ ನನ್ನ ಪ್ರಥಮ ಆದ್ಯತೆ' ಎಂದು ದೇಶಕ್ಕೆ ಅಭಿವಚನ ನೀಡಿದರು. ಒಂದು ದೃಷ್ಟಿಯಲ್ಲಿ ನೆಹರೂ ಮತ್ತು ಶಾಸ್ತ್ರೀ ಪರಂಪರೆಯನ್ನು ಅಳವಡಿಸಿಕೊಂಡ ಗುಜ್ರಾಲ್, ನೆಹರೂ ನಂತರ ಈ ದೇಶ ಪಡೆದ ಅತಿ ಜಾಣ ಅತಿ ತೂಕದ ಪ್ರಧಾನಿಯೆಂದು ಸಂತೋಷ. ಆದ್ದರಿಂದಲೇ ಅವರಾಡುವ ಒಂದೊಂದು ನುಡಿಯನ್ನೂ ಬಹು ಎಚ್ಚರದಿಂದ ಆಸಕ್ತಿಯಿಂದ ಆಲಿಸಿದೆ.

ಪ್ರಧಾನಿ ಆಡಿದ ಮಾತುಗಳನ್ನು ಕೇಳಿದಾಗ ಅವರು ಹೊಸದನ್ನೇನೂ ಹೇಳಿದಂತೆ ನನಗೆ ಕೇಳಿಸಲಿಲ್ಲ. ಸರ್ಕಾರ ಎಂಬ ಹೆಸರಿಗೆ ಅರ್ಹವಾಗಬೇಕಾದರೆ ಬಡತನ ನಿವಾರಣೆಗೆ ಆದ್ಯತೆ ನೀಡಲೇಬೇಕು. ಅಧಿಕಾರಕ್ಕೆ ಬರುವ ಎಲ್ಲ ವ್ಯಕ್ತಿಯೂ, ಪಕ್ಷವೂ ಹಾಗೆ ನೂರಾರು ವರ್ಷಗಳಿಂದ ಸಾರುತ್ತ ಬಂದಿದ್ದಾರೆ. ಅರಸರೂ, ಚಕ್ರವರ್ತಿಗಳೂ, ಸರ್ವಾಧಿಕಾರಿಗಳೂ, ಸಾಮ್ರಾಜ್ಯಶಾಹಿಗಳೂ, ಗಣತಂತ್ರಿಗಳೂ..... ಇದೇ ಘೋಷಣೆ ಮಾಡುತ್ತ ಬಂದಿದ್ದಾರೆ. ಆದನ್ನೇ ಇಂದಿರಾ ಗಾಂಧಿ ೨೫ ವರ್ಷಗಳ ಹಿಂದೆ 'ಗರೀಬಿ ಹಟಾವ್ರೋ'! ಎಂದು ಸಾರಿದರು. 'ಗರೀಬಿ' ಎಷ್ಟರ ಮಟ್ಟಿಗೆ ತೊಲಗಿದೆ ಎಂಬುದು ನಮ್ಮ ದೇಶದ ಹಳ್ಳಿ ಹಳ್ಳಿಯಲ್ಲಿ, ಕೇರಿ ಕೇರಿಯಲ್ಲಿ, ಶಹರದ ಕೊಳೆಗೇರಿಯಲ್ಲಿ ಎಲ್ಲೆಲ್ಲೂ ಕಣ್ಣಿಗೆ ಎದ್ದು ಕಾಣುತ್ತದೆ! ಸ್ವಾತಂತ್ರ್ಯಾನಂತರ ಈ ಐವತ್ತು ವರ್ಷಗಳಲ್ಲಿ ಬಡತನದ ರೇಖೆಯ ಕೆಳಗೆ ನಮ್ಮ ದೇಶದಲ್ಲಿ ೪೨ ಕೋಟಿ ಜನರಿದ್ದಾರೆಂದು ಸರ್ಕಾರವೇ ಹೇಳುತ್ತಿದೆ. ಇಲ್ಲ ೫೨ ಕೋಟಿ ಎಂದು ತಜ್ಞರು ಹೇಳುತ್ತಾರೆ. ಅಂದ ಮೇಲೆ ಬಡತನ ನಿವಾರಣೆ ಆಗುವ ರೋಗವಲ್ಲ ಎಂಬುದು ಲೋಕದ ಅನುಭವ. ನಮ್ಮ ದೇಶದಲ್ಲಿ ಆದರೂ ಅದು ಗಣನೀಯವಾಗಿ ನಿವಾರಣೆ ಆದೀತೆಂಬ ನಂಬುಗೆ ಕುಸಿಯುತ್ತಿದೆ!

ನನ್ನ ದೃಷ್ಟಿಯಲ್ಲಿ ನಮ್ಮ ದೇಶದ ಮೂಲ ಸಮಸ್ಯೆ - ಸಮಸ್ಯೆಗಳ ಸಮಸ್ಯೆಯ ಕಡೆ ನಮ್ಮ ಪ್ರಧಾನಿ ಗಮನ ಹರಿಸಿಲ್ಲ. ನಮ್ಮ ಅತಿ ಜರೂರು ಸಮಸ್ಯೆ ಅನ್ನ ದಾರಿದ್ರ್ಯವಲ್ಲ; ಅರ್ಥದಾರಿದ್ರ್ಯವಲ್ಲ. ಈ ದೇಶದ ಮುಂದಿರುವ ಏಕೈಕ, ಕೂಡಲೆ ಎದುರಿಸಬೇಕಾದ ಸಮಸ್ಯೆ ಸದ್ಗುಣದ ದಾರಿದ್ರ್ಯ; ಪ್ರಾಮಾಣಿಕತೆಯ ದಾರಿದ್ರ್ಯ (Poverty of character, Poverty of honesty). ಈ ದಾರಿದ್ರ್ಯದ ಮುಂದೆ ಇನ್ನಾವ ದಾರಿದ್ರ್ಯವೂ ಗಣನೀಯವಲ್ಲ. ಅನ್ನ ದಾರಿದ್ರ್ಯ ಸಾವಿರಾರು ವರ್ಷಗಳಿಂದಲೂ ಇದ್ದೇ ಇದೆ. ಆದರೂ ಈ ದೇಶ ಗೌರವದಿಂದ ಬದುಕಿತ್ತು. ಜನ ಆ ಬಡತನದಲ್ಲೂ ನೆಮ್ಮದಿಯಾಗಿದ್ದರು. ಆದರೆ ಪ್ರಾಮಾಣಿಕತೆಯ ದಾರಿದ್ರ್ಯ ಸ್ವಾತಂತ್ರ್ಯಾನಂತರ, ಆದರಲ್ಲೂ ಕಳೆದ ೨೫ ವರ್ಷಗಳಲ್ಲಿ ಬೃಹದಾಕಾರವಾಗಿ, ಭೂಮಿ ಆಕಾಶಗಳನ್ನು ಆವರಿಸುವಷ್ಟು ಬೆಳೆದಿದೆ. ಭ್ರಷ್ಟಾಚಾರ ಎಂಬ ಹೆಸರಿನಲ್ಲಿ ಅದು ಈ ದೇಶವನ್ನು ಮುಕ್ಕಿತಿನ್ನುತ್ತಿದೆ! ದಾವಾಗ್ನಿಯಂತೆ ಹತ್ತಿ ಉರಿಯುತ್ತಿದೆ! ಆಳುವವರಲ್ಲಿ, ಪ್ರಜೆಗಳಲ್ಲಿ ಪ್ರಾಮಾಣಿಕತೆ ಇಲ್ಲದಿದ್ದರೆ ಎಷ್ಟು ಸಂಪತ್ತು ಇದ್ದರೂ ವ್ಯರ್ಥ! ಕೇವಲ ವ್ಯರ್ಥ!!

**ನಮ್ಮ ಮಹಾನ್ ದೇಶ ಅಧಃಪತನದ ಆಳ ತಲುಪಲು ಏಕಮಾತ್ರ ಕಾರಣ ನಮ್ಮ ರಾಜಕಾರಣಿಗಳ ಭ್ರಷ್ಟಾಚಾರ, ಅನೀತಿ, ಅಧಿಕಾರ ದಾಹ, ಲಂಪಟತನ!**

ನಮ್ಮ ದೇಶ ಈಗ ಭ್ರಷ್ಟಾಚಾರದ ಮಲಕೂಪದಲ್ಲಿಯೇ ಮುಳುಗೆದ್ದು ಹೋಗಿದೆ ಎಂಬುದು ಎಂಥವರಿಗೂ ಗೊತ್ತಾಗಿದೆ. ಮಾಜಿ ಪ್ರಧಾನಿ ದಿವಂಗತ ರಾಜೀವಗಾಂಧಿ ಬೊಫೋರ್ಸ್ ಹಗರಣದಲ್ಲಿ ಸಿಕ್ಕಿಕೊಂಡಿದ್ದರೆಂದು ಈಗ ಜಗತ್ಪ್ರಸಿದ್ಧವಾಗಿದೆ. ಅದು ಕೇವಲ ೬೪ ಕೋಟಿ ರೂ.ಗಳ ಭ್ರಷ್ಟಾಚಾರ. ೧೩೩ ಕೋಟಿ ರೂ.ಗಳ ರಸಗೊಬ್ಬರ ಖರೀದಿ ಭ್ರಷ್ಟಾಚಾರದಲ್ಲಿ ಬದುಕಿರುವ ಮಾಜಿ ಪ್ರಧಾನಿ ಕೈವಾಡ ಇದೆ ಎಂದು ಮೇಲ್ನೋಟಕ್ಕೆ ಕಂಡು ಬಂದಿದೆ. ಅವರ ಮಗ ಪ್ರಭಾಕರರಾವ್ ರಸಗೊಬ್ಬರ ಖರೀದಿ ದಲಾಲಿ ೧೪ ಕೋಟಿ ಪಡೆದರೆಂದು ಬಯಲಾಗಿದೆ. ಅದೇ ಮಾಜಿ ಪ್ರಧಾನಿ ತಮ್ಮ ವಿರುದ್ಧ ಮಂಡಿಸಿದ್ದ ಅವಿಶ್ವಾಸ ಗೊತ್ತುವಳಿಯನ್ನು ಸೋಲಿಸಲು ಜೆಎಂಎಂ ಸದಸ್ಯರಿಗೆ ನಾಲ್ಕೂವರೆ ಕೋಟಿ ಲಂಚ ಕೊಟ್ಟರೆಂದು ವಿಚಾರಣೆಗೆ ಗುರಿಯಾಗಿದ್ದಾರೆ.

ಇದರಷ್ಟೇ ಪ್ರಖ್ಯಾತವಾದ ಇನ್ನೊಂದು ಜಗತ್ಪ್ರಸಿದ್ಧ ಭ್ರಷ್ಟಾಚಾರ ಬಿಹಾರದ ಪಶು ಸಂಗೋಪನಾ ಇಲಾಖಾ ಹಗರಣ! ೧೯೮೭ರಿಂದ ೯೫ರವರೆಗೆ ಈ ಇಲಾಖೆ ಪಶುಗಳ ಮೇವಿಗಾಗಿ ೯೫೦ರೂ.ಗಳನ್ನು ಖಜಾನೆಯಿಂದ ಪಾವತಿ ಮಾಡಿದೆ. ವಿಚಿತ್ರವೇನೆಂದರೆ ವಾರ್ಷಿಕ ಆಯ-ವ್ಯಯ ಪಟ್ಟಿಯಲ್ಲಿ ಮಂಜೂರಾಗದೆಯೇ ಪ್ರತಿವರ್ಷ ಖಜಾನೆಯಿಂದ ಹಣ ಹರಿದು ಹೋಗಿದೆ. ಆ ಪವಾಡಕ್ಕಿಂತ ವಿಚಿತ್ರವಾದ ಪವಾಡವೆಂದರೆ ಇಲಾಖೆಗೆ ಒಂದು ಹಿಡಿ ಮೇವೂ ಸರಬರಾಜಾಗಿಲ್ಲ! ಆ ಮೇವು ತಿಂದ ದನಗಳ ಸೆಗಣಿಯೂ ಇಲ್ಲ! ಆದರೂ ಇಂಥಾ ಕಂಪನಿಯಿಂದ, ಇಂಥ ಲಾರಿಗಳಲ್ಲಿ ಇಂಥ ಪಶುಸಂಗೋಪನಾ ಕಛೇರಿಗೆ ಇಷ್ಟು ಸಾವಿರ ಟನ್ ಮೇವು, ಬೂಸಾ, ಪಶು ಔಷಧಿ ಸರಬರಾಜು ಆಯಿತೆಂದು ಬರೋಬರಿ ಲೆಕ್ಕ,

ಕಟಾಕಟಿ ತೂಕದ ಬಿಲ್‌ಗಳು! ಇದನ್ನೆಲ್ಲ ತಪಾಸಣೆ ಮಾಡಿ ಬಿಹಾರದ ಮುಖ್ಯಮಂತ್ರಿ ಮತ್ತು ಅವರೊಡನೆ ಅಧಿಕಾರಿಗಳನ್ನು ರಾಜಕಾರಣಿಗಳನ್ನು ವಿಚಾರಣೆಗೆ ಗುರಿಪಡಿಸ ಬೇಕೆಂದು ಸಿಬಿಐ ನಿರ್ದೇಶಕ ಜೋಗೀಂದ್ರ ಸಿಂಗ್ ರಾಜ್ಯಪಾಲರ ಅಪ್ಪಣೆ (Sanction) ಕೇಳಿದಾಗ ಬಿಹಾರದಲ್ಲಿ ಲಾಲೂ 'ರಾಜೀನಾಮೆ ಕೊಡುವುದಿಲ್ಲ' ಎಂದು ಸಡ್ಡು ಹೊಡೆಯು ತ್ತಾರೆ! 'ನನ್ನನ್ನು ಮು.ಮಂತ್ರಿ ಮಾಡಿದವರು ಪ್ರಜೆಗಳು, ನೀವಲ್ಲ' ಎಂದು ಸವಾಲು ಎಸೆಯುತ್ತಾರೆ! ಅವರನ್ನು ಮುಖ್ಯಮಂತ್ರಿ ಮಾಡಿದ ಜನ ಮೇವು ಮೇಯಿರಿ ಎಂದು ಆದೇಶ ಕೊಟ್ಟಿರಲಿಲ್ಲ.

ಇದು ಮು.ಮಂತ್ರಿಯ ಮಾನವ ಸಹಜ ವಾದ ಪ್ರತಿಕ್ರಿಯೆ. ಆದರೆ ಅಧಿಕಾರದಲ್ಲಿ ಇಲ್ಲದ ಮಾಜಿ ಪ್ರಧಾನಿ ಚಂದ್ರಶೇಖರ್ ಎಂಬ ಸ್ವಯಂ ಘೋಷಿತ ಗಾಂಧೀ-ಜೆ.ಪಿ.ಭಕ್ತ ಕನ್ಯಾಕುಮಾರಿ ಯಿಂದ ಕಾಶ್ಮೀರದವರೆಗೆ ಪಾದಯಾತ್ರೆ ಮಾಡಿದ ಮಹಾನುಭಾವನೆಂದು ತಿಳಿದು ಕೊಂಡ ವ್ಯಕ್ತಿ ಲಾಲೂಯಾದವರನ್ನು ಸಮರ್ಥಿ ಸುತ್ತ: 'ಇಂದು ಅವರು. ನಾಳೆ ನಮ್ಮಲ್ಲಿ ಯಾರಾದರೂ ಆಗಬಹುದು' ಎಂದು ಜೋಗೀಂದ್ರಸಿಂಗ್ ಅವರನ್ನು ತರಾಟೆಗೆ ತೆಗೆದುಕೊಳ್ಳುತ್ತಾರೆ. ಇಲ್ಲಿದೆ ಭ್ರಷ್ಟಾಚಾರವನ್ನು ಮುಚ್ಚಿಕೊಳ್ಳುವ ರಾಜಕಾರಣಿಗಳ ಗುಟ್ಟು. ಇಂದು ಲಾಲೂಪ್ರಸಾದ್ ಯಾದವರನ್ನು ಕಟಕಟೆ ಹತ್ತಿಸಿದರೆ ನಾಳೆ ಚಂದ್ರಶೇಖರ್ ಅಥವಾ ಭ್ರಷ್ಟಾಚಾರದಲ್ಲಿ ತೊಡಗಿದ ಯಾವ ರಾಜಕಾರಣಿಯೂ ಕಟಕಟೆ ಹತ್ತಬೇಕಾದೀತು. ಅಂಥ ರಾಜಕಾರಣಿಗಳು ಅಗಣಿತ.

ಈ ಭ್ರಷ್ಟಾಚಾರ ಸರ್ವಾಂತರ್ಯಾಮಿ. ಕರ್ನಾಟಕದಲ್ಲೂ ದೈತ್ಯಾಕಾರದಲ್ಲಿ ಮೆರೆಯು ತ್ತಿದೆ. ಕೃಷಿ ಮಂತ್ರಿ ಬೈರೇಗೌಡರು, ಭೂಸಾರ ಸಂರಕ್ಷಣೆಯ ನೆವದಿಂದ ಏಳೆಂಟು ನೂರು ಕೋಟಿ - ಹೌದು ೭೦೦-೮೦೦ ಕೋಟಿ ರೂಪಾಯಿಗಳನ್ನು ಅಧಿಕಾರಿಗಳು ಕಂಟ್ರಾಕ್ಟರು ಗಳು ನುಂಗಿ ನೀರು ಕುಡಿದಿದ್ದಾರೆಂದು ಬೊಬ್ಬೆ ಹೊಡೆದಿದ್ದಾರೆ! ಆಸ್ಪತ್ರೆಗಳಿಗೆ ಔಷಧಿ ಕೊಂಡಿದ್ದಾಗಿ ಲೆಕ್ಕ ತೋರಿಸಿ ನೂರಾರು ಕೋಟಿ ಲೂಟಿ ಹೊಡೆದಿದ್ದಾರೆಂದು ಕಾರ್ಯದರ್ಶಿ ಪಾಂಡೆ ವರದಿಕೊಟ್ಟಿದ್ದಾರೆ! ಮೈಸೂರು ಸುತ್ತಮುತ್ತ ಸಾವಿರಾರು ಕೋಟಿ ಬೆಲೆ ಬಾಳುವ ಸರ್ಕಾರಿ ಭೂಮಿಯನ್ನು ಆಳುವ ಪಕ್ಷ ಮತ್ತು ವಿಪಕ್ಷದ ರಾಜಕಾರಣಿಗಳು ಕಬಳಿಸಿದ್ದಾರೆಂದು ಗದ್ದಲವೊ ಗದ್ದಲ. ಅದನ್ನೆಲ್ಲ ಸದ್ದಿಲ್ಲದಂತೆ ಮಾಡಲು ಶಾಸಕರು, ಮಂತ್ರಿಗಳು, ಅಧಿಕಾರಿಗಳು ಮಸಲತ್ತು ನಡೆಸಿದ್ದಾರೆಂದು ಸುದ್ದಿ. ಭ್ರಷ್ಟರನ್ನೇಕೆ ಉಳಿಸಬೇಕು? ಮಾಜಿ ಪ್ರಧಾನಿ ಚಂದ್ರಶೇಖರ್ ಮಾತಿನಲ್ಲಿ - ಇಂದು ಅವರಿಗಾದದ್ದು ನಾಳೆ ನಮಗೂ ಆಗಬಹು ದೆಂಬ ಅಂಜಿಕೆ! ಆದ್ದರಿಂದ ಅವರನ್ನು ಉಳಿಸಿದರೆ ತಾವೂ ಉಳಿಯಬಹುದು. ಈ ಕಳ್ಳನ ಕೈ ಆ ಕಳ್ಳನ ಜೇಬಿನಲ್ಲಿ!

ಇಂಥ ಭ್ರಷ್ಟಾಚಾರದ ಉದಾಹರಣೆಗಳು ಬೆಳಗಾದರೆ ಬಯಲಾಗುತ್ತಿವೆ. ಮೊನ್ನೆ ಮೊನ್ನೆ ೮೦ ಕೋಟಿ ಬೆಲೆಬಾಳುವ ಡಾಂಬರು (ತಾರೆಣ್ಣೆ) ಕಳ್ಳಸಂತೆಗೆ ಹೋಯಿತೆಂದು ವರದಿ. ಅಂಗನವಾಡಿಗಳಿಗಾಗಿ ಸರಬರಾಜಾದ ಆಹಾರ ದಿನಸಿ, ಪೌಷ್ಟಿಕಾಹಾರ ದಿನಸಿ, ಗರ್ಭಿಣಿಯರು, ಬಾಣಂತಿಯರು, ಮಕ್ಕಳ ಹೆಸರಿನಲ್ಲಿ ಖಜಾನೆ ಲೂಟಿಯಾಗಿ ಭ್ರಷ್ಟರ ಹೊಟ್ಟೆ ಸೇರಿದೆ ಎಂದು ಸದನ ಸಮಿತಿಯ ವರದಿ ಸಾರಿದೆ....ಸಾಕ್ಷರತಾ ಆಂದೋಲನದ ಹೆಸರಿನಲ್ಲಿ ಭ್ರಷ್ಟರು ನೂರಾರು ಕೋಟಿ ನುಂಗಿದ್ದಾರೆಬುಂದು ಲೋಕ ವಿಖ್ಯಾತ.... ಒಂದೇ ಎರಡೇ! ನೂರಾರು.... ಸಾವಿರಾರು ಹಗರಣ. ವಿಶ್ವಬ್ಯಾಂಕ್ ಸಾಲ, ಅಂತಾರಾಷ್ಟ್ರೀಯ ಆರ್ಥಿಕ ನಿಧಿ (IMF) ಧನಸಹಾಯ, ಸರ್ಕಾರೇತರ ಸಂಘಗಳಿಗಾಗಿ ನೆರವು, ಭೂಕಂಪ ಸಂತ್ರಸ್ತರಿ ಗಾಗಿ ವಿದೇಶೀ ಸಹಾಯ....ಎಲ್ಲದೂ ಎಲ್ಲದೂ..... ಭ್ರಷ್ಟರ ತಳವಿಲ್ಲದ ಬಾವಿಯಲ್ಲಿ ಸುರಿದು ಹೋಗುತ್ತಿದೆ. ಹೀಗಾದರೆ ಬಡತನದ ನಿವಾರಣೆಗಾಗಿ ಲಕ್ಷ ಕೋಟಿ ಖರ್ಚಾದರೂ ಅದೆಲ್ಲ ಭ್ರಷ್ಟರ ಡೊಳ್ಳುಹೊಟ್ಟೆ ಸೇರುತ್ತದೆ.

ರೋಮನ್ ಸಾಮ್ರಾಜ್ಯ ಚರಿತ್ರೆಯನ್ನು ಬರೆದ ಮಹಾ ಇತಿಹಾಸಕಾರ ಎಡ್ವರ್ಡ್ ಗಿಬ್ಬನ್‌ನನ್ನು ಒಬ್ಬಾತ ಒಂದು ಪ್ರಶ್ನೆ ಕೇಳಿದನಂತೆ: 'ರೋಮನ್ ಸಾಮ್ರಾಜ್ಯದ ಪತನಕ್ಕೆ ಏನು ಕಾರಣ ಎಂಬುದನ್ನು ಒಂದು ಶಬ್ದದಲ್ಲಿ ಹೇಳುತ್ತೀರಾ?'. ಅದಕ್ಕೆ ಗಿಬ್ಬನ್ ಒಂದು ಕ್ಷಣ ಮೌನವಾಗಿದ್ದು 'ಭ್ರಷ್ಟಾಚಾರ' (Corruption) ಎಂದು ಉತ್ತರಕೊಟ್ಟನಂತೆ. ಮತ್ತೆ ಮುಂದುವರೆದು 'ಹೌದು ಭ್ರಷ್ಟಾಚಾರ, ಅನೀತಿ, ಅಧಿಕಾರ ದಾಹ, ಲೈಂಗಿಕ ಲಂಪಟತನ ರೋಮನ್ ಸಾಮ್ರಾಜ್ಯವನ್ನು ಧ್ವಂಸಮಾಡಿತು' ಎಂದನಂತೆ. ಈಗ ''ನಮ್ಮ ಮಹಾನ್ ಭಾರತ' ಆಗಲೆ ಅವನತಿಯ ಹಾದಿಯಲ್ಲಿ ಬಹುದೂರ ಮುಂದುವರಿದಿದ್ದರೆ, ಅಧಃಪತನದ ಪ್ರಪಾತ ದಲ್ಲಿ ಆಳಕ್ಕೆ ತಲುಪಿದ್ದರೆ ಅದಕ್ಕೆ ಏಕಮಾತ್ರ ಕಾರಣ ನಮ್ಮ ರಾಜಕಾರಣಿಗಳ ಭ್ರಷ್ಟಾಚಾರ; ಅನೀತಿ; ಅಧಿಕಾರ ದಾಹ; ಲಂಪಟತನ'' ಎಂದು ಧಾರಾಳವಾಗಿ ಹೇಳಬಹುದು.

ಇದಕ್ಕೇನಾದರೂ ಪರಿಹಾರವಿದೆಯೇ? ರೋಮನ್ ಚಕ್ರಾಧಿಪತ್ಯದ ಕೊನೆಯ ಸಾಮ್ರಾಟನ ಅಂತ್ಯದಲ್ಲಿ ಪರಿಹಾರ ಮಾರ್ಗ ಸೂಚಿತವಾಗಿದೆ. ಕೊನೆಯ ಚಕ್ರವರ್ತಿ ಡಯೋಕ್ಲೀಷನ್‌ನನ್ನು ಮೃಗದಂತೆ ಬೆನ್ನಟ್ಟಿ ಹಿಡಿದು, ಬೋನಿನಲ್ಲಿ ಕೂಡಿ ಕಾನ್‌ಸ್ಟಾಂಟಿ ನೋಪಲ್ ಬೀದಿಯಲ್ಲಿ ಕ್ರಿ.ಪೂ.೪೭೬ರಲ್ಲಿ ಜನ ಭರ್ಚಿಯಿಂದ ತಿವಿದು ಹಂದಿನಾಯಿಯಂತೆ ಕೊಂದುಹಾಕಿದರು! ಅದರಿಂದ ಜನರಿಗಾಗು ತ್ತಿದ್ದ ದೌರ್ಜನ್ಯ ನಿಂತಿತು. ಆಳುತ್ತಿದ್ದವರ ಅಟ್ಟಹಾಸ ಕೊನೆಗೊಂಡಿತು. ಕೊನೆಗೆ ರೋಮನ್ ಚಕ್ರಾಧಿಪತ್ಯ ಅಸ್ತಂಗತವಾಯಿತು!

ನಮ್ಮ ದೇಶ ಇಂದಿನ ಆಳುವ ಪ್ರಭುಗಳು ರೋಮನ್ ಚಕ್ರವರ್ತಿಗಿಂತ ವೈಭವ ಜೀವನದಲ್ಲಿ, ಆಮೋದ ಪ್ರಮೋದದಲ್ಲಿ, ಐಶ್ವರ್ಯ ಸಂಪಾದನೆಯಲ್ಲಿ, ಅಧಿಕಾರದಾಹ, ಲಂಪಟತನದಲ್ಲಿ ಏನೇನೂ ಕಡಿಮೆಯಿಲ್ಲ ಎಂಬುದು ಕಣ್ಣಿಲ್ಲದ ಕುರುಡನಿಗೂ ಕಾಣುತ್ತಿದೆ. ಅವರ ಅಧಿಕಾರ ದಾಹ ರೋಮನ್ ಚಕ್ರವರ್ತಿಯ ಅಧಿಕಾರ ದಾಹಕ್ಕಿಂತ ಕಿಂಚಿತ್ತೂ ಕಡಿಮೆಯಿಲ್ಲ. ನಮ್ಮ ದೇಶದಲ್ಲೂ ರೋಮ್ ಜನಾಂಗದ ಸಂತತಿಯೆ ಅಧಿಕಾರಕ್ಕೆ ಬಂದರೂ ಬರಬಹುದು!! ಆದರೆ ಡಯೋಕ್ಲೀಷನ್ ಚಕ್ರವರ್ತಿಗಾದ ಉಗ್ರ ಶಿಕ್ಷೆಯನ್ನು ಈ ದೇಶದ ಜನ ಆಳುವವರಿಗೆ ವಿಧಿಸಿಯಾರೆಂದು ಊಹಿಸಲೂ ಸಾಧ್ಯವಿಲ್ಲ! ಕ್ರಿ.ಪೂ.೪೭೦ರಲ್ಲಿ ಆ ಜನ ಆ ಆಳ್ವಿಕೆಯಿಂದ ಬೇಸತ್ತು ಕೈಕೊಂಡ ಉಗ್ರಕ್ರಮ ಕೈಕೊಳ್ಳುವ ಯಾವ ಲಕ್ಷಣಗಳೂ ಈ ನಮ್ಮ ಮಹಾನ್ ಭಾರತದಲ್ಲಿ ಕಾಣುತ್ತಿಲ್ಲ! ಹಾಗಾದರೆ, ಈ ವ್ಯವಸ್ಥೆಯೇ ಬದಲಾಗಬೇಕು ಎನ್ನುತ್ತೀರಾ? ಅದಕ್ಕೆ ಅರಿಸ್ಟಾಟಲ್ ಉತ್ತರ ಕೊಟ್ಟಿದ್ದಾನೆ - 'ಮಾನವನ ದುರಾಶೆಯಿಂದ ಯಾವ ವ್ಯವಸ್ಥೆಯೂ ಸುರಕ್ಷಿತವಲ್ಲ' ಎಂದು.

ಹಾಗಾದರೆ ಪರಿಹಾರ? ಒಂದೇ ಒಂದು. ಅಪ್ರಾಮಾಣಿಕತೆ, ಅನೀತಿ, ಅಧಿಕಾರದಾಹ ನೀಗಬೇಕು! ಇದೇ ನಮ್ಮ ಸಮಸ್ಯೆ. ಈ ಸಮಸ್ಯೆ ಪರಿಹಾರವಾದರೆ ಇನ್ನೆಲ್ಲ ಸಮಸ್ಯೆಗಳೂ ತಮಗೆ ತಾವೇ ಪರಿಹಾರವಾಗುತ್ತವೆ. ಈ ಸಮಸ್ಯೆಯ ಪರಿಹಾರಕ್ಕೆ ಒಬ್ಬ ವಿವೇಕಾನಂದ ಬುದ್ಧ ಬಸವ ಬರಬೇಕು. ರಾಜಕಾರಣಿಯಿಂದ ಸಾಧ್ಯವಿಲ್ಲ.

**ವಿದ್ಯಾವಕಾಶ ಹಾಗೂ ಉದ್ಯೋಗ ಮಾರ್ಗ ಕುರಿತ ಮಾಹಿತಿಯ ಅಗತ್ಯ ಯಾವುದೊಂದು ಪ್ರದೇಶಕ್ಕೆ ಸೀಮಿತವಾಗುವಂತಹದಲ್ಲ. ಇಂತಹ ಅಮೂಲ್ಯ ಮಾಹಿತಿಗಾಗಿ ನಾಡಿನಾದ್ಯಂತ ಕಾತರಿಸಿ ಕೂತ ಆಕಾಂಕ್ಷಿಗಳ ಸಂಖ್ಯೆ ಸಣ್ಣದೂ ಅಲ್ಲ. ಕನಸು, ಪರಿಶ್ರಮಗಳಿಗೆ ನೆರವು ನೀಡಿ ಗೊತ್ತು ಗುರಿ ಕಲ್ಪಿಸುವ ಪ್ರಯತ್ನವೇ ಈ ಅಂಕಣ. ಪ್ರತಿ ತಿಂಗಳು ಪ್ರಕಟವಾಗುವ ಈ ವಿಭಾಗ ಮಾಹಿತಿಯ ಕಣಜ. ಗೊಂದಲದಲ್ಲಿ ಸಿಲುಕಿದ ಯುವಕರ ಮನಸ್ಸನ್ನು ಇಂಥ ಮಾಹಿತಿಯೆಡೆಗೆ ಸೆಳೆಯುವುದು ಮನೆಯ ಹಿರಿಯರ ಕರ್ತವ್ಯ.**

# S.S.L.C. ನಂತರ ಏನು?

**ಇದು ಲಕ್ಷಾಂತರ ವಿದ್ಯಾರ್ಥಿಗಳನ್ನು ನಿರಂತರ ಕಾಡುವ ಯಕ್ಷ ಪ್ರಶ್ನೆ? ವಿದ್ಯಾರ್ಥಿ ದೆಸೆಯಲ್ಲಿ ಎದುರಾಗುವ ಇಂಥ ಸವಾಲಿಗೆ ಸಮರ್ಪಕ ಉತ್ತರ ದೊರೆಯದಿದ್ದರೆ ವಿದ್ಯಾರ್ಥಿಯ ಇಡೀ ಭವಿಷ್ಯವೇ ತಿರುಗುಮುರುಗಾಗುವ ಅಪಾಯವಿರುತ್ತದೆ. ಸಮಯ ಸರಿದ ನಂತರ ಪರಿತಪಿಸುವ ಬದಲು ಆರಂಭದಲ್ಲೇ ಸರಿಯಾದ ಹಾದಿಯನ್ನು ಆಯ್ಕೆ ಮಾಡಿಕೊಳ್ಳುವುದು ಜಾಣತನ.**

○ ಡಾ. ಎಸ್.ಸಿ. ಶರ್ಮಾ

ಮೆಟ್ರಿಕ್ ಅಥವಾ ಎಸ್.ಎಸ್.ಎಲ್.ಸಿ. ನಂತರ ಯಾವ ಶಿಕ್ಷಣ ಪಡೆಯಬೇಕೆಂಬುದು ಬಹು ದೊಡ್ಡ ಪ್ರಶ್ನೆಯಾಗಿರುತ್ತದೆ. ಎಲ್ಲ ವಿದ್ಯಾರ್ಥಿಗಳು ವೃತ್ತಿಪರ ಕಾಲೇಜುಗಳಿಗೆ ಹೋಗಲು ಸಾಧ್ಯವಿಲ್ಲ. ವಿದ್ಯಾರ್ಥಿಗಳ ತಂದೆ-ತಾಯಿಗಳು ಕೂಡ ಆರ್ಥಿಕವಾಗಿ ಅಷ್ಟೊಂದು ಶಕ್ತರಾಗಿರಲಾರರು. ಈ ಹಂತದಲ್ಲಿ ಗ್ರಾಮೀಣ ಪ್ರದೇಶದ ವಿದ್ಯಾರ್ಥಿಗಳು ಶಿಕ್ಷಣವನ್ನು ಮುಂದುವರಿಸಲಾಗದೇ ಯಾವುದೋ ಮನೆ ವೃತ್ತಿಗೆ ಅಂಟಿಕೊಳ್ಳುತ್ತಾರೆ. ಆದರೆ ಇವು ಜೀವನ ನಿರ್ವಹಣೆಗೆ ಸಾಕಷ್ಟು ಆದಾಯ ತರಲಾರವು.

ಮೆಟ್ರಿಕ್ ನಂತರ ಪದವಿಪೂರ್ವ ಶಿಕ್ಷಣವನ್ನು ಹಲವರು ಆಯ್ದುಕೊಳ್ಳುತ್ತಾರೆ. ಪಿ.ಯು.ಸಿ. ಶಿಕ್ಷಣ ಪಡೆದುಕೊಂಡ ನಂತರವೂ ಇದೇ ಪ್ರಶ್ನೆ ಉದ್ಭವಿಸುತ್ತದೆ.

ಆದ್ದರಿಂದ ವಿದ್ಯಾರ್ಥಿಗಳು ಎಸ್.ಎಸ್.ಎಲ್.ಸಿ. ನಂತರದ ಭವಿಷ್ಯದ ಹೆಜ್ಜೆಯನ್ನು ಬಹಳ ಎಚ್ಚರಿಕೆಯಿಂದ ಇಡಬೇಕಾಗುತ್ತದೆ. ಇದರಲ್ಲಿ ಪೋಷಕರ, ಶಿಕ್ಷಕರ ಮಾರ್ಗದರ್ಶನ ಬಹುಮುಖ್ಯ ಪಾತ್ರ ವಹಿಸುತ್ತದೆ.

ಎಸ್.ಎಸ್.ಎಲ್.ಸಿ. ನಂತರ ಪಿ.ಯು.ಸಿ.ಯನ್ನು ವ್ಯಾಸಂಗ ಮಾಡಲು ಇಚ್ಛಿಸುವ ವಿದ್ಯಾರ್ಥಿಗಳಿಗೆ ಇಲ್ಲಿ ಮೂರು ದಾರಿಗಳು ಕಂಡುಬರುತ್ತವೆ. ಅವುಗಳು ಯಾವುವೆಂದರೆ ವಿಜ್ಞಾನ, ಕಲೆ ಮತ್ತು ವಾಣಿಜ್ಯ. ಈ ಒಂದೊಂದು ಕೋರ್ಸ್‌ಗಳು ಅನೇಕ ಕವಲುಗಳಾಗಿವೆ. ಉದಾಹರಣೆಗೆ ವಿಜ್ಞಾನದಲ್ಲಿ ೧೬ ಬಗೆಯ ವಿಷಯಗಳಿವೆ, ಕಲೆಯಲ್ಲಿ ೨೮ಕ್ಕಿಂತ ಹೆಚ್ಚು ಕೋರ್ಸ್‌ಗಳಿವೆ, ವಾಣಿಜ್ಯದಲ್ಲಿ ೧೦ಕ್ಕಿಂತ ಹೆಚ್ಚು ಕೋರ್ಸ್‌ಗಳಿವೆ. ಇದಲ್ಲದೆ ೧೩ಕ್ಕಿಂತ ಹೆಚ್ಚು ಪ್ರಥಮ ಭಾಷೆಗಳನ್ನಾಗಿ ಸ್ವೀಕರಿಸಲು ಅನುಕೂಲಗಳಿವೆ. ವಿದ್ಯಾರ್ಥಿಗಳು ತಮಗೆ ಅನುಕೂಲವಾಗುವ ರೀತಿಯಲ್ಲಿ ಯೋಚಿಸಿ ಸೂಕ್ತವಾದ ವಿಷಯಗಳನ್ನು ಆರಿಸಿಕೊಳ್ಳುವುದೇ ಉತ್ತಮವಾದ ಮಾರ್ಗ. ಅವರಿಗೆ ಇದರಲ್ಲಿ ಕಡಿಮೆ ತಿಳುವಳಿಕೆ ಅಥವಾ ಅನುಮಾನಗಳಿದ್ದರೆ ಹಿರಿಯರ ಮಾರ್ಗದರ್ಶನವನ್ನು ಪಡೆದುಕೊಳ್ಳಬಹುದು. ಈ ನಿಟ್ಟಿನಲ್ಲಿ "ಬಿಸಿಲ ಬದುಕು" ಪತ್ರಿಕೆಯ "ಮಾರ್ಗದರ್ಶಿ" ಅಂಕಣವೂ ಸಹಾಯಕ್ಕೆ ಬರುತ್ತದೆ.

ಈ ಹಂತದಲ್ಲಿ ಪದವಿಗಳಿಗೆ ಜೋತುಬೀಳದ ವಿದ್ಯಾರ್ಥಿಗಳ ನೆರವಿಗೆ ಹಲವಾರು ಉದ್ಯೋಗ ಭರವಸೆಯ ಕೋರ್ಸುಗಳು ಬರುತ್ತವೆ. ಇಂತಹ ಕೋರ್ಸುಗಳೆಂದರೆ ಐ.ಟಿ.ಐ.ನಲ್ಲಿ ಫಿಟ್ಟರ್, ಕಾರ್ಪೆಂಟರ್, ಟರ್ನರ್, ವೈಂಡರ್, ಇಲೆಕ್ಟ್ರಿಸಿಯನ್ ಇತ್ಯಾದಿ. ಈ ಕೋರ್ಸುಗಳನ್ನು ವ್ಯಾಸಂಗ ಮಾಡಿದ ನಂತರ ಯಾವುದಾದರೂ ಕಾರ್ಖಾನೆಗಳಲ್ಲಿ ಫೋರ್‌ಮೆನ್ ಹುದ್ದೆ ನಿರ್ವಹಿಸಬಹುದು ಅಥವಾ ತಾವೇ ಸ್ವಂತ ಉದ್ಯೋಗಗಳನ್ನು ಆರಂಭಿಸಲು ರಾಷ್ಟ್ರೀಯ ಬ್ಯಾಂಕುಗಳು ಹಾಗೂ ಸರಕಾರದ ಹಣಕಾಸು ಸಂಸ್ಥೆಗಳಿಂದ ಸಾಲ ಹಾಗೂ ಸಹಾಯಧನ ಪಡೆಯಬಹುದು.

ಗ್ರಾಮೀಣ ಮಟ್ಟದಲ್ಲಿ ಹೈಸ್ಕೂಲ್ ಶಿಕ್ಷಣ ಅಷ್ಟೊಂದು ಬಲಗೊಳ್ಳದಿರುವುದು ಕೂಡ ಗ್ರಾಮೀಣ ವಿದ್ಯಾರ್ಥಿಗಳು ಅವಕಾಶ ವಂಚಿತರಾಗಲು ಕಾರಣವಾಗುತ್ತದೆ. ಹೈಸ್ಕೂಲ್ ಶಿಕ್ಷಣದ ಅವಧಿಯಲ್ಲಿ ಪೂರಕ ಅಭ್ಯಾಸ ಪರಿಕರ, ಪ್ರಯೋಗಾಲಯ, ಕೋಚಿಂಗ್ ಹಾಗೂ ವಿಶೇಷ ಗಮನ ಸಾಧ್ಯವಾಗದಿರುವುದು ವಿದ್ಯಾರ್ಥಿಗಳಿಗೆ ಮಾರಕವಾಗುತ್ತದೆ.

ಹೈಸ್ಕೂಲ್ ಹಂತದಲ್ಲಿ ವಿದ್ಯಾರ್ಥಿಗಳು ಕಷ್ಟಪಟ್ಟು ಹಾಗೂ ಅದು ತಮ್ಮ ಆದ್ಯ ಕರ್ತವ್ಯವೆಂದು ಪರಿಶ್ರಮ ವಹಿಸಿದ್ದಾದರೆ ಅವರು ಖಂಡಿತವಾಗಿ ಅವಕಾಶಗಳಿಂದ ವಂಚಿತರಾಗಲಾರರು.

ಮಾಧ್ಯಮಿಕ ಶಿಕ್ಷಣದ ಹಂತದಲ್ಲಿ ತಂದೆ-ತಾಯಿ ಹಾಗೂ ಶಿಕ್ಷಕರು ಹೆಚ್ಚು ಗಮನಹರಿಸಿ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಹಾಗೂ ಪರಿಶ್ರಮದ ಪಾಠ ಕಲಿಸಿಕೊಡಬೇಕಾಗುತ್ತದೆ.

ಎಸ್.ಎಸ್‌ಎಲ್.ಸಿ.ಯಲ್ಲಿ ಉತ್ತಮವಾದ ಅಂಕಗಳನ್ನು ಗಳಿಸಿದವರಿಗೆ ಇನ್ನೊಂದು ಸುವರ್ಣಾವಕಾಶ ಕಾದಿರುತ್ತದೆ. ಆ ಸುವರ್ಣಾವಕಾಶವೆಂದರೆ ಡಿಪ್ಲೊಮ ಕೋರ್ಸುಗಳಾದ ಮೆಕಾನಿಕಲ್, ಎಲೆಕ್ಟ್ರಿಕಲ್, ಸಿವಿಲ್, ಆಟೋಮೊಬೈಲ್, ಎಲೆಕ್ಟ್ರಾನಿಕ್ಸ್, ಟೆಕ್ಸ್‌ಟೈಲ್

ಮುಂತಾದವುಗಳನ್ನು ಆಯ್ದುಕೊಳ್ಳುವುದು. ಈ ಕೋರ್ಸು ಮುಗಿಸಿದವರು ಸರಕಾರಿ ಸಂಸ್ಥೆಗಳಲ್ಲಿ ಜೂನಿಯರ್ ಇಂಜಿನಿಯರ್ ಹುದ್ದೆಗೆ ಅರ್ಹರಾಗಿರುತ್ತಾರೆ. ಅಷ್ಟಲ್ಲದೆ ಅವರು ಸರಕಾರದ ಹಣಕಾಸು ನಿಗಮದಿಂದ ಸಹಾಯಧನ ಹಾಗೂ ಸಾಲವನ್ನು ಪಡೆದು ಒಂದು ಉದ್ಯಮವನ್ನು ಸ್ಥಾಪಿಸಿ ಹಲವರಿಗೆ ಉದ್ಯೋಗವನ್ನು ಸಹ ನೀಡಬಹುದು. ಡಿಪ್ಲೊಮ ಮುಗಿದ ನಂತರ ಇಂಜಿನಿಯರ್ ಪದವಿಯ ವ್ಯಾಸಂಗವನ್ನು ಮುಂದುವರೆಸುವ ದಾರಿಯೂ ತೆರೆದಿರುತ್ತದೆ.

ಬಾಹ್ಯ ಪರೀಕ್ಷೆಗಳನ್ನು ಕಟ್ಟಿಯೂ ಸಹ ಪಾಲಿಟೆಕ್ನಿಕ್ ಡಿಪ್ಲೋಮಾಗಳನ್ನು ಪಡೆದು ಕೊಂಡು ಸ್ವಯಂ ಉದ್ಯೋಗ ಪ್ರಾರಂಭಿಸ ಬಹುದು. ಕೆಲವೊಮ್ಮೆ ಇವು ಹೆಚ್ಚು ಫಲಕಾರಿ ಹಾಗೂ ಪರಿಣಾಮಕಾರಿಯಾಗಿಯೂ ಪರಿಣಮಿಸುತ್ತವೆ.

ಎಸ್.ಎಸ್.ಎಲ್.ಸಿ.ಯ ನಂತರ ಬೆರಳಚ್ಚು (ಟೈಪಿಂಗ್) ಹಾಗೂ ಕಂಪ್ಯೂಟರ್ ಕೋರ್ಸುಗಳನ್ನು ಮಾಡಿದರೆ ಅವರ ಭವಿಷ್ಯದಲ್ಲಿ ಒಳ್ಳೆಯದಾಗುತ್ತದೆ. ಈಗ ಎಲ್ಲೆಡೆ ಕಂಪ್ಯೂಟರೀಕರಣದಿಂದಾಗಿ ಈ ವಿಭಾಗ ದಲ್ಲಿರುವ ವಿದ್ಯಾರ್ಥಿಗಳಿಗೆ ಉತ್ತಮ ಅವಕಾಶ ಗಳಿರುತ್ತವೆ. ಬೇರೆ ಯಾವುದಾದರೂ ಕೋರ್ಸು ಮಾಡುವಾಗ ಜೊತೆಗೆ ಕಂಪ್ಯೂಟರ್ ಶಿಕ್ಷಣ ಪಡೆಯುವುದು ಉತ್ತಮ. ಏಕಕಾಲದಲ್ಲಿ ಎರಡೂ ಪೂರ್ಣವಾಗುತ್ತವೆ. ಕಂಪ್ಯೂಟರ್ ವಿಭಾಗದಲ್ಲಿ ಅನೇಕ ಉತ್ತಮವಾದ ಕೋರ್ಸುಗಳಿವೆ. ಅವುಗಳಲ್ಲಿ ಮುಖ್ಯವಾದವು: ಆಫೀಸ್ ಆಟೋಮೇಶನ್, ಡಿ.ಟಿ.ಪಿ. (ಮುದ್ರಣ ಹಾಗೂ ಅಕ್ಷರ ಜೋಡಣೆ) ಇತ್ಯಾದಿ. ಇವು ವಿದ್ಯಾರ್ಥಿಗಳಿಗೆ ಉತ್ತಮ ಭವಿಷ್ಯವನ್ನು ಒದಗಿಸಿಕೊಡುತ್ತವೆ.

ಆಧುನಿಕವಾದ ಹೊಟೇಲ್ ಮ್ಯಾನೇಜ್ ಮೆಂಟ್, ಹೊಟೇಲ್ ಕೇಟರಿಂಗ್, ಮುದ್ರಣ ತಂತ್ರಜ್ಞಾನ, ಡಿಪ್ಲೊಮಾ ಇನ್ ಫಾರ್ಮಸಿ ಕೋರ್ಸುಗಳು ನಗರ ಪ್ರದೇಶದಲ್ಲಿ ಬಹಳ ಪ್ರಸಿದ್ಧಿ ಹೊಂದಿರುವ ಕೋರ್ಸುಗಳಾಗಿವೆ. ಇವು ಉತ್ತಮ ಉದ್ಯೋಗವನ್ನು ನೀಡುವಂತಹ ಕೋರ್ಸುಗಳೂ ಹೌದು. ಡಿಪ್ಲೊಮಾ ಇನ್ ಫಾರ್ಮಸಿ ಸ್ವಂತ ಔಷಧಿ ವ್ಯಾಪಾರ ಮಳಿಗೆ ಸ್ಥಾಪಿಸಿಕೊಳ್ಳಲು ಅನುಕೂಲವಾದ ಒಂದು ಕೋರ್ಸು.

ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ ಮೆಟ್ರಿಕ್ ಹಾಗೂ ಪಿ.ಯು.ಸಿ.ಗಳಲ್ಲಿ ಅಭ್ಯರ್ಥಿಗಳು ಗರಿಷ್ಠ ಅಂಕಗಳನ್ನು ಪಡೆದುಕೊಂಡರೆ ಅವರು ತಮ್ಮ ಭವಿಷ್ಯದ ಬಗ್ಗೆ ಅಷ್ಟೊಂದು ಆತಂಕಪಟ್ಟುಕೊಳ್ಳ ಬೇಕಿಲ್ಲ. ಫೈನ್ ಆರ್ಟ್ ನಂತಹ ಕೋರ್ಸುಗಳು ಸರ್ಕಾರಿ ಉದ್ಯೋಗವನ್ನಲ್ಲದೆ ಖಾಸಗಿಯಾಗಿ ವೃತ್ತಿ ನಡೆಸಬಹುದಾದಂತಹ ಅವಕಾಶ ನೀಡುತ್ತವೆ.

ಡಿಪ್ಲೊಮಾ, ಡ್ರಾಯಿಂಗ್ ಇಲ್ಲವೆ ಫೈನ್ ಆರ್ಟ್ಸ್ ಕೋರ್ಸುಗಳು ಪಕ್ಕದ ರಾಜ್ಯದಲ್ಲಿ ಸಹ ಪ್ರವೇಶಕ್ಕೆ ಅರ್ಹತೆ ಒದಗಿಸುತ್ತವೆ. ಮಹಾರಾಷ್ಟ್ರ, ಆಂಧ್ರ ಹಾಗೂ ತಮಿಳುನಾಡು ಗಳಲ್ಲಿ ಈ ಕೋರ್ಸುಗಳಿಗೆ ಪರ ರಾಜ್ಯದವರೂ ಪ್ರವೇಶ ಪಡೆಯಬಹುದು.

ಕರ್ನಾಟಕ ಲೋಕಸೇವಾ ಆಯೋಗ ಹಾಗೂ ಯುಪಿಎಸ್‌ಸಿಯ ಸ್ಪರ್ಧಾತ್ಮಕ ಪರೀಕ್ಷೆಗಳು ಸಹ ಗರಿಷ್ಠ ಅಂಕ ಪಡೆದ ವಿದ್ಯಾರ್ಥಿಗಳಿಗೆ ಹೆಚ್ಚಿನ ಅವಕಾಶ ನೀಡುತ್ತವೆ. ಮೆಟ್ರಿಕ್ ಹಾಗೂ ಪದವಿಪೂರ್ವ ಪರೀಕ್ಷೆಗಳಲ್ಲಿ ಹೆಚ್ಚು ಶ್ರಮವಹಿಸಿದವರು ಇಂತಹ ಮುಕ್ತ ಪರೀಕ್ಷೆಗಳಲ್ಲಿ-ಹೆಚ್ಚಿನ ಶೇಕಡಾವಾರು ಕೂಡ ಗಳಿಸಿ ಶ್ರಮ ಸಾರ್ಥಕ ಮಾಡಿಕೊಳ್ಳಬಹುದು.

ಈ ಪರೀಕ್ಷೆಗಳಿಗೆ ಸ್ಪರ್ಧಿಸುವವರಿಗೆ ಸರ್ಕಾರ ಹಾಗೂ ಕೆಲವು ಖಾಸಗಿ ಸಂಸ್ಥೆಗಳು ಪೂರ್ವಭಾವಿ ತರಬೇತಿಯನ್ನು ನೀಡುತ್ತವೆ. ಈ ಬಗ್ಗೆ ದೈನಿಕ ಹಾಗೂ ಇತರೆ ಮ್ಯಾಗಜಿನ್‌ಗಳಲ್ಲಿ ಜಾಹೀರಾತು ಪ್ರಕಟಗೊಂಡಿರುತ್ತವೆ. ಜಾಹೀರಾತುಗಳಲ್ಲಿ ಮಾಹಿತಿ ವಿಳಾಸಗಳೆಲ್ಲವೂ ಸ್ಪಷ್ಟವಾಗಿರುವುದರಿಂದ ಈ ಬಗ್ಗೆ ಹೆಚ್ಚಿನ ತೊಂದರೆಪಟ್ಟುಕೊಳ್ಳಬೇಕಾಗಿಲ್ಲ.

ಎಸ್.ಎಸ್.ಎಲ್.ಸಿ. ಪಾಸಾದ ವಿದ್ಯಾರ್ಥಿ ಗಳು ರೇಷ್ಮೆಯಲ್ಲಿ ಡಿಪ್ಲೊಮಾ ಪಡೆಯಲು ಅರ್ಹರಾಗಿರುತ್ತಾರೆ. ರೇಷ್ಮೆ ಉದ್ಯಮವು ಕರ್ನಾಟಕದ ಪ್ರಮುಖವಾದ ಉದ್ಯಮ ಹಾಗೂ ನಮ್ಮ ದೇಶದ ಪ್ರಧಾನ ರಫ್ತಾಗುವ ನಿಧಿ. ಈ ಉದ್ಯಮವು ಹಳ್ಳಿಗಳಿಂದ ಹಿಡಿದು ಪಟ್ಟಣದ ಸಾವಿರಾರು ಜನರಿಗೆ ಉದ್ಯೋಗವನ್ನು ಒದಗಿಸಿಕೊಡುತ್ತಿವೆ. ರೇಷ್ಮೆಯಲ್ಲಿ ಡಿಪ್ಲೊಮಾ ಪಡೆದರೆ ರೇಷ್ಮೆ ವಿಭಾಗದಲ್ಲಿ ಡೆಮೊನ್‌ಸ್ಟ್ರೇಟ್‌ರ್ ಹುದ್ದೆಗೆ ಅರ್ಜಿ ಸಲ್ಲಿಸಬಹುದು ಅಥವಾ ಸ್ವತಃ ಅವರು ನವೀನ ರೀತಿಯ ರೇಷ್ಮೆ ವ್ಯವಸಾಯ ಮಾಡಿ ಅಧಿಕವಾದ ಇಳುವರಿ ಪಡೆಯ ಬಹುದು. ಇದು ಗ್ರಾಮಾಂತರ ಪ್ರದೇಶದ ವಿದ್ಯಾರ್ಥಿಗಳಿಗೆ ಉತ್ತಮವಾದ ಕೋರ್ಸ್ ಆಗಿದೆ.

ಪರೀಕ್ಷೆ ಹಾಗೂ ಸಂದರ್ಶಗಳನ್ನು ವಾರ್ಷಿಕವಾಗಿ ನಡೆಸುತ್ತಾರೆ. ವಿದ್ಯಾರ್ಥಿಗಳು ಇದರ ಅನುಕೂಲ ಪಡೆಯಬಹುದು. ಇದರ ಜಾಹೀರಾತುಗಳನ್ನು ದಿನ ಪತ್ರಿಕೆಗಳಲ್ಲಿ ಹಾಗೂ ದೂರದರ್ಶನದಲ್ಲಿ ಪ್ರಸಾರ ಮಾಡುತ್ತಾರೆ. ಇವುಗಳನ್ನು ವಿದ್ಯಾರ್ಥಿಗಳು ಗಮನಿಸಬೇಕು.

ಇನ್ನು ಮಹಿಳೆಯರಿಗಾಗಿ ವಿಶೇಷ ಸವಲತ್ತು ಹಾಗೂ ಮೀಸಲಾತಿ ಕಲ್ಪಿಸಿರುವ ಹಿನ್ನೆಲೆಯಲ್ಲಿ ಅವರೂ ಕೂಡ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಸರಿಸಾಟಿಯಾಗಿ ನಿಲ್ಲಬಹುದು. ಕಳೆದ ಒಂದೂವರೆ ದಶಕದಿಂದಲೂ ಮಹಿಳೆ ಯರಿಗಾಗಿಯೇ ಮಹಿಳಾ ಪಾಲಿಟೆಕ್ನಿಕ್, ಮಹಿಳಾ ಐಟಿಐ ಹಾಗೂ ಮಹಿಳೆಯರಿಗಾಗಿ ವೊಕೇಶನಲ್ ಕೋರ್ಸುಗಳನ್ನು ಸರ್ಕಾರ ಹಾಗೂ ಖಾಸಗಿ ಸಂಸ್ಥೆಯವರು ತೆರೆದಿದ್ದಾರೆ.

ಕರ್ನಾಟಕ ರಾಜ್ಯದಲ್ಲಿ ಇಂತಹ ಸುಮಾರು ೩೦ಕ್ಕೂ ಹೆಚ್ಚು ಶಿಕ್ಷಣ ಸಂಸ್ಥೆಗಳು ಮಹಿಳೆಯರಿಗಾಗಿಯೇ ವಿಶೇಷ ಕೋರ್ಸು ಗಳನ್ನು ಕೊಡಮಾಡಿವೆ.

ಒಂದು ವೇಳೆ ಎಸ್.ಎಸ್.ಎಲ್.ಸಿ.ಯಲ್ಲಿ ಫೇಲಾದರೆ ವಿದ್ಯಾರ್ಥಿಗಳು ನಿರಾಶರಾಗದೆ ಮತ್ತು ಸೋಮಾರಿತನದಿಂದ ಕಾಲ ಕಳೆಯದೆ, ಒಂದು ವರ್ಷದ ಕೋರ್ಸುಗಳಿಗೆ ಸೇರ ಬಹುದು. ಅವುಗಳಲ್ಲಿ ಡಿಸೇಲ್ ಮೆಕ್ಯಾನಿಕ್, ವೆಲ್ಡರ್, ಕಟಿಂಗ್ ಮತ್ತು ಟೈಲರಿಂಗ್, ಕಂಪ್ಯೂಟರ್ ಸಾಫ್ಟ್‌ವೇರ್ ಅತ್ಯುತ್ತಮವಾದ ಕೋರ್ಸುಗಳು.

ಒಟ್ಟಿನಲ್ಲಿ ಎಸ್.ಎಸ್.ಎಲ್.ಸಿ. ನಂತರ ವಿದ್ಯಾರ್ಥಿಗಳು ವ್ಯಾಸಂಗದ ಜೊತೆಗೆ ಇತರ ಕೋರ್ಸುಗಳನ್ನು ಹಾಗೂ ವಿವಿಧ ಪ್ರವೇಶ ಪರೀಕ್ಷೆಗಳನ್ನು ಕಟ್ಟುತ್ತಿರಬೇಕು. ಇದರಿಂದ ಅವರಿಗೆ ಜ್ಞಾನಾರ್ಜನೆಯಾಗುತ್ತದೆ ಹಾಗೂ ಉದ್ಯೋಗ ಮಾರ್ಗವೂ ತೆರೆದುಕೊಳ್ಳುತ್ತದೆ.

ಈ ಲೇಖನ ಎಸ್.ಎಸ್.ಎಲ್.ಸಿ. ನಂತರ ವಿದ್ಯಾವಕಾಶಗಳ ಸಮಗ್ರ ಚಿತ್ರಣವಲ್ಲ. ಪುಟ ಮಿತಿಯಿಂದಾಗಿ ಒಟ್ಟಾರೆ ಅವಕಾಶಗಳ ಸಂಕ್ಷಿಪ್ತ ವಿವರಗಳನ್ನಷ್ಟೇ ಇಲ್ಲಿ ನೀಡಲು ಸಾಧ್ಯವಾಗಿದೆ. ಮುಂಬರುವ ಸಂಚಿಕೆಗಳಲ್ಲಿ ಒಂದೊಂದು ಕೋರ್ಸಿನ ಬಗ್ಗೆ ಲಭ್ಯವಿರುವ ವಿವರಗಳನ್ನೆಲ್ಲಾ ನೀಡಲಾಗುವುದು. ●

# ಟಿ ವಿ ಯಲ್ಲಿ ಮಿಂಚುವ ಅವಕಾಶ

○ ಶಿವರಾಯ ಕೊತವಾಲ

**ಪು**ಣೆಯ ಫಿಲ್ಮ್ ಹಾಗೂ ಟೆಲಿವಿಜನ್ ಸಂಸ್ಥೆಯು ಸಿನಿಮಾ ಹಾಗೂ ಟಿವಿ ಕ್ಷೇತ್ರಗಳಲ್ಲಿ ವಿವಿಧ ಕೋರ್ಸುಗಳನ್ನು ಒದಗಿಸುತ್ತದೆ. ಪೋಸ್ಟ್ ಡಿಪ್ಲೊಮಾ ಇನ್ ಡೈರೆಕ್ಟಿಂಗ್, ಡಿಪ್ಲೊಮಾ ಇನ್ ಮೋಶನ್ ಪಿಕ್ಚರ್, ಫೊಟೊಗ್ರಾಫಿ, ಸೌಂಡ್ ರೆಕಾರ್ಡಿಂಗ್ ಆ್ಯಂಡ್ ಸೌಂಡ್ ಇಂಜನಿಯರಿಂಗ್, ಫಿಲ್ಮ್ ಎಡಿಟಿಂಗ್, ಪ್ರೊಡಕ್ಷನ್, ಸಿನೆ ಡಿಸೈನ್ ಮುಂತಾದವುಗಳಲ್ಲಿ ತರಬೇತಿ ನೀಡಲಾಗುತ್ತದೆ.

ಎರಡು ವರ್ಷಗಳ ಡಿಪ್ಲೊಮಾ ತರಗತಿಗಳಿವೆ. ನಟನೆ ಹಾಗೂ ಇಂಗ್ಲಿಷ್ ಸುದ್ದಿ ಓದುವ ಕುರಿತು ತರಬೇತಿ ನೀಡಲಾಗುತ್ತದೆ. ಈ ತರಬೇತಿಯಲ್ಲಿ ಸಾಮಾನ್ಯ ಜ್ಞಾನ ಹಾಗೂ ಸಾಮಾನ್ಯ ಇಂಗ್ಲಿಷ್ ಕುರಿತಾದ ತಿಳಿವಳಿಕೆಯನ್ನು ನೀಡಲಾಗುತ್ತದೆ.

ಇದೇ ತೆರನಾಗಿ ನ್ಯಾಶನಲ್ ಸ್ಕೂಲ್ ಆಫ್ ಡ್ರಾಮಾ ಕೂಡ ನಟನೆ ಹಾಗೂ ನಿರ್ದೇಶನದಲ್ಲಿ ತರಬೇತಿ ನೀಡುತ್ತದೆ. ಎನ್.ಎಸ್.ಡಿ.ಯು ದೆಹಲಿಯಲ್ಲಿದೆ. ನೀವು ನೋಡುವ ಬಹುತೇಕ ಸಿನೇಮಾ, ನಾಟಕ ನಿರ್ದೇಶಕರು ಹಾಗೂ ನಿರ್ಮಾಪಕ ವರ್ಗದವರು ಇಲ್ಲಿ ತರಬೇತಿ ಪಡೆದವರಾಗಿದ್ದಾರೆ.

ಕರ್ನಾಟಕದಲ್ಲಿ ನೀನಾಸಂ (ನೀಲಕಂಠೇಶ್ವರ ನಾಟಕ ಸಂಘ) ಈ ನಿಟ್ಟಿನಲ್ಲಿ ಕಾರ್ಯಪ್ರವೃತ್ತವಾಗಿದೆ. ನಟನೆ, ನಿರ್ದೇಶನ ಇತ್ಯಾದಿ ರಂಗಭೂಮಿಗೆ ಸಂಬಂಧಿಸಿದ ವಿಷಯಗಳಲ್ಲಿ ಇದು ವಿಶೇಷ ತರಬೇತಿ ಒದಗಿಸುತ್ತದೆ. ಇಲ್ಲಿ ಪರಿಣತಿ ಪಡೆದವರು ಸಿನೇಮಾ ರಂಗದೊಂದಿಗೆ ಕೂಡ ಬಾಂಧವ್ಯ ಬೆಳೆಸಬಹುದಾಗಿದೆ.

ಇಂದಿನ ಖಾಸಗಿ ಟಿವಿ ಯುಗದಲ್ಲಿ ಈ ಕೋರ್ಸುಗಳಿಂದ ಬಹಳಷ್ಟು ಪ್ರಯೋಜನ ಅಂದರೆ ಉದ್ಯೋಗಾವಕಾಶ ಪಡೆಯಬಹುದು. ಈ ನಿಟ್ಟಿನಲ್ಲಿ ಅಭ್ಯರ್ಥಿಗಳು ಶಿಸ್ತುಬದ್ಧರಾಗಿ ಯತ್ನಿಸಿದರೆ ಉತ್ತಮ ಫಲಿತಾಂಶ ನಿರೀಕ್ಷಿಸಬಹುದು.

ಇಂತಹ ಜನಪ್ರಿಯ ಮಾಧ್ಯಮಗಳಲ್ಲಿ ಕೆಲಸ ಮಾಡಲು ಸಾಮಾನ್ಯವಾಗಿ ಎಲ್ಲರಿಗೂ ಆಸಕ್ತಿ ಇರುತ್ತದೆ. ಇದರ ಬಗ್ಗೆ ಹೆಚ್ಚು ಗಮನಹರಿಸಿ ವ್ಯಕ್ತಿತ್ವ ವಿಕಾಸ ಹಾಗೂ ಸಾಮಾನ್ಯ ಜ್ಞಾನವನ್ನು ಬೆಳೆಸಿಕೊಂಡರೆ ಹೆಚ್ಚು ಸಮರ್ಥವಾಗಿ ಸಂದರ್ಶನ, ಪರೀಕ್ಷೆ ಎದುರಿಸಬಹುದು.

ವಿಜುವಲ್ ಮೀಡಿಯಾ ಎಂದು ಪ್ರಖ್ಯಾತಗೊಳ್ಳುತ್ತಿರುವ ಚಾನಲ್‌ಗಳು ಬೇಕಾದಷ್ಟು ಉತ್ತಮ ಉದ್ಯೋಗಾವಕಾಶಗಳನ್ನು ಕಲ್ಪಿಸಲು ಶಕ್ತವಾಗಿವೆ. ಈ ನಿಟ್ಟಿನಲ್ಲಿ ವ್ಯಕ್ತಿತ್ವ, ಆರೋಗ್ಯ, ದೇಹದಾರ್ಢ್ಯ ಬೆಳೆಸಿಕೊಳ್ಳುದು ಬಹುಮುಖ್ಯ.

ಅತ್ಯುತ್ತಮ ಭಾಷಾಜ್ಞಾನ, ಇಂಗ್ಲಿಷ್‌ನಲ್ಲಿ ನಿರರ್ಗಳತೆ ಬಹಳ ಪ್ರಮುಖವಾದುದು. ಹೆಚ್ಚು ಭಾಷೆ ಬಲ್ಲವರಿಗೆ ಆದ್ಯತೆ ದೊರೆಯಬಹುದು. ಗಂಡಸರಿಗೆ 'ಸ್ಮಾರ್ಟ್ ಆ್ಯಂಡ್ ಹ್ಯಾಂಡ್‌ಸಮ್', ಹೆಂಗಸರಾದರೆ 'ಸ್ಮಾರ್ಟ್ ಆ್ಯಂಡ್ ಬ್ಯುಟಿಫುಲ್' ವ್ಯಕ್ತಿತ್ವದ ಅಗತ್ಯವಿದೆ.

ಸ್ಕ್ರಿಪ್ಟ್ ರೈಟಿಂಗ್, ಕಾರ್ಯಕ್ರಮಗಳ ನಿರ್ವಹಣೆ, ಸಮಯಸ್ಫೂರ್ತಿ, ಕುಶಲತೆ, ಆಕರ್ಷಣೆ ಮಾಡುವಂತಹ ಮಾತುಗಾರಿಕೆ ಇವು ನಿಮ್ಮನ್ನು ಅತ್ಯಂತ ಜನಪ್ರಿಯ ಹಾಗೂ ಉತ್ತಮ ಸಂಬಳದ ಕೆಲಸಕ್ಕೆ ಅರ್ಹರನ್ನಾಗಿ ಮಾಡುತ್ತವೆ.

ಇಲ್ಲಿ ಬಹುಮುಖ್ಯವಾಗಿ ನೆನಪಿಡಬೇಕಾದ ಅಂಶವೆಂದರೆ ಹೆಚ್ಚು ಶಿಕ್ಷಣ ಹಾಗೂ ವಿವಿಧ ಸಂಸ್ಕೃತಿಗಳ ಪರಿಚಯ ಹಾಗೂ ವಿಷಯ ಸಂಗ್ರಹಣಾ ಸಾಮರ್ಥ್ಯವನ್ನು ಕಠಿಣ ಶ್ರಮದಿಂದ ಬೆಳೆಸಿಕೊಳ್ಳಬಹುದಾಗಿದೆ.

ವೀಕ್ಷಕರಿಗೆ ಅತ್ಯಂತ ಹತ್ತಿರವೆನಿಸುವ ಭಾಷಾ ಉಚ್ಚಾರ ಹಾಗೂ ಆಪ್ತ ಮಾತುಗಾರಿಕೆಯನ್ನು ಬೆಳೆಸಿಕೊಳ್ಳುವುದು ಅಗತ್ಯ. ಈ ಸಂದರ್ಭದಲ್ಲಿ ಬಹಳಷ್ಟು ಸ್ಪರ್ಧೆಯು ಇರುತ್ತದೆ. ಅದಕ್ಕನುಗುಣವಾಗಿ ನಿಮ್ಮನ್ನು ಹೊಂದಿಸಿಕೊಳ್ಳುವುದು ಆವಶ್ಯಕ. ●

# ಕನ್ನಡ ಎಂ.ಎ. ಪ್ರವೇಶಕ್ಕೆ ಆಹ್ವಾನ

**ಮ**ದರಾಸು ವಿಶ್ವವಿದ್ಯಾಲಯದ ಕನ್ನಡ ಎಂ.ಎ.ಗೆ ಸೇರಲು ಅರ್ಜಿಗಳನ್ನು ಕರೆಯಲಾಗಿದೆ. ಇಲ್ಲಿ ರೆಗ್ಯುಲರ್ ವಿದ್ಯಾರ್ಥಿಯಾಗಿ ಮಾತ್ರ ಎಂ.ಎ. ಮಾಡಲು ಅವಕಾಶವಿದೆ. ಅರೆಕಾಲಿಕ ಅಧ್ಯಯನಕ್ಕೆ ಅವಕಾಶವಿಲ್ಲ.

ಪದವಿ ತರಗತಿಯಲ್ಲಿ ಕನ್ನಡವನ್ನು ಐಚ್ಛಿಕವಾಗಿ ಅಥವಾ ಒಂದು ಭಾಷೆಯಾಗಿ ಅಭ್ಯಾಸ ಮಾಡಿದವರು ಅರ್ಜಿ ಹಾಕಲು ಅರ್ಹರು. ಪದವಿ ತರಗತಿಯ ಫಲಿತಾಂಶ ಪ್ರಕಟವಾಗುವ ಮೊದಲೂ ಅರ್ಜಿಯನ್ನು ಸಲ್ಲಿಸಬಹುದು. ಫಲಿತಾಂಶ ಪ್ರಕಟವಾದ ಬಳಿಕ ಅಂಕಪಟ್ಟಿಯನ್ನು ಕಳುಹಿಸಿಕೊಡಬೇಕು. ಅಂಚೆಯ ಮೂಲಕ ಅರ್ಜಿಯನ್ನು ಪಡೆಯಲು ಜೂನ್ ೨೩, ನೇರವಾಗಿ ಪಡೆಯಲು ಜೂನ್ ೩೦ ಕೊನೆ ದಿನ. **ಅರ್ಜಿಗಳನ್ನು ಜೂನ್ ೩೦ರೊಳಗೇ ಸಲ್ಲಿಸಬೇಕು.** ಅರ್ಜಿ ಫಾರಂ ತರಿಸಿಕೊಳ್ಳಲು 'ದಿ ರಿಜಿಸ್ಟ್ರಾರ್, ಯೂನಿವರ್ಸಿಟಿ ಆಫ್ ಮದ್ರಾಸ್' ಹೆಸರಿಗೆ ೧೦೦ ರೂಪಾಯಿಯ ಡಿಡಿಯನ್ನು ಹಾಗೂ ೮ ರೂಪಾಯಿ ಅಂಚೆ ಚೀಟಿ ಹಚ್ಚಿದ, ಸ್ವವಿಳಾಸವಿರುವ ಉದ್ದನೆಯ ಕವರನ್ನು 'ದಿ ರಿಜಿಸ್ಟ್ರಾರ್, ಯೂನಿವರ್ಸಿಟಿ ಆಫ್ ಮದ್ರಾಸ್, ಮದ್ರಾಸ್-೬೦೦೦೦೫' ಎಂಬ ವಿಳಾಸಕ್ಕೆ ಇಂಗ್ಲಿಷಿನಲ್ಲಿ ಬರೆದು ಕಳುಹಿಸಬೇಕು.

ಭರ್ತಿ ಮಾಡಿದ ಅರ್ಜಿಯನ್ನು 'ಮುಖ್ಯಸ್ಥರು, ಕನ್ನಡ ವಿಭಾಗ, ಮದ್ರಾಸು ವಿಶ್ವವಿದ್ಯಾಲಯ, ಮರೀನಾ ಕ್ಯಾಂಪಸ್, ಚೆನ್ನೈ-೬೦೦೦೦೫' ಈ ವಿಳಾಸಕ್ಕೆ ಕಳುಹಿಸಬೇಕು. ●

# ನೀವು ಕಂಪನಿ ಸೆಕ್ರೆಟರಿಯಾಗಬೇಕೆ?

ಕಂಪನಿ ಸೆಕ್ರೆಟರಿ ಕೋರ್ಸ್-ತರಬೇತಿ ಪಡೆಯಲು ಕನಿಷ್ಠ ಪಿ.ಯು.ಸಿ. ಪಾಸು ಮಾಡಿಕೊಂಡಿರಬೇಕು. ಇಲ್ಲವೆ ದಿ ಇನ್ಸಿಟಿಟ್ಯೂಟ್ ಆಫ್ ಕಂಪನಿ ಸೆಕ್ರೆಟರೀಸ್ ಆಫ್ ಇಂಡಿಯಾದಲ್ಲಿ ಕನಿಷ್ಠ ೯ ತಿಂಗಳ ನೋಂದಾಯಿತ ಸದಸ್ಯರಾಗಿದ್ದರೆ ಈ ವೃತ್ತಿ ಶಿಕ್ಷಣವನ್ನು ಪಡೆಯಬಹುದು.

ಈ ಕೋರ್ಸಿನಲ್ಲಿ ಒಟ್ಟು ಮೂರು ಗ್ರುಪ್‌ಗಳಲ್ಲಿ ಪರೀಕ್ಷೆ ನಡೆಸಲಾಗುತ್ತದೆ. ಗ್ರುಪ್ ಒಂದರಲ್ಲಿ ಫೈನಾನ್ಸಿಯಲ್ ಮ್ಯಾನೇಜ್‌ಮೆಂಟ್, ಕಾರ್ಪೊರೇಟ್ ಪ್ಲಾನಿಂಗ್ ಆ್ಯಂಡ್ ಮ್ಯಾನೇಜ್‌ಮೆಂಟ್ ಇನ್‌ಫಾರ್ಮೇಶನ್ ಹಾಗೂ ಮ್ಯಾನೇಜ್‌ಮೆಂಟ್ ಕಂಟ್ರೋಲ್ ಆ್ಯಂಡ್ ಅಡಿಟ್ ಎಂಬ ವಿಷಯಗಳಿರುತ್ತವೆ. ಗ್ರುಪ್ ಎರಡರಲ್ಲಿ ಕಾರ್ಪೊರೇಟ್ ಟ್ಯಾಕ್ಸ್-ಮ್ಯಾನೇಜ್‌ಮೆಂಟ್ ಆ್ಯಂಡ್ ಪ್ಲಾನಿಂಗ್ ಇಂಡೈರೆಕ್ಟ್ ಟ್ಯಾಕ್ಸೇಶನ್ - ಲಾ ಆ್ಯಂಡ್ ಪ್ರೊಸಿಜರ್ಸ್, ಡ್ರಾಫ್ಟಿಂಗ್ ಆ್ಯಂಡ್ ಕನ್‌ವೇಯನ್ಸಿಂಗ್, ಗ್ರುಪ್ ಮೂರರಲ್ಲಿ ಕಂಪನಿ ಲಾ ಆ್ಯಂಡ್ ಪ್ರ್ಯಾಕ್ಟೀಸ್, ಡೈರೆಕ್ಟರ್ಸ್ ಬೋರ್ಡ್ ಆ್ಯಂಡ್ ರಿಲೇಟೆಡ್ ಸೆಕ್ರೆಟರಿಯಲ್ ಪ್ರ್ಯಾಕ್ಟೀಸ್, ಅಡ್ವಾನ್ಸಡ್ ಸೆಕ್ರೆಟರಿಯೇಟ್ ಪ್ರಾಕ್ಟೀಸ್. ಪ್ರತಿ ವಿಷಯಕ್ಕೆ ೩೦ ರೂಪಾಯಿ ಶುಲ್ಕದಂತೆ ವಿಷಯ ನೋಂದಾಯಿಸಬಹುದು.

ಕಂಪನಿ ಸೆಕ್ರೆಟರಿಶಿಪ್‌ನ್ನು ಹೊಂದಿದವರಿಗೆ ಕೆಲವು ವಿಶ್ವವಿದ್ಯಾಲಯಗಳಲ್ಲಿ ಪಿ.ಎಚ್.ಡಿ ಮಾಡಲು ಸಹ ಅವಕಾಶವಿದೆ. ಕೆಲವೆಡೆ ಉಪನ್ಯಾಸಕ ಹುದ್ದೆಗಳಿಗೂ ಈ ಕಂಪನಿ ಸೆಕ್ರೆಟರಿ ಕೋರ್ಸ್ ಅರ್ಹತೆ ಗಳಿಸಿಕೊಡುತ್ತದೆ. ಸಾರ್ವಜನಿಕ ಕಂಪನಿಗಳು ಹಾಗೂ ಖಾಸಗಿ ಕಂಪನಿಗಳಲ್ಲಿ ಸಹ ಉದ್ಯೋಗಾವಕಾಶಗಳು ಲಭ್ಯ.

ಈ ಕೋರ್ಸಿಗೆ ಅಹ್ಮದಾಬಾದ್, ಬೆಂಗಳೂರು, ಬರೋಡಾ, ಬೆಳಗಾವಿ ಭುವನೇಶ್ವರ, ಮುಂಬಯಿ, ಕಲ್ಕತ್ತ, ಚಂಡೀಗಡ ಮುಂತಾದೆಡೆಗಳಲ್ಲಿ ಪರೀಕ್ಷಾ ಕೇಂದ್ರಗಳನ್ನು ಮಾಡಲಾಗಿದೆ. ಬೆಂಗಳೂರು ಕಚೇರಿ ವಿಳಾಸ - ದಿ ಇನ್ಸಿಟ್ಯೂಟ್ ಆಫ್ ಕಂಪನಿ ಸೆಕ್ರೆಟರೀಸ್ ಆಫ್ ಇಂಡಿಯಾ ಶರೀಫ್ ಚೇಂಬರ್ಸ್, ರಿಯರ್ ಬ್ಲಾಕ್ ೩ ಮಹಡಿ, ಕನ್ನಿಂಗ್ ಹ್ಯಾಂ ರಸ್ತೆ, ಬೆಂಗಳೂರು.

## ಎಂ.ಬಿ.ಎ.

ಮಾಸ್ಟರ್ ಇನ್ ಬಿಸಿನೆಸ್ ಎಡ್ಮಿನಿಸ್ಟ್ರೇಶನ್ ಎಂಬ ಈ ಸ್ನಾತಕೋತ್ತರ ಪದವಿಯು ಬಿ.ಕಾಂ. ಡಿಗ್ರಿಯವರಿಗೆ ಹೆಚ್ಚಿನ ಉದ್ಯೋಗಾವಕಾಶಕ್ಕೆ ಮಾರ್ಗ ಕಲ್ಪಿಸುತ್ತದೆ. ಇದು ಎರಡು ವರ್ಷಗಳ ಪೋಸ್ಟ್ ಗ್ರಾಜುವೇಶನ್ ಕೋರ್ಸ್. ದೇಶದ ಯಾವುದೇ ವಿಶ್ವವಿದ್ಯಾಲಯದಿಂದ ಈ ಪದವಿಗೆ ಪ್ರವೇಶ ಪಡೆಯಬಹುದು. ಇಂಜಿನಿಯರಿಂಗ್ ಓದಿದವರಿಗೆ ಈ ಪದವಿಯು ಇಂದು 'ಮಸ್ಟ್' ಆಗಿ ಪರಿಣಮಿಸಿದೆ.

ಬಿ.ಕಾಂ. ಪದವಿಗೆ ಇರುವ ವಿಷಯಗಳೇ ಇಲ್ಲಿ ಕಲಿಯಬೇಕಾಗಿದ್ದರೂ ಮ್ಯಾನೇಜ್‌ಮೆಂಟ್ ಅಕೌಂಟಿಂಗ್‌ನಂತಹ ವಿಷಯ ಬಹಳಷ್ಟು ಪ್ರಾಕ್ಟಿಕಲ್ ಆಗಿರುವುದರಿಂದ ಇದು ಉತ್ಪಾದನಾ ಘಟಕಗಳ ಕೆಲಸಕ್ಕೆ ಉಪಯುಕ್ತವಾದುದು.

ಕಾಮರ್ಸ್ ಪದವಿ ಪರೀಕ್ಷೆಯಲ್ಲಿ ಪ್ರಥಮ ಶ್ರೇಣಿ ಪಡೆದವರು ಈ ಕೋರ್ಸ್‌ಗೆ ಅತ್ಯಂತ ಅರ್ಹರಾಗುತ್ತಾರೆ.

ಇಲ್ಲಿ ವಿಶಿಷ್ಟವಾದುದೆಂದರೆ ಕೆಲಸ ಸಿಕ್ಕ ತಕ್ಷಣವೇ ನೀವು ಯಾವುದೇ ಪೂರ್ವಭಾವಿ ಅನುಭವವಿಲ್ಲದೇ ಅಕೌಂಟಿಂಗ್ ಹಾಗೂ ಮ್ಯಾನೇಜ್‌ಮೆಂಟ್ ಮೋಟಿವೇಶನ್ ಕಾರ್ಯಗಳನ್ನು ಸಲೀಸಾಗಿ ಮಾಡಲು ಶಕ್ತರಾಗುತ್ತೀರಿ. ಉಪನ್ಯಾಸಕ ವೃತ್ತಿಯಿಂದ ಹಿಡಿದು ಸರ್ಕಾರಿ ಹಾಗೂ ಸಾರ್ವಜನಿಕ ವಲಯದ ಬೃಹತ್ ಉದ್ಯಮಗಳಲ್ಲಿ ಅತ್ಯುತ್ತಮ ಹುದ್ದೆ ಒದಗಿಸಬಹುದಾದ ಈ ಕೋರ್ಸ್ ಇಂದು ಬಹಳಷ್ಟು ಬೇಡಿಕೆಯಲ್ಲಿದೆ. (ಮುಂದಿನ ಸಂಚಿಕೆಯಲ್ಲಿ ಎಂ.ಬಿ.ಎ. ಬಗ್ಗೆ ವಿವರವಾದ ಮಾಹಿತಿ ನೀಡಲಾಗುವುದು)

## ಐಸಿಡಬ್ಲ್ಯು

ಇಂಡಿಯನ್ ಕಾಸ್ಟ್ಸ್ ಆ್ಯಂಡ್ ವರ್ಕ್ಸ್ ಎಂಬ ಕೋರ್ಸು ಕೂಡ ಸಿ.ಎ.ದಷ್ಟೇ ಫಲಕಾರಿಯಾದುದು. ಆದರೆ ಇದರಲ್ಲಿ ಕಲಿಕೆಯ ವಿಷಯಗಳ ಪಟ್ಟಿ ಹೆಚ್ಚಾಗಿರುತ್ತದೆ. ಇವುಗಳಲ್ಲಿ 'ಆಯ್ಕೆ'ಯ ಪ್ರಶ್ನೆ ವಿರಳ.

ಕಾಸ್ಟ್ ಅಕೌಂಟಿಂಗ್‌ದ ಸಂಪೂರ್ಣ ವಿಷಯವನ್ನೇ ಈ ಕೋರ್ಸಿನ ಅವಧಿಯಲ್ಲಿ ಕಲಿಯಬಹುದು. ಕೆಲವು ವಿಶ್ವವಿದ್ಯಾಲಯಗಳಲ್ಲಿ ಇದು ಮೂರು ವರ್ಷ ಹಾಗೂ ಇನ್ನು ಕೆಲವೆಡೆ ಪ್ರಾಕ್ಟಿಕಲ್ ಹಿಡಿದು ನಾಲ್ಕು ವರ್ಷ ಇರುತ್ತದೆ.

ಐಸಿಡಬ್ಲ್ಯು ಕೋರ್ಸನ್ನು ಬಾಹ್ಯವಾಗಿಯೇ ಮಾಡಬಹುದು. ಇದರಿಂದ ಸತತ ಅಭ್ಯಾಸ ಮಾಡಲು ಅನುಕೂಲವಾಗುತ್ತದೆ. ಈ ಕೋರ್ಸಿಗೆ ನಿರ್ದಿಷ್ಟವಾದ ಕೋಚಿಂಗ್ ಅಥವಾ ಅಂಚೆ ಕಲಿಕೆ ಇನ್ನೂ ಫಲಪ್ರದವಾಗಿಲ್ಲ. ಆದರೆ ಹಿರಿಯ ಉಪನ್ಯಾಸಕರು, ಕಂಪನಿಗಳಲ್ಲಿನ ಉನ್ನತ ಕಾಸ್ಟ್ ಅಕೌಂಟಂಟ್‌ಗಳು ಈ ಬಗ್ಗೆ ಮಾರ್ಗದರ್ಶನ ಹಾಗೂ ತರಬೇತಿ ನೀಡಬಲ್ಲರು. ಶ್ರದ್ಧೆಯಿಂದ, ಸತತವಾಗಿ ಅಭ್ಯಾಸ ಮಾಡಿದಲ್ಲಿ ಈ ಐಸಿಡಬ್ಲ್ಯು ಉನ್ನತ ಹುದ್ದೆಯನ್ನು ತಂದುಕೊಡಬಲ್ಲದು.

ಏಶಿಯನ್ ಪೇಂಟ್ಸ್, ಟಾಟಾ ಕಂಪನಿಗಳಲ್ಲಿ ಇಂತಹ ಸ್ನಾತಕೋತ್ತರರು ಪ್ರತಿ ವರ್ಷ ಐದರಿಂದ ಆರು ಲಕ್ಷ ರೂ.ಗಳ ವರೆಗೆ ಸಂಬಳ-ಸವಲತ್ತು ಪಡೆಯುತ್ತಾರೆ.

## ಡಿಬಿಎಂ, ಡಿಪಿಎಂ ಹಾಗೂ ಮ್ಯಾನೇಜ್‌ಮೆಂಟ್ ಡಿಪ್ಲೊಮಾಗಳು

ಡಿಪ್ಲೊಮಾ ಇನ್ ಬಿಸಿನೆಸ್ ಮ್ಯಾನೇಜ್‌ಮೆಂಟ್, ಡಿಪ್ಲೊಮಾ ಇನ್ ಪರ್ಸನೆಲ್ ಮ್ಯಾನೇಜ್‌ಮೆಂಟ್ ಹಾಗೂ ಮ್ಯಾನೇಜ್‌ಮೆಂಟ್ ಕುರಿತಾದ ಹಲವಾರು ಪದವಿ ನಂತರದ ಕೋರ್ಸುಗಳನ್ನು ವಿಶ್ವವಿದ್ಯಾಲಯಗಳು, ಖಾಸಗಿ ಸಂಸ್ಥೆಗಳು ನಡೆಸುತ್ತವೆ.

'ಅಡಿಟರ್ಸ್ ಕೋರ್ಸ್' ಎಂಬ ಬಾಹ್ಯ ಪರೀಕ್ಷೆಯೂ ಡಿಗ್ರಿಯಾದವರಿಗೆ ಉಂಟು. ಇದರಿಂದ ಸಹಕಾರಿ ಸಂಸ್ಥೆಗಳು, ಸಂಘಟನೆಗಳು ಹಾಗೂ ಇತರೆ ಸಣ್ಣ ಪುಟ್ಟ ಉದ್ದಿಮೆಗಳಲ್ಲಿ 'ಅಡಿಟಿಂಗ್' ಕಾರ್ಯವನ್ನು ಮಾಡಬಹುದು.

ಇಂತಹ ಕೋರ್ಸುಗಳು ಉದ್ಯಮ ಬೆಳೆದಂತೆ ಹಾಗೂ ಉತ್ಪಾದನಾ ಘಟಕಗಳು ಹೆಚ್ಚಾದಂತೆ ಹೆಚ್ಚು ಮಹತ್ವ ಪಡೆದುಕೊಂಡಿವೆ. ಇವುಗಳಲ್ಲಿ ಅಧಿಕ ಅಂಕ ಪಡೆದು ಅರ್ಹತೆ ಗಳಿಸುವುದು ಕೂಡ ಉತ್ತಮ ಉದ್ಯೋಗಾವಕಾಶಕ್ಕೆ ಮಾರ್ಗವಾಗುತ್ತದೆ.

# ಎಸ್.ಎಸ್.ಎಲ್.ಸಿ. ಆದವರಿಗೆ
# ವೃತ್ತಿಪರ ಜೀವನೋಪಾಯ ಮಾರ್ಗ

## ಟೂಲ್ ಮತ್ತು ಡಯ್ ಮೇಕಿಂಗ್‌ನಲ್ಲಿ ಡಿಪ್ಲೊಮಾ

ಇಂಡೋಡ್ಯಾನಿಷ್ ಯೋಜನೆಯಾದ ಗೌರ್ನಮೆಂಟ್ ಟೂಲ್ ರೂಮ್ ಅಂಡ್ ಟ್ರೇನಿಂಗ್ ಸೆಂಟರ್‌ನಲ್ಲಿ ಎಸ್.ಎಸ್.ಎಲ್.ಸಿ. ತೇರ್ಗಡೆಯಾದವರಿಗೆ ವೃತ್ತಿಪರ ಜೀವನೋಪಾಯ ರೂಪಿಸಿಕೊಳ್ಳುವ ಅವಕಾಶ ಕಲ್ಪಿಸಲಾಗಿದೆ. ನಾಲ್ಕು ವರ್ಷ ಅವಧಿಯ ಟೂಲ್ ಅಂಡ್ ಡಯ್ ಮೇಕಿಂಗ್ ಡಿಪ್ಲೊಮಾ ಕೋರ್ಸು ಕರ್ನಾಟಕ ಸರ್ಕಾರದಿಂದ ಮನ್ನಣೆ ಪಡೆದಿದೆ. ಈ ಶಿಕ್ಷಣ ನೀಡುವ ಕೇಂದ್ರಗಳು ಬೆಂಗಳೂರು ಮತ್ತು ಮೈಸೂರಿನಲ್ಲಿಯೂ ಉಪಕೇಂದ್ರಗಳು ಹಾಸನ, ಮಂಗಳೂರು, ಗುಲಬರ್ಗಾ, ಹೊಸಪೇಟೆ, ದಾಂಡೇಲಿ ಮತ್ತು ಬೆಳಗಾವಿಯಲ್ಲಿಯೂ ಇವೆ. ಎಂಟು ಸೆಮಿಸ್ಟರ್‌ನಲ್ಲಿ ಸಮಗ್ರ ಪ್ರಾಯೋಗಿಕ ತರಬೇತಿ ಅವಧಿಯಲ್ಲಿ ವಿದ್ಯಾರ್ಥಿಗಳಿಗೆ ತಿಂಗಳಿಗೆ ರೂ. ೧೦೦೦/- ಸ್ಟೈಪೆಂಡ್ ಕೂಡ ಲಭಿಸುತ್ತದೆ.

**ಅರ್ಹತೆ :**

ಬೆಂಗಳೂರು, ಮೈಸೂರು, ಮಂಗಳೂರು ಮತ್ತು ಬೆಳಗಾವಿ ಕೇಂದ್ರಗಳಿಗೆ ಅರ್ಜಿ ಸಲ್ಲಿಸುವ ಸಾಮಾನ್ಯ ವರ್ಗದ ವಿದ್ಯಾರ್ಥಿಗಳು ಇಂಗ್ಲಿಷ್, ಸಾ.ವಿಜ್ಞಾನ, ಗಣಿತ ವಿಷಯಗಳಲ್ಲಿ ಸರಾಸರಿ ಶೇ.೫೦ (ಎಸ್.ಸಿ./ಎಸ್.ಟಿ. ವಿದ್ಯಾರ್ಥಿಗಳಾದರೆ ಶೇ.೪೫) ಅಂಕ ಗಳಿಸಿರಬೇಕು. ವಯೋಮಿತಿ : ೧೬ ರಿಂದ ೧೮ ವರ್ಷಗಳು (ಎಸ್.ಸಿ. /ಎಸ್.ಟಿ. ವಿದ್ಯಾರ್ಥಿಗಳಿಗೆ ೧೬ ರಿಂದ ೨೦ ವರ್ಷಗಳು)

ಹಾಸನ, ಗುಲಬರ್ಗಾ, ಹೊಸಪೇಟೆ ಮತ್ತು ದಾಂಡೇಲಿ ಕೇಂದ್ರಗಳಿಗೆ ಅರ್ಜಿ ಸಲ್ಲಿಸುವ ಸಾಮಾನ್ಯ ವರ್ಗದ ವಿದ್ಯಾರ್ಥಿಗಳು ಇಂಗ್ಲಿಷ್, ಸಾ.ವಿಜ್ಞಾನ, ಗಣಿತ ವಿಷಯಗಳಲ್ಲಿ ಸರಾಸರಿ ಶೇ. ೪೫ ಅಂಕ ಪಡೆದು ೧೬ ರಿಂದ ೧೯ ವರ್ಷಗಳ ವಯೋಮಿತಿಯಲ್ಲಿರಬೇಕು (ಎಸ್.ಸಿ. /ಎಸ್.ಟಿ. ವಿದ್ಯಾರ್ಥಿಗಳಾದರೆ ಅಂಕ : ಶೇ. ೪೦ ಹಾಗೂ ವಯೋಮಿತಿ : ೧೬ ರಿಂದ ೨೧ ವರ್ಷಗಳು)

**ಅರ್ಜಿ ಸಲ್ಲಿಸುವ ವಿಧಾನ :**

ಅರ್ಜಿ ಮತ್ತು ವಿವರಣಾ ಪತ್ರವನ್ನು ಅಂಚೆ ಮೂಲಕ ಪಡೆಯಲು ಸಾಮಾನ್ಯ ವರ್ಗದವರು ೧೫೦ ರೂಪಾಯಿ ಹಾಗೂ ಎಸ್.ಸಿ. / ಎಸ್.ಟಿ. ವಿದ್ಯಾರ್ಥಿಗಳು ೭೫ ರೂಪಾಯಿಯ ಡಿ.ಡಿ.ಯನ್ನು "ಗೌರ್ನಮೆಂಟ್ ಟೂಲ್ ರೂಮ್ ಅಂಡ್ ಟ್ರೈನಿಂಗ್ ಸೆಂಟರ್" ಹೆಸರಿನಲ್ಲಿ ಬೆಂಗಳೂರಿನಲ್ಲಿ ಪಾವತಿಯಾಗುವಂತೆ ಕಳಿಸಬೇಕು. ಡಿ.ಡಿ.ಯೊಂದಿಗೆ ೨೧x೨೯.೭ ಸೆಂ.ಮೀ. ಅಳತೆಯ ಸಾದಾ ಕಾಗದದಲ್ಲಿ ಅರ್ಜಿ ಸಲ್ಲಿಸುವ ಕೇಂದ್ರ, ವಿದ್ಯಾರ್ಥಿ ಹೆಸರು, ಪಿನ್ ಕೋಡ್ ಸಹಿತ ವಿಳಾಸ ಹಾಗೂ ಡಿ.ಡಿ. ಸಂಖ್ಯೆಯನ್ನು ನಮೂದಿಸಿ ಮನವಿ ಸಲ್ಲಿಸಬೇಕು.

**ಅಂತಿಮ ದಿನಾಂಕ :**

ಅರ್ಜಿ ನಮೂನೆಗಾಗಿ ಮನವಿ ಸಲ್ಲಿಸಲು : ೨೦.೦೬.೧೯೯೭

ಭರ್ತಿ ಮಾಡಿದ ಅರ್ಜಿ ನಮೂನೆ ಸ್ವೀಕರಿಸಲು : ೩೦.೦೬.೧೯೯೭

**ಪರೀಕ್ಷೆ ವೇಳಾ ಪಟ್ಟಿ :**

ಸಾಮಾನ್ಯ ಆಯ್ಕೆ ಲಿಖಿತ ಪರೀಕ್ಷೆ : ೨೦.೦೭.೧೯೯೭

ಅಭಿರುಚಿ, ನೈಪುಣ್ಯ ಪರೀಕ್ಷೆ ಹಾಗೂ ಸಂದರ್ಶನ : ೦೬.೦೮.೯೭ ರಿಂದ ೦೮.೦೮.೯೭

**ಫಲಿತಾಂಶ** : ೧೮.೦೮.೧೯೯೭

**ಶಿಕ್ಷಣ ಪ್ರಾರಂಭ** : ೨೫.೦೮.೧೯೯೭

**ವಿಳಾಸ :**

ಗೌರ್ನಮೆಂಟ್ ಟೂಲ್ ರೂಮ್ ಅಂಡ್ ಟ್ರೈನಿಂಗ್ ಸೆಂಟರ್,
ಕಾರ್ಪೋರೇಟ್ ಕಚೇರಿ, ಕೈಗಾರಿಕಾ ಎಸ್ಟೇಟ್,
ರಾಜಾಜಿನಗರ, ಬೆಂಗಳೂರು - ೫೬೦ ೦೪೪.

## ವೊಕೇಶನಲ್ ಕೋರ್ಸುಗಳು

ಎಸ್.ಎಸ್.ಎಲ್.ಸಿ. ಅಥವಾ ಪಿ.ಯು.ಸಿ. ನಂತರ ವೃತ್ತಿ ಹಾಗೂ ಉದ್ಯೋಗಾವಕಾಶಕ್ಕೆ ಅನುಕೂಲವಾಗುವ ಹಲವಾರು ಕೋರ್ಸುಗಳು ಇಂದು ನಮ್ಮೆದುರಿಗೆ ಇವೆ. ಅವುಗಳ ಬಗ್ಗೆ ನಾವು ಕೂಲಂಕಷವಾಗಿ ಗಮನಿಸಿ ನಮಗೆ ಅನುಕೂಲವಾಗುವ ತರಬೇತಿ-ಶಿಕ್ಷಣವನ್ನು ಪಡೆಯಬಹುದು.

೧. ಡಿಪ್ಲೊಮಾ ಇನ್ ಇಂಜನೀಯರಿಂಗ್
೨. ಕಾಮರ್ಸ್‌ನಲ್ಲಿ ಡಿಪಿಎಂ, ಡಿಬಿಎಂ.
೩. ತಾಂತ್ರಿಕ ವಿಜ್ಞಾನ ಕೋರ್ಸುಗಳು
೪. ಗೃಹ ವಿಜ್ಞಾನ ಹಾಗೂ ಮನೆ ತೋಟಗಾರಿಕೆ
೫. ಆರೋಗ್ಯ ಶಿಕ್ಷಣ - ಕುಟುಂಬ ಯೋಜನಾ ಸಂಸ್ಥೆ
೬. ಖಾಸಗಿ ಹಾಗೂ ಸರ್ಕಾರಿ ವೃತ್ತಿ - ತರಬೇತಿ ಶಿಕ್ಷಣ
೭. ಕಂಪ್ಯೂಟರ್ ಶಿಕ್ಷಣ

ಹೀಗೆ ಹಲವಾರು ಕೋರ್ಸುಗಳು ಮುಕ್ತವಾಗಿದ್ದು ಅವುಗಳ ಮಾಹಿತಿ - ವಿವರಗಳನ್ನು ಕೆಲವು ಮೀಸಲಾದ ಪತ್ರಿಕೆಗಳಲ್ಲದೇ ಜನಪ್ರಿಯ ದಿನ ಪತ್ರಿಕೆಗಳೂ ಜಾಹೀರಾತುಗಳ ಮೂಲಕ ನೀಡುತ್ತವೆ.

ಸಂಪೂರ್ಣವಾಗಿ ತಂತ್ರಜ್ಞಾನದ ತರಬೇತಿ ಹಾಗೂ ವೃತ್ತಿ ಮಾರ್ಗದರ್ಶನ ನೀಡುವ ಕೋರ್ಸುಗಳೂ ಇವೆ.

೧. ಎಕ್ಸರೇ ಲ್ಯಾಬ್ ಟೆಕ್ನಾಲಜಿ
೨. ಪ್ರಯೋಗಾಲಯ ತರಬೇತಿ
೩. ಟಿ.ವಿ.-ರೇಡಿಯೋ ಸೇವಾ ಶಿಕ್ಷಣ
೪. ಯಂತ್ರಗಳ ಸೇವಾ ಶಿಕ್ಷಣ ತಂತ್ರಜ್ಞಾನ
೫. ಪ್ರಿಂಟಿಂಗ್-ಸ್ಕ್ರೀನ್ ಪ್ರಿಂಟಿಂಗ್
೬. ರೇಷ್ಮೆ ತರಬೇತಿ
೭. ಡೇರಿ - ಪೌಲ್ಟ್ರಿ
೮. ಔಷಧಿ ವಿಜ್ಞಾನ ಉಪಕರಣಗಳ ಶಿಕ್ಷಣ.

ಇವುಗಳಲ್ಲಿ ಯಾವುದಾದರೊಂದನ್ನು ಕರ್ನಾಟಕ ಇಲ್ಲವೆ ನೆರೆಯ ಮಹಾರಾಷ್ಟ್ರ ರಾಜ್ಯಗಳಲ್ಲಿನ ಸಮೀಪದ ಸ್ಥಳಗಳಲ್ಲಿನ ವಿವಿಧ ವಿದ್ಯಾಲಯಗಳಲ್ಲಿ ಆಯ್ದುಕೊಳ್ಳಬಹುದು. ಈ ಕುರಿತಂತೆ ಪ್ರವೇಶ ಫಾರ್ಮ್‌ಗಳು ಹಾಗೂ ಮಾಹಿತಿಯು ಸಂಬಂಧಪಟ್ಟ ಉದ್ಯೋಗ ವಿನಿಮಯ ಕಚೇರಿಯಲ್ಲಿ ದೊರಕುತ್ತದೆ.

# ಮಿಲಿಟರಿ ಭರ್ತಿ

## ಸೈನಿಕ ಪಡೆಯಲ್ಲಿನ ಹುದ್ದೆಗಳು

ಸೈನಿಕ ಪಡೆಯಲ್ಲಿ ಸಾಮಾನ್ಯ ಸೈನಿಕನಾಗಿ ಸೇರಿಕೊಳ್ಳಲು ಕನಿಷ್ಠ ಎಸ್.ಎಸ್.ಎಲ್.ಸಿ. ಪಾಸು ಮಾಡಿಕೊಂಡಿರಬೇಕು. ೧೬ರಿಂದ ೨೧ ವರ್ಷ ವಯೋಮಿತಿಯಲ್ಲಿರಬೇಕು. ಸೈನಿಕ -ಟೆಕ್ನಿಕಲ್, ಸ್ಟೋರ್ ಕೀಪರ್, ನರ್ಸಿಂಗ್ ಅಸಿಸ್ಟಂಟ್ ಹುದ್ದೆಗಳಿಗಾಗಿ ೧೬ ರಿಂದ ೨೩ ವರ್ಷ ವಯೋಮಿತಿಯವರಾಗಿರಬೇಕು.

ಸೈನಿಕ ಟ್ರೇಡ್ಸ್‌ಮನ್ (ಸಾಮಾನ್ಯ) ಹುದ್ದೆಗೆ ನಾನ್ ಮೆಟ್ರಿಕ್ ಹಾಗೂ ೧೬ರಿಂದ ೨೦ ವರ್ಷ ವಯೋಮಿತಿ, ನಿರ್ದಿಷ್ಟ ಟ್ರೇಡ್ಸ್‌ಮನ್ ಹುದ್ದೆಗೆ ವಯೋಮಿತಿ ೧೬ರಿಂದ ೨೫ ವರ್ಷಗಳು.

ಶಿಕ್ಷಣ ವಿಭಾಗದಲ್ಲಿ ಹವಿಲ್ದಾರ್ ಹುದ್ದೆಗೆ ಆಯ್ಕೆಯಾಗಲು ಸ್ನಾತಕೋತ್ತರ ಪದವೀಧರರು, ತರಬೇತಿ ಪಡೆದ ಪದವೀಧರರು ಗ್ರುಪ್ ಎ ಗೆ ಅರ್ಹರಾಗಿರುತ್ತಾರೆ. ಗ್ರುಪ್ ಬಿ ಗೆ ಆಯ್ಕೆಯಾಗಲು ಇಂಗ್ಲಿಷ್ ಮತ್ತು ಗಣಿತದೊಂದಿಗೆ ಮೆಟ್ರಿಕ್ ಪಾಸು ಮಾಡಿಕೊಂಡು ಬಿ.ಎ. ಹಾಗೂ ಬಿ.ಎಸ್ಸಿ. ಪದವೀಧರರಾಗಿರಬೇಕು ಇಲ್ಲಿ ವಯೋಮಿತಿ ೨೦ ರಿಂದ ೨೫ವರ್ಷಗಳು. ಧಾರ್ಮಿಕ ಅಧ್ಯಾಪಕರು ಎಂಬ ಹುದ್ದೆಗೆ ಆಯ್ಕೆಯಾಗಲು ಯಾವುದೇ ವಿಷಯದಲ್ಲಿ ಪದವಿ ಹಾಗೂ ಧಾರ್ಮಿಕ ಪಂಗಡ (ನಿರ್ದಿಷ್ಟ) ಕುರಿತಾದ ವಿದ್ಯಾರ್ಹತೆ; ೨೭ರಿಂದ ೩೪ ವರ್ಷ ವಯೋಮಿತಿ ಅಗತ್ಯ.

ಕೇಟರಿಂಗ್ ವಿಭಾಗದಲ್ಲಿ ಸೇವೆ ಸಲ್ಲಿಸಲು ೧೦+೨ ವಿಜ್ಞಾನದೊಂದಿಗೆ ಕುಕರಿ (ಅಡುಗೆ) ವಿಷಯದಲ್ಲಿ ಡಿಪ್ಲೊಮಾ ಪಡೆದಿರಬೇಕು. ಸರ್ವೆಯರ್ ಆಟೋಮೇಟೆಡ್ ಕಾರ್ಟೋಗ್ರಫಿ ಹುದ್ದೆಗೆ ಅರ್ಹರಾಗಲು ಬಿ.ಎ., ಬಿ.ಎಸ್ಸಿ. ಗಣಿತದೊಂದಿಗೆ ೧೦+೨ ವಿದ್ಯಾರ್ಹತೆ ಇಲ್ಲವೆ ತತ್ಸಮಾನ ಪರೀಕ್ಷೆ ಪಾಸು ಮಾಡಿಕೊಂಡಿರಬೇಕು. ಇದಕ್ಕೆ ವಯೋಮಿತಿ ೨೦ರಿಂದ ೨೫ ವರ್ಷ. ಜಿಲ್ಲಾಧಿಕಾರಿಗಳ ಕಚೇರಿ ಹಾಗೂ ಉದ್ಯೋಗ ವಿನಿಮಯ ಕಚೇರಿಗಳಲ್ಲಿ ಈ ಬಗ್ಗೆ ಮಾಹಿತಿ ದೊರೆಯುತ್ತದೆ. ನಿಯಮಗಳಲ್ಲಿ ಆಗಾಗ ಬದಲಾವಣೆಗಳಾಗುವ ಸಾಧ್ಯತೆಯೂ ಇರುವುದರಿಂದ ಈ ಕಚೇರಿಗಳನ್ನು ಸಂಪರ್ಕಿಸಿದರೆ ಒಳಿತು.

## ಕೋಸ್ಟ್‌ಗಾರ್ಡ್ ಹುದ್ದೆಗಳು

ಕೋಸ್ಟ್‌ಗಾರ್ಡ್ ಸೇವೆಯಲ್ಲಿ, ಅಸಿಸ್ಟಂಟ್ ಕಮಾಂಡಂಟ್ (ಜನರಲ್ ಡ್ಯುಟಿ-ಪೈಲಟ್, ನೇವಿಗೇಟರ್), ಅಸಿಸ್ಟಂಟ್ ಕಮಾಂಡಂಟ್ (ಜನರಲ್ ಡ್ಯುಟಿ) ನಾವಿಕ್ಸ್, ಯಾಂತ್ರಿಕ್ಸ ಹಾಗೂ ಅಸಿಸ್ಟಂಟ್ ಕಮಾಂಡಂಟ್ (ಟೆಕ್ನಿಕಲ್) ಹುದ್ದೆಗಳನ್ನು ತುಂಬಲಾಗುತ್ತದೆ.

ಮೊದಲ ಹುದ್ದೆಗೆ ಕನಿಷ್ಠ ೧೦+೨ (ಪಿ.ಯು.ಸಿ.) ಪಾಸು ಮಾಡಿಕೊಂಡಿರಬೇಕು ಹಾಗೂ ಚಾಲ್ತಿ ಕಮರ್ಶಿಯಲ್ ಪೈಲಟ್ ಲೈಸನ್ಸ್ ಹೊಂದಿರಬೇಕು. ವಯೋಮಿತಿ ೧೯ರಿಂದ ೩೨ ವರ್ಷಗಳು. ಕನಿಷ್ಠ ಎತ್ತರ ೧೬೨ ಸೆಂ.ಮೀ. ಹಾಗೂ ಗರಿಷ್ಟ ತೂಕ ೯೧ ಕೆ.ಜಿ. ಎರಡನೆಯ (ಜನರಲ್ ಡ್ಯುಟಿ) ಹುದ್ದೆಗೆ ಗಣಿತ ಹಾಗೂ ಭೌತಶಾಸ್ತ್ರದೊಂದಿಗೆ ಪದವಿ ಪಡೆದು. ೧೫೭ ಸೆಂ.ಮೀ. ಎತ್ತರ ಹಾಗೂ ೨೧ ರಿಂದ ೩೦ ವರ್ಷ ವಯೋಮಿತಿ ಹೊಂದಿರಬೇಕು. ನಾವಿಕ್ಸ್ ಹುದ್ದೆಗೆ ಕನಿಷ್ಠ ಹತ್ತನೆ ತರಗತಿ ಪಾಸು ಮಾಡಿಕೊಂಡಿರಬೇಕು ಇಲ್ಲವೆ ಎಂಟನೆಯ ತರಗತಿಯಲ್ಲಿ ಶೇ.೫೦ರಷ್ಟು ಅಂಕ ಗಳಿಸಿರಬೇಕು. ವಯೋಮಿತಿ ೧೭ ರಿಂದ ೨೨ ವರ್ಷ. ಎಸ್.ಸಿ., ಎಸ್.ಟಿ. ಯವರಿಗೆ ೫ ವರ್ಷಗಳ ಸಡಿಲಿಕೆ ಇದೆ. ಎತ್ತರ ೧೫೭ ಸೆಂ.ಮೀ.

ಸಮುದ್ರ ತೀರ ಕಾವಲುಗಾರರ ಈ ಹುದ್ದೆಗಳು ಮಹತ್ವದ ಸೇವೆಗೆ ಹೆಸರಾಗಿವೆ.

ಯಾಂತ್ರಿಕ ಹುದ್ದೆಗಳಿಗಾಗಿ ಕನಿಷ್ಠ ಮೆಟ್ರಿಕ್ ಹಾಗೂ ಶೇ. ೪೫ ಅಂಕಗಳೊಡನೆ ಡಿಪ್ಲೊಮಾ ಪಡೆದಿರಬೇಕು. ವಯೋಮಿತಿ ೨೨ ವರ್ಷಗಳು. ಎಸ್.ಸಿ., ಎಸ್.ಟಿ.ಯವರಿಗೆ ೫ ವರ್ಷಗಳ ಸಡಿಲಿಕೆ.

ಅಸಿಸ್ಟಂಟ್ ಕಮಾಂಡಂಟ್ (ಟೆಕ್ನಿಕಲ್) ಹುದ್ದೆಗಳಿಗೆ ವಯೋಮಿತಿ ೨೧ ರಿಂದ ೩೦ ವರ್ಷ. ಎತ್ತರ ೧೫೭ಸೆಂ.ಮೀ. ವಿದ್ಯಾರ್ಹತೆ : ನೇವಲ್ ಆರ್ಕಿಟೆಕ್ಚರ್, ಮೆಕ್ಯಾನಿಕ್ಸ್, ಮರೀನ್ ಎಲೆಕ್ಟ್ರಿಕಲ್ಸ್, ಟೆಲಿಕಮ್ಯುನಿಕೇಶನ್, ಎಲೆಕ್ಟ್ರಾನಿಕ್ಸ್, ಡಿಸೈನ್, ಪ್ರೊಡಕ್ಷನ್, ಎರೋನಾಟಿಕಲ್ಸ್, ಕಂಟ್ರೋಲ್ ಇಂಜಿನಿಯರಿಂಗ್‌ನಲ್ಲಿ ಪದವಿ ಪಡೆದಿರಬೇಕು. ಇಲ್ಲವೆ ಸರ್ಫೇಸ್ ಟ್ರಾನ್ಸ್‌ಪೋರ್ಟ್ ಸಚಿವಾಲಯದ ಅರ್ಹತಾ ಪ್ರಮಾಣ ಪತ್ರ ಹೊಂದಿರಬೇಕು. ಈ ಎಲ್ಲ ಹುದ್ದೆಗಳಲ್ಲಿ ಬಹುಮುಖ್ಯ ಅಂಶವೆಂದರೆ ಯಾವುದೇ ತೆರನಾದ ದೃಷ್ಟಿದೋಷವಿರಲೇಬಾರದು.

## ಇಂಡಿಯನ್ ಏರ್‌ಫೋರ್ಸ್

ಭಾರತೀಯ ವಿಮಾನ ಪಡೆಯಲ್ಲಿ ಕೆಲಸ ಪಡೆಯಲು ನೀವು ಎರಡು ರೀತಿಯಲ್ಲಿ ಅರ್ಹತೆ ಹೊಂದಬೇಕಾಗುತ್ತದೆ. ಮೊದಲನೆಯದು ತಾಂತ್ರಿಕ ವಿಭಾಗದಲ್ಲಿ ಸೇರ್ಪಡೆಯಾಗಲು ೧೬ರಿಂದ ೨೦ ವರ್ಷ ವಯೋಮಿತಿ ಹಾಗೂ ಮೆಟ್ರಿಕ್ಯುಲೇಶನ್‌ನಲ್ಲಿ ಕನಿಷ್ಠ ಶೇ.೬೦ ಅಂಕಗಳಿಸಿರಬೇಕು ಇಲ್ಲವೆ ಪಿ.ಯು.ಸಿ. ವಿಜ್ಞಾನದಲ್ಲಿ ಕನಿಷ್ಠ ಶೇ.೫೦ರಷ್ಟು ಇಲ್ಲವೆ ಡಿಪ್ಲೊಮಾ ಇನ್ ಇಂಜನಿಯರಿಂಗ್‌ನಲ್ಲಿ ಶೇ.೫೦ರಷ್ಟು ಅಂಕ ಪಡೆದಿರಬೇಕು. ಪಿ.ಯು.ಸಿ. ಹಾಗೂ ಡಿಪ್ಲೊಮಾ ಅರ್ಹತೆಯವರಿಗೆ ವಯೋಮಿತಿ ೧೬ರಿಂದ ೨೨ ವರ್ಷ. ಪ್ರತಿವರ್ಷ ಜುಲೈ ಎರಡನೆಯ ವಾರ, ನವೆಂಬರ್ ಮೊದಲನೆಯ ವಾರ ಪ್ರಕಟಣೆ ಇರುತ್ತದೆ.

ನಾನ್ ಟೆಕ್ನಿಕಲ್ ವಿಭಾಗದಲ್ಲಿ ೧೬ ರಿಂದ ೨೦ ವರ್ಷ ವಯೋಮಿತಿಯ ಹಾಗೂ ಮೆಟ್ರಿಕ್‌ನಲ್ಲಿ ಕನಿಷ್ಠ ಶೇ.೪೫ರಷ್ಟು ಅಂಕ ಪಡೆದವರು ಸೇರ್ಪಡೆಯಾಗಲು ಅರ್ಹರಾಗಿರುತ್ತಾರೆ. ಪ್ರತಿವರ್ಷ ಎಪ್ರಿಲ್ ತಿಂಗಳಿನ ಮೊದಲ ವಾರದಲ್ಲಿ ಈ ಬಗ್ಗೆ ಜಾಹೀರಾತು ನೀಡಲಾಗುತ್ತದೆ.

ಮೆಕ್ಯಾನಿಕಲ್ ಟ್ರಾನ್ಸ್‌ಪೋರ್ಟ್ ಡ್ರೈವರ್ ಹುದ್ದೆಗೆ ಕನಿಷ್ಠ ಮೆಟ್ರಿಕ್ ಪರೀಕ್ಷೆ ಪಾಸು ಮಾಡಿಕೊಂಡಿರಬೇಕು ಹಾಗೂ ೧೬ ರಿಂದ ೨೦ ವರ್ಷ ವಯೋಮಿತಿಯೊಳಗಿರಬೇಕು.

ಇಂಡಿಯನ್ ಏರ್ ಫೋರ್ಸ್‌ನಲ್ಲಿ ಎಜುಕೇಶನ್ ಇನ್‌ಸ್ಟ್ರಕ್ಟರ್ ಎಂಬ ಹುದ್ದೆಗಳನ್ನು ಅಗತ್ಯವಿರುವಾಗ ತುಂಬಿಕೊಳ್ಳುತ್ತಾರೆ. ೨೧ರಿಂದ ೨೫ ವರ್ಷ ವಯೋಮಿತಿಯ ಬಿ.ಎ. (ಇಂಗ್ಲಿಷ್) ಅಥವಾ ಬಿ.ಎಸ್ಸಿ. ಪದವಿಯಲ್ಲಿ ಕನಿಷ್ಠ ಶೇ.೫೦ರಷ್ಟು ಅಂಕ ಗಳಿಸುವುದರೊಂದಿಗೆ ಬಿ.ಎಡ್. ಕೋರ್ಸು ಮುಗಿಸಿರಬೇಕು. ಎಂ.ಎ. (ಇಂಗ್ಲಿಷ್) ಇಲ್ಲವೆ ಎಂ.ಎಸ್ಸಿ ದ್ವಿತಿಯ ದರ್ಜೆ ಪಡೆದುಕೊಂಡವರು ಈ ಇನ್‌ಸ್ಟ್ರಕ್ಟರ್ ಹುದ್ದೆಗೆ ಅರ್ಹರಾಗಿರುತ್ತಾರೆ.

ಇಲ್ಲಿ ವಯೋಮಿತಿ ೨೧ರಿಂದ ೨೮ ವರ್ಷಗಳು.

ತಾಂತ್ರಿಕ ವಿಭಾಗದ ಎರಡನೇ ಗ್ರೂಪ್‌ನವರಿಗೆ ತರಬೇತಿ ಅವಧಿಯಲ್ಲಿ ಪ್ರತಿ ತಿಂಗಳು ರೂ. ೧,೬೭೫ ಸ್ಟೈಪಂಡ್ ನೀಡಲಾಗುತ್ತದೆ. ನಂತರ ಅವರನ್ನು ನೇಮಕ ಮಾಡಿಕೊಂಡಾಗ ಗರಿಷ್ಠ ಪ್ರತಿ ತಿಂಗಳು ಆರೂವರೆಸಾವಿರ ರೂಪಾಯಿ ಸಂಬಳ ನೀಡಲಾಗುತ್ತದೆ. ತಾಂತ್ರಿಕವಲ್ಲದ ತರಬೇತಿಯ ಗ್ರೂಪ್ ಒಂದರಲ್ಲಿ ಆಯ್ಕೆಯಾದವರಿಗೆ ರೂ. ೧,೬೭೫ ಹಾಗೂ ಗ್ರೂಪ್ ನಾಲ್ಕರಲ್ಲಿ ಆಯ್ಕೆಯಾದವರಿಗೆ ರೂ. ೧,೫೮೦ ಪ್ರತಿ ತಿಂಗಳು ಸ್ಟೈಪಂಡ್ ನೀಡಲಾಗುತ್ತದೆ.

ಉಚಿತ ಊಟ, ವಸತಿ, ಔಷಧಿ, ಸವಲತ್ತು, ಪ್ರಯಾಣ ಸೌಲಭ್ಯ ಇತ್ಯಾದಿಗಳು ಕೇಂದ್ರ ಸರ್ಕಾರದ ಕೊಡುಗೆಗಳಾಗಿವೆ.

## ನೀವೀಗ ಅರ್ಜಿ ಹಾಕಬಹುದು

### ಭಾರತೀಯ ನೌಕಾಪಡೆ

ಡಿಸೆಂಬರ್ ೨,೧೯೭೮ ಹಾಗೂ ಜುಲೈ ೧, ೧೯೮೧ರೊಳಗೆ ಜನಿಸಿರುವ. ಪಿ.ಯು.ಸಿ. ವಿಜ್ಞಾನದಲ್ಲಿ ಪಿಸಿಎಂ ವಿಷಯಗಳಲ್ಲಿ ಶೇ.೭೦ರಷ್ಟು ಅಂಕ ಗಳಿಸಿರುವ ಅಭ್ಯರ್ಥಿಗಳು, ನೌಕಾಪಡೆ ಸೇರುವ ಮುಂಚಿನ, ತರಬೇತಿಗೆ ಅರ್ಹರಾಗಿರುತ್ತಾರೆ. ಪುಣೆಯ ನೇವೆಲ್ ಕಾಲೇಜ್ ಆಫ್ ಇಂಜಿನಿಯರಿಂಗ್ ಈ ತರಬೇತಿ ನೀಡುತ್ತದೆ. ತರಬೇತಿ ನಂತರ ನೌಕಾಪಡೆಯು ನೇಮಕ ಮಾಡಿಕೊಳ್ಳುತ್ತದೆ.

ಇದರ ಅರ್ಜಿ ಭರ್ತಿ ಮಾಡಿ ಕಳಿಸಲು ಜುಲೈ ೬,೧೯೯೭ ಕೊನೆಯ ದಿನಾಂಕವಾಗಿದೆ. ವಿಳಾಸ: - ಡೈರೆಕ್ಟರ್ ಆಫ್ ಮ್ಯಾನ್‌ಪಾವರ್ ಪ್ಲಾನಿಂಗ್ ಆ್ಯಂಡ್ ರಿಕ್ರುಟ್‌ಮೆಂಟ್ ನೇವಲ್ ಹೆಡ್‌ಕ್ವಾರ್ಟರ್ಸ್, ರೂಮ್ ನಂ.೨೦೪ 'ಸಿ'ವಿಂಗ್, ಸೇನಾಭವನ ನವದೆಹಲಿ-೧೧ ಇಲ್ಲಿಗೆ ಅರ್ಜಿ ಸಲ್ಲಿಸಬೇಕು.

ಆಯ್ಕೆಯಾದ ಅಭ್ಯರ್ಥಿಗಳನ್ನು ಸರ್ವಿಸ್ ಸಿಲೆಕ್ಷನ್ ಬೋರ್ಡ್ ವತಿಯಿಂದ ಸಂದರ್ಶನಕ್ಕೆ ಕರೆಯಲಾಗುತ್ತದೆ. ಬೆಂಗಳೂರು ಅಥವಾ ಭೂಪಾಲ್‌ಗಳಲ್ಲಿ ನಾಲ್ಕು ದಿನಗಳವರೆಗೆ ಈ ಸಂದರ್ಶನ ನಡೆಯುತ್ತದೆ. ಈ ಸಂದರ್ಭದಲ್ಲಿ ಸೈಕಾಲಾಜಿಕಲ್ ಟೆಸ್ಟ್, ಇಂಡಿವಿಜುವೆಲ್ ಟಾಸ್ಕ್, ಗ್ರೂಪ್‌ಟಾಸ್ಕ್ ಹಾಗೂ ಗ್ರುಪ್ ಡಿಸ್‌ಕಶನ್ ಹಾಗೂ ಸಂದರ್ಶನ ಏರ್ಪಡಿಸಲಾಗುತ್ತದೆ, ಸಂದರ್ಶನದ ಮೊದಲ ದಿನದ ಇಂಟೆಲಿಜೆನ್ಸ್ ಟೆಸ್ಟ್‌ನಲ್ಲಿ ಯಶಸ್ವಿಯಾದ ಅಭ್ಯರ್ಥಿಗಳು ಮಾತ್ರ ಮುಂದಿನ ಸಂದರ್ಶನಗಳಿಗೆ ಅರ್ಹರಾಗಿರುತ್ತಾರೆ.

ಎಸ್‌ಎಸ್‌ಬಿ ಸಂದರ್ಶನಕ್ಕೆ ಹಾಜರಾಗುವ ವರಿಗೆ ಸೆಕೆಂಡ್ ಕ್ಲಾಸ್ ರೇಲ್ವೆ ಪ್ರಯಾಣ ದರ ನೀಡಲಾಗುತ್ತದೆ. ಇಂಟೆಲಿಜೆನ್ಸ್ ಪರೀಕ್ಷೆಯಲ್ಲಿ ಪಾಸಾಗದವರನ್ನು ಅಂದೇ ಮರಳಿ ಕಳಿಸಲಾಗುತ್ತದೆ. ದಿ ನೇವಲ್ ಕಾಲೇಜ್ ಆಫ್ ಇಂಜನೀಯರಿಂಗ್‌ನಲ್ಲಿ ಈ ಕೋರ್ಸು ೧೯೯೭ರ ಡಿಸೆಂಬರ್‌ನಲ್ಲಿ ಆರಂಭಗೊಳ್ಳುತ್ತದೆ.

ತರಬೇತಿಗೆ ಬೇಕಾಗುವ ಪುಸ್ತಕ ಹಾಗೂ ಇತರೆ ಉಪಕರಣಗಳನ್ನು ನೌಕಾ ಇಲಾಖೆ ನೀಡುತ್ತದೆ. ಮೂರೂವರೆ ವರ್ಷಗಳ ಈ ತರಬೇತಿ ನಂತರ ನೌಕಾಪಡೆಯ ವಿವಿಧ ಶ್ರೇಣಿಗಳಲ್ಲಿ ಕೆಲಸ ದೊರಕುತ್ತದೆ.

ಮೇ ೨೪-೩೦ರ ಎಂಪ್ಲಾಮೆಂಟ್ ನ್ಯೂಸ್‌ನಲ್ಲಿ ಅರ್ಜಿ ಫಾರ್ಮ್ ಹಾಗೂ ಇತರ ವಿವರಗಳಿವೆ.

### ಇಂಡಿಯನ್ ಏರ್‌ಫೋರ್ಸ್

ಮೆಟ್ರಿಕ್ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಕನಿಷ್ಠ ಶೇ.೪೫ರಷ್ಟು ಅಂಕ ಗಳಿಸಿರುವ, ಮೇ ೩೦, ೧೯೭೮ ಹಾಗೂ ನವೆಂಬರ್ ೩೦, ೧೯೮೧ರೊಳಗೆ ಜನಿಸಿರುವ ಅಭ್ಯರ್ಥಿಗಳು ನಾನ್ ಟೆಕ್ನಿಕಲ್ ಕೋರ್ಸಿನ ತರಬೇತಿಗೆ ಅರ್ಹರಾಗಿರುತ್ತಾರೆ. ದೈಹಿಕವಾಗಿ ಸದೃಢವಾಗಿರುವ ಅವಿವಾಹಿತರು ಇದಕ್ಕೆ ಅರ್ಜಿ ಸಲ್ಲಿಸಬಹುದು. ಜೂನ್ ೧೬, ೧೯೯೭ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕವಾಗಿದೆ.

ಏರ್‌ಫೋರ್ಸ್‌ನ ತರಬೇತಿ ನಂತರ ೨೦ ವರ್ಷಗಳ ಕಾಲ ಭಾರತೀಯ ವೈಮಾನಿಕ ಪಡೆಯಲ್ಲಿ ಕೆಲಸ ಮಾಡಬಹುದು. ಸುಮಾರು ೫೫ ವರ್ಷ ವಯಸ್ಸಿನ ತನಕ ಸೇವೆ ಸಲ್ಲಿಸುವ ಅವಕಾಶವಿದೆ.

ತರಬೇತಿಯ ಅವಧಿಯಲ್ಲಿ ಪ್ರತಿ ತಿಂಗಳು ರೂ. ೨೧೮೨.

### ನೇಮಕಾತಿ ವಿಧಾನ

ನವ್ಹೆಂಬರ್ ೧೯೯೭ ಹಾಗೂ ಫೆಬ್ರವರಿ ೧೯೯೮ರ ಅವಧಿಯಲ್ಲಿ ಲಿಖಿತ ಪರೀಕ್ಷೆ ಏರ್ಪಡಿಸಲಾಗುತ್ತದೆ. ಬೆಂಗಳೂರು, ಚೆನ್ನೈ, ಮುಂಬಯಿ ಹಾಗೂ ದಿಲ್ಲಿ ಮುಂತಾದೆಡೆಗಳಲ್ಲಿ ಪರೀಕ್ಷಾ ಕೇಂದ್ರಗಳಿವೆ. ಇಂಗ್ಲೀಷ್-ಇಂಟೆಲಿಜೆನ್ಸ್ ಹಾಗೂ ಜನರಲ್ ನಾಲೇಜ್ ಪ್ರಶ್ನೆ ಪತ್ರಿಕೆಗಳಿರುತ್ತವೆ.

ಮೇ ೨೪-೩೦ರ ಎಂಪ್ಲಾಯ್‌ಮೆಂಟ್ ನ್ಯೂಸ್ ಪತ್ರಿಕೆಯಲ್ಲಿ ಅರ್ಜಿ ಫಾರ್ಮ್ಸ್‌ನ ಮಾದರಿ ನೀಡಲಾಗಿದೆ. ಅದನ್ನು ಮಾತ್ರ ಭರ್ತಿ ಮಾಡಿ ಕಳಿಸಬೇಕು.

ಇಂಡಿಯನ್ ಏರ್‌ಫೋರ್ಸ್‌ನ (ಮಹಿಳೆ-ಪುರುಷ) ಆಡಳಿತ ವಿಭಾಗದಲ್ಲಿ ನೇಮಕಾತಿ ಮಾಡಿಕೊಳ್ಳಲು ಅರ್ಜಿ ಕರೆಯಲಾಗಿದ್ದು ಅರ್ಜಿ ಸಲ್ಲಿಸಲು ಜೂನ್ ೨೪, ೧೯೯೭ ಕೊನೆಯ ದಿನಾಂಕವಾಗಿದೆ.

ಪದವಿ ಪರೀಕ್ಷೆಯಲ್ಲಿ ಪ್ರಥಮ ದರ್ಜೆ ಪಡೆದಿರುವ, ಮಾರ್ಚ್ ೨, ೧೯೭೫ ಹಾಗೂ ಮಾರ್ಚ್ ೨, ೧೯೭೮ರ ಅವಧಿಯಲ್ಲಿ ಜನಿಸಿರುವ ಅಭ್ಯರ್ಥಿಗಳು ಈ ಆಫೀಸರ್ ಹುದ್ದೆಗಳಿಗೆ ಅರ್ಹರಾಗಿರುತ್ತಾರೆ. ಕನಿಷ್ಠ ದ್ವಿತೀಯ ದರ್ಜೆಯಲ್ಲಿ ಸ್ನಾತಕೋತ್ತರ ಪದವಿ ಪಡೆದ ಮಾರ್ಚ್ ೧೯೭೩ ಹಾಗೂ ಮಾರ್ಚ್ ೭೮ರ ಅವಧಿಯಲ್ಲಿ ಜನಿಸಿರುವವರು ಕೂಡ ಅರ್ಹರಾಗಿರುತ್ತಾರೆ. ಅವಿವಾಹಿತರಾಗಿರಬೇಕೆಂಬುದು ಕಡ್ಡಾಯ.

ಈ ಹುದ್ದೆಗಳಲ್ಲಿ ಮಾಸಿಕ ಗರಿಷ್ಠ ಆದಾಯವು ಏಳು ಸಾವಿರ ರೂ. ಮೀರಿರುತ್ತದೆ. ನೇಮಕಾತಿ ಪರೀಕ್ಷೆಗಳಿಗೆ ಅರ್ಹ ಅಭ್ಯರ್ಥಿಗಳನ್ನು ಕರೆಯಲಾಗುತ್ತದೆ. ಎಂಪ್ಲಾಮೆಂಟ್ ನ್ಯೂಸ್ ಮೇ ೨೪-೩೦ರಲ್ಲಿ ಬಂದಿರುವ ಅರ್ಜಿ ಫಾರ್ಮ್‌ನ್ನು ಭರ್ತಿ ಮಾಡಿ ಕಳಿಸಬೇಕು. ●

# ಕೆ.ಇ.ಬಿ. ಯಲ್ಲಿ ಖಾಲಿ ಹುದ್ದೆ - ಅರ್ಜಿ

ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿಯಲ್ಲಿ ಸಹಾಯಕ ಲೈನ್‌ಮನ್ ಹಾಗೂ ಸ್ಟೇಶನ್ ಅಟೆಂಡೆಂಟ್ ಗ್ರೇಡ್-೨ರ ಹುದ್ದೆಗಳಿಗಾಗಿ ಅರ್ಜಿ ಕರೆಯಲಾಗಿದೆ.

ಬೆಂಗಳೂರು, ತುಮಕೂರು, ಮೈಸೂರು, ಶಿವಮೊಗ್ಗ, ಮಂಗಳೂರು, ಹುಬ್ಬಳ್ಳಿ, ಬೆಳಗಾವಿ, ಮುನಿರಾಬಾದ ಹಾಗೂ ಗುಲ್ಬರ್ಗಾ ವೃತ್ತಗಳಲ್ಲಿನ ಖಾಲಿ ಹುದ್ದೆಗಳ ಭರ್ತಿಗೆ ಈ ಅರ್ಜಿ ಆಹ್ವಾನಿಸಲಾಗಿದೆ.

**ವಿದ್ಯಾರ್ಹತೆ :**
ಕ.ವಿ.ಮಂ. ತರಬೇತಿ ಸಂಸ್ಥೆ ಲೈನ್‌ಮನ್ ಟ್ರೇಡ್‌ನಲ್ಲಿ ನೀಡಿರುವ ಸರ್ಟಿಫಿಕೇಟ್ ಕೋರ್ಸ್ ಅಥವಾ ಸರ್ಕಾರದ ಇಂಡಸ್ಟ್ರೀಯಲ್ ಟ್ರೈನಿಂಗ್ ಇನ್‌ಸ್ಟಿಟ್ಯೂಟ್ (ಐಟಿಐ) ನೀಡುವ ೧೮ / ೨೪ ತಿಂಗಳ ಎಲೆಕ್ಟ್ರೀಷಿಯನ್ ಅಥವಾ ದೂರ ಸಂಪರ್ಕ ಅಥವಾ ವಿದ್ಯುನ್ಮಾನದಲ್ಲಿ ಸರ್ಟಿಫಿಕೇಟ್.

**೧. ಈ ಕೆಳಗೆ ಸೂಚಿಸಿರುವಂತೆ ಪ್ರತಿ ಪರೀಕ್ಷೆಯಲ್ಲಿ ಕನಿಷ್ಠ ಶೇಕಡಾ ಅಂಕಗಳನ್ನು ಗಳಿಸಿದ ಅಭ್ಯರ್ಥಿಗಳು ಮಾತ್ರ ಅರ್ಜಿ ಸಲ್ಲಿಸಲು ಅರ್ಹರು.**

ಅ. ಸಾಮಾನ್ಯ ವರ್ಗ ಶೇಕಡಾ ೬೦ ; ಆ. ಹಿಂದುಳಿದ ಮತ್ತು ಇತರ ವರ್ಗ (ವಿಭಾಗ-I, II (ಎ), II (ಬಿ), III (ಎ),ಮತ್ತು III (ಬಿ),-ಶೇಕಡಾ ೫೦ ; ಇ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳಿಗೆ - ಕನಿಷ್ಠ ತೇರ್ಗಡೆ ; ಈ. ಅಭ್ಯರ್ಥಿಗಳನ್ನು ಪ್ರತಿಭೆ ಹಾಗೂ ಮೀಸಲಾತಿ ಆಧಾರದಲ್ಲಿ ಆಯ್ಕೆ ಮಾಡಲಾಗುವುದು.

೨. ಮೇಲಿನ ಎಲ್ಲಾ ಹುದ್ದೆಗಳಿಗೆ ಕನ್ನಡ ಓದಲು ಮತ್ತು ಬರೆಯಲು ತಿಳಿದಿರಬೇಕು.

೩. ಆಯ್ಕೆಯಾದ ಅಭ್ಯರ್ಥಿಯನ್ನು ಒಂದು ವರ್ಷದ ಅವಧಿಗೆ ಪ್ರೊಬೆಷನ್‌ನಲ್ಲಿ ರಿಸಲಾಗುವುದು. ಈ ಅವಧಿಯನ್ನು ಎರಡು ವರ್ಷಗಳಿಗೆ ವಿಸ್ತರಿಸುವ ಸಾಧ್ಯತೆಯಿದೆ.

**ವಯಸ್ಸು :** ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದಂದು ೧೮ ವರ್ಷದವರಾಗಿರಬೇಕು.

ಸಾಮಾನ್ಯ ವರ್ಗದವರಾದರೆ ೩೩ ವರ್ಷ ಮೀರಿರಬಾರದು

ವಿಭಾಗ-II (ಎ), II (ಬಿ), III (ಎ),ಮತ್ತು III (ಬಿ), ವರ್ಗದವರಾದರೆ ೩೬ ವರ್ಷ ಮೀರಿರಬಾರದು ; ಪರಿಶಿಷ್ಠ ಜಾತಿ / ವರ್ಗಕ್ಕೆ ಸೇರಿದವರಾಗಿದ್ದರೆ ೩೮ ವರ್ಷ ಮೀರಿರಬಾರದು.

**ಅಭ್ಯರ್ಥಿಗಳ ದೈಹಿಕ ಅರ್ಹತೆಗಳನ್ನು ಈ ಕೆಳಗಿನ ಪರೀಕ್ಷೆಗಳಿಂದ ದೃಢಪಡಿಸಿಕೊಳ್ಳಲಾಗುವುದು.**

| | |
|---|---|
| ೧. ಪುಲ್ ಅಪ್ಸ್ | - ೧೦ ಬಾರಿ ( ೨೦ ಸೆಕೆಂಡ್‌ಗಳು) |
| ೨. ೧೦೦ ಮೀಟರ್ ಓಟ | - ೧ ಬಾರಿ (೧೪ ಸೆಕೆಂಡ್‌ಗಳು) |
| ೩. ಶಾಟ್‌ಪುಟ್ (೧೨ ಸ್ಲ್ಯಾಬ್‌ಗಳು, ೩ ಬಾರಿ) | - ೮ ಮೀಟರ್‌ಗಳ ಎಸೆತ |
| ೪. ಸ್ಕಿಪ್ಪಿಂಗ್ | - ೧ ನಿಮಿಷ (೫೦ ಬಾರಿ) |
| ೫. ೧೬೦೦ ಮೀಟರ್ ಓಟ | - ೧ ಬಾರಿ (೫ ನಿಮಿಷ) |
| ೬. ಕಂಬ ಹತ್ತುವುದು | - ೧೫ ಮೀಟರ್ ಎತ್ತರ |

ಮೇಲೆ ಸೂಚಿಸಿರುವುದಲ್ಲದೆ, ಆಯ್ಕೆಯಾದ ಅಭ್ಯರ್ಥಿಗಳು ಕಠಿಣ ಕೆಲಸಗಳಾದ ಹೊಂಡ ತೋಡುವುದು, ಗೋಪುರ ಅಥವಾ ಕಂಬಗಳನ್ನು ಹತ್ತುವುದು, ಭಾರದ ವಸ್ತುಗಳನ್ನು ಹೊತ್ತು ಸಾಗಿಸುವುದು, ಕಂಡಕ್ಟರ್‌ಗಳನ್ನು ಹಾಕುವುದು, ಕಂಬಗಳನ್ನು ಬದಲಾಯಿಸುವುದು ಇತ್ಯಾದಿಗಳಿಗೆ ತಯಾರಿರಬೇಕು.

**ಶುಲ್ಕ :** ಸಾಮಾನ್ಯ ವರ್ಗ ವಿಭಾಗ, II (ಎ), II (ಬಿ), III (ಎ),ಮತ್ತು III (ಬಿ) ಗಳಿಗೆ ಸೇರಿದ ಅಭ್ಯರ್ಥಿಗಳು ಅರ್ಜಿ ಜೊತೆ ೨೫ ರೂ.ಗಳ ಕ್ರಾಸ್ ಮಾಡಿದ ಇಂಡಿಯನ್ ಪೋಸ್ಟಲ್ ಆರ್ಡರ್ ಅಥವಾ ಡಿಡಿಯನ್ನು ಲಗತ್ತಿಸಿರಬೇಕು. ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗಗಳ ಹಾಗೂ ವರ್ಗ-೧ರ ಅಭ್ಯರ್ಥಿಗಳು ೧೫ರೂ.ಗಳ ಪೋಸ್ಟಲ್ ಆರ್ಡರ್ ಅಥವಾ ಡಿಡಿಯನ್ನು ಲಗತ್ತಿಸಿರಬೇಕು. ಡಿಡಿ ಯಾವುದೇ ಶೆಡ್ಯೂಲ್ಡ್ ಬ್ಯಾಂಕಿನದ್ದಾಗಿರಬೇಕು. ಡಿಡಿ ಅಥವಾ ಪೋಸ್ಟಲ್ ಆರ್ಡರ್‌ನ್ನು **ಕಾರ್ಯನಿರ್ವಾಹಕ ಅಭಿಯಂತರರು (ವಿ), ಓ ಮತ್ತು ಎಂ ವಿಭಾಗ, ಕ.ವಿ.ಮಂ.** ಇವರ ಹೆಸರಿಗೆ ಬರೆದಿರಬೇಕು.

**ಅರ್ಜಿ ಸ್ವೀಕರಿಸಲು ಕೊನೆಯ ದಿನಾಂಕ :**
ಸ್ವಂತ ಹಸ್ತಾಕ್ಷರವಿರುವ ಇತ್ತೀಚಿನ ಭಾವಚಿತ್ರ (ಪಾಸ್‌ಪೋರ್ಟ್ ಅಳತೆಯ) ಅಂಟಿಸಿದ ಅರ್ಜಿಯ ಜೊತೆ ಕ್ರಾಸ್ ಮಾಡಿದ ಇಂಡಿಯನ್ ಪೋಸ್ಟಲ್ ಆರ್ಡರ್ ಅಥವಾ ಡಿಡಿ (ಈ ಪ್ರಕಟಣೆಯ ದಿನಾಂಕದಂದು ಅಥವಾ ಅದರ ಬಳಿಕ ಯಾವುದೇ ಶೆಡ್ಯೂಲ್ ಬ್ಯಾಂಕ್‌ನಿಂದ ಖರೀದಿಸಿದ) ಲಗತ್ತಿಸಿ **ಕಾರ್ಯನಿರ್ವಾಹಕ ಅಭಿಯಂತರರು (ವಿ), ಓ ಮತ್ತು ಎಂ ವಿಭಾಗ, ಕ.ವಿ.ಮಂ.** ಇವರಿಗೆ **೩೦.೦೬.೧೯೯೭ರಂದು ಸಂಜೆ ೪.೩೦ ಗಂಟೆಯೊಳಗಾಗಿ** ಅಥವಾ ಅದಕ್ಕೂ ಮುಂಚೆ ಅಂಚೆಯಲ್ಲಿ ಮಾತ್ರ ಕಳುಹಿಸತಕ್ಕದ್ದು.

**ಸಾಮಾನ್ಯ ಸೂಚನೆಗಳು :**
೧. ಅರ್ಜಿಯು ನಿಗದಿತ ನಮೂನೆಯಲ್ಲಿರಬೇಕು ಹಾಗೂ ಎಲ್ಲಾ ರೀತಿಯಲ್ಲೂ ಭರ್ತಿ ಮಾಡಿರಬೇಕು. ಈ ಕೆಳಗಿನ ದಾಖಲೆಗಳ ವಿನಾ ಸಲ್ಲಿಸುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

(i) ಸ್ವಹಸ್ತಾಕ್ಷರವಿರುವ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರ. (ii) ವಯಸ್ಸಿನ ದೃಢೀಕರಣ ಸರ್ಟಿಫಿಕೇಟ್ (ಟಿ.ಸಿ. ಅಥವಾ ಎಸ್.ಎಸ್.ಎಲ್.ಸಿ. ಅಂಕಪಟ್ಟಿ ಅಥವಾ ಕ್ಯುಮ್ಯುಲೇಟಿವ್ ರೆಕಾರ್ಡ್‌ನ ದೃಢೀಕರಣ ಪತ್ರ). (iii) ವಿದ್ಯಾರ್ಹತೆಯ ಬಗ್ಗೆ ದೃಢೀಕರಣ ಪತ್ರಗಳು. (iv) ನಿಗದಿತ ಬೆಲೆಯ ಇಂಡಿಯನ್ ಪೋಸ್ಟಲ್ ಆರ್ಡರ್ ಅಥವಾ ಡಿ.ಡಿ. (v) ದಾಖಲೆಗಳ ಪ್ರತಿಗಳನ್ನು ಸ್ವಹಸ್ತಾಕ್ಷರದಿಂದ ದೃಢೀಕರಿಸಬೇಕು

೨. ಒಂದಕ್ಕಿಂತ ಹೆಚ್ಚು ಹುದ್ದೆಗಳಿಗೆ ಅರ್ಜಿ ಸಲ್ಲಿಸಲಿಚ್ಛಿಸುವ ಅಭ್ಯರ್ಥಿಗಳು ಪ್ರತಿ ಹುದ್ದೆಗೆ ಪ್ರತ್ಯೇಕ ಅರ್ಜಿ ಸಲ್ಲಿಸಬೇಕು. ಹುದ್ದೆಯ ಹೆಸರನ್ನು ಪ್ರತ್ಯೇಕವಾಗಿ ಸೂಚಿಸಿರಬೇಕು ಹಾಗೂ ಪ್ರತಿಯೊಂದಕ್ಕೂ ಪ್ರತ್ಯೇಕ ದಾಖಲೆ ಹಾಗೂ ಪ್ರತ್ಯೇಕ ಶುಲ್ಕ ನೀಡಬೇಕು.

೩ ನೇಮಕಾತಿಯು ಆಯಾ ವಿಭಾಗಕ್ಕೇ ಸೀಮಿತವಾಗಿರುವುದರಿಂದ ಅಭ್ಯರ್ಥಿಗಳು ಅವರ ಸ್ವಂತ ಸ್ಥಳ ಅಥವಾ ಆಯ್ಕೆ ಮಾಡಿದ ವಿಭಾಗಗಳಿಗೆ ಮಾತ್ರ ಅರ್ಜಿ ಸಲ್ಲಿಸಬೇಕು. ನೇಮಕಾತಿಯ ಬಳಿಕ ಯಾವುದೇ ಒಂದು ವಿಭಾಗದಿಂದ

ಇನ್ನೊಂದು ವಿಭಾಗಕ್ಕೆ ಯಾವುದೇ ಸಂದರ್ಭದಲ್ಲೂ ವರ್ಗಾವಣೆಗೆ ಅವಕಾಶವಿರುವುದಿಲ್ಲ.

೪. ಖಾಲಿ ಹುದ್ದೆಗಳ ಸಂಖ್ಯೆ ಹಾಗೂ ಸಂಯೋಜನೆ ತಾತ್ಕಾಲಿಕವಾಗಿದ್ದು ಹಾಗೂ ಬದಲಾಗುವ ಸಾಧ್ಯತೆಯಿದೆ.

೫. ಆಯ್ಕೆಯಾದ ಅಭ್ಯರ್ಥಿಗಳನ್ನು ಆಹ್ವಾನಿಸಿ ಹಿರಿಯ ವೈದ್ಯಕೀಯ ಸಲಹೆಗಾರರ ಸಮಿತಿಯಿಂದ ಪರೀಕ್ಷಿಸಿ ಅವರ ದೈಹಿಕ ಅರ್ಹತೆಯನ್ನು ನಿರ್ಧರಿಸಲಾಗುವುದು.

೬. ಅಭ್ಯರ್ಥಿಯು ವಿದ್ಯಾಭ್ಯಾಸ ಮಾಡಿದ ಶಾಲೆ/ಕಾಲೇಜಿನ ಮುಖ್ಯಸ್ಥರು/ಪ್ರಾಂಶುಪಾಲರು ನೀಡಿದ ಗುಣನಡತೆಯ ಸರ್ಟಿಫಿಕೇಟ್ ಅಲ್ಲದೇ ಆಫೀಸರ್ ಅಥವಾ ಶಾಸಕ ಅಥವಾ ಲೋಕಸಭಾ ಸದಸ್ಯರಂತಹ ಇಬ್ಬರು ಗಣ್ಯರು ನೀಡುವ ಗುಣನಡತೆ ಸರ್ಟಿಫಿಕೇಟ್ ಲಗತ್ತಿಸಿರಬೇಕು. ಶಾಸಕ/ಲೋಕಸಭಾ ಸದಸ್ಯರು ಅಭ್ಯರ್ಥಿಯ ಸಂಬಂಧಿ ಅಲ್ಲವೆಂದು ಖಾತರಿ ಮಾಡಿರಬೇಕು. ಈ ಸರ್ಟಿಫಿಕೇಟ್‌ಗಳನ್ನು ನೀಡಿದ ದಿನಾಂಕವು ಅರ್ಜಿಯನ್ನು ಸಲ್ಲಿಸುವ ಕೊನೆಯ ದಿನಾಂಕಕ್ಕಿಂತ ಆರು ತಿಂಗಳು ಹಿಂದಿನದಾಗಿರಬಾರದು.

೭. ಅರ್ಜಿಯಲ್ಲಿ ನೀಡಿರುವ ಅಂಚೆ ವಿಳಾಸವನ್ನು ಅಭ್ಯರ್ಥಿಯ ವಿಳಾಸವೆಂದು ಪರಿಗಣಿಸಲಾಗುವುದು. ಪತ್ರ ವ್ಯವಹಾರವನ್ನು ಅದೇ ವಿಳಾಸದೊಂದಿಗೆ ನಡೆಸಲಾಗುವುದು. ವಿಳಾಸ ಬದಲಾವಣೆಗೆ ಸಂಬಂಧಿಸಿದ ಯಾವುದೇ ಪತ್ರವ್ಯವಹಾರಕ್ಕೆ ಅವಕಾಶವಿರುವುದಿಲ್ಲ.

೮. ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ದಿನಾಂಕದಂದು ವಿದ್ಯಾರ್ಹತೆಯ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು. ಇದಕ್ಕೆ ಪುರಾವೆಯಾಗಿ ಸರ್ಟಿಫಿಕೇಟ್/ಅಂಕಪಟ್ಟಿಯನ್ನು ಅರ್ಜಿಯ ಜೊತೆ ಲಗತ್ತಿಸಬೇಕು. ಇಲ್ಲದಿದ್ದಲ್ಲಿ ಅರ್ಜಿಯನ್ನು ತಿರಸ್ಕರಿಸಲಾಗುವುದು. ವಿದ್ಯಾರ್ಹತೆಯ ಪರೀಕ್ಷೆಗಳನ್ನು ಬರೆದಿದ್ದು, ಈ ಪ್ರಕಟಣೆಯ ಕೊನೆಯ ದಿನಾಂಕದ ಮೊದಲು ಫಲಿತಾಂಶಗಳು ಬಿಡುಗಡೆಯಾಗದಿದ್ದಲ್ಲಿ ಅಂತಹ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ಅಗತ್ಯವಿಲ್ಲ.

೯. ನಿಗದಿತ ನಮೂನೆಯಲ್ಲಿ ಮಾತ್ರ, ಮುದ್ರಿತ ಅಥವಾ ಟೈಪ್ ಮಾಡಿದ ಅರ್ಜಿಯನ್ನು ಸಲ್ಲಿಸತಕ್ಕದ್ದು. ದಿನಪತ್ರಿಕೆಯ ಪ್ರಕಟಣೆಯ ಭಾಗ ಅಥವಾ ಫೋಟೋಸ್ಟಾಟ್ ಪ್ರತಿಯಲ್ಲಿ ಅರ್ಜಿಯನ್ನು ಭರ್ತಿ ಮಾಡಿರಬಾರದು. ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಫೋಟೋಗಳ ಝೆರಾಕ್ಸ್ ಪ್ರತಿಯನ್ನು ಅರ್ಜಿಗೆ ಲಗತ್ತಿಸಿರಬಾರದು.

೧೦. ಅಭ್ಯರ್ಥಿಗಳ ಅರ್ಹತೆಯ ಬಗೆಗೆ ನೇಮಕಾತಿ ಅಧಿಕಾರಿಗಳ ನಿರ್ಧಾರವು ಅಂತಿಮವೆಂದು ಪರಿಗಣಿಸಲಾಗುವುದು ಹಾಗೂ ಅದಕ್ಕೆ ಅಭ್ಯರ್ಥಿಯು ಬದ್ಧನಾಗಬೇಕು.

೧೧. ಮಾಜಿ ಯೋಧರಿಗೆ ಮೀಸಲಾದ ಹುದ್ದೆಗಳನ್ನು ಭರ್ತಿ ಮಾಡುವಾಗ, ನಿರ್ದೇಶಕರು, ಸೈನಿಕರ ಕಲ್ಯಾಣ ಹಾಗೂ ಪುನರ್ವಸತಿ ಇಲಾಖೆ, ಕರ್ನಾಟಕ ಹಾಗೂ ಉಪನಿರ್ದೇಶಕರು, ಸೈನಿಕ ಕಲ್ಯಾಣ ಹಾಗೂ ಪುನರ್ವಸತಿ ಇಲಾಖೆ ಬೆಂಗಳೂರು/ಮೈಸೂರು/ಮಂಗಳೂರು/ಕಾರವಾರ/ಬಿಜಾಪುರ/ಬೆಳಗಾವಿ/ಧಾರವಾಡ - ಇವರು ನೀಡುವ ಅಭ್ಯರ್ಥಿಗಳ ಯಾದಿಗಳನ್ನು ಪರಿಗಣಿಸಲಾಗುವುದು.

೧೨. ಅರ್ಜಿ ಮತ್ತಿತರ ದಾಖಲೆಗಳನ್ನು ಹೊಂದಿರುವ ಲಕೋಟೆಯ ಮೇಲೆ ಎಡ ತುದಿಯಲ್ಲಿ ದಪ್ಪ ಅಕ್ಷರಗಳಲ್ಲಿ ಈ ರೀತಿ ಬರೆದಿರಬೇಕು.

**ಕ.ವಿ.ಮಂ.ನ..........................................ಓ ಮತ್ತು ಎಂ ವಿಭಾಗದಲ್ಲಿ..................................ಹುದ್ದೆಗಾಗಿ ಅರ್ಜಿ.**

೧೩. ಕ.ವಿ.ಮಂ. ನೇಮಕಾತಿಗೆ ಆಯ್ಕೆಯಾದ ಅಭ್ಯರ್ಥಿಗಳಿಗೆ ಉಚಿತ ವಿದ್ಯುತ್ ಪೂರೈಕೆ ನೀಡಲಾಗುವುದಿಲ್ಲ.

೧೪. ಅರ್ಜಿಗಳು ಕೊನೆಯ ದಿನಾಂಕದ ಮೊದಲು ಆಯಾ ಕಾರ್ಯನಿರ್ವಾಹಕ ಅಭಿಯಂತರರು, ಕವಿಮಂ ಇವರಿಗೆ ತಲುಪುವಂತೆ ಅಭ್ಯರ್ಥಿಗಳು ನೋಡಿಕೊಳ್ಳಬೇಕು. ●

## ನೀವು ಪತ್ರಕರ್ತ ಆಗಬೇಕೆ?

ಕೈತುಂಬ ಸಂಬಳ ನಾಡಿನ ತುಂಬ ಹೆಸರು ಗಳಿಸಿಕೊಡುವ ಪತ್ರಕರ್ತ ಹುದ್ದೆ ಇತ್ತೀಚೆಗೆ ಬಹು ಆಕರ್ಷಣೆ ಪಡೆದುಕೊಂಡಿದೆ. ಈ ವೃತ್ತಿ ಪ್ರವೇಶಿಸಲು ಕನಸುವವರ ಸಂಖ್ಯೆ ದಿನದಿನಕ್ಕೂ ಏರುತ್ತಿದೆ. ಆದರೆ ಈ ವೃತ್ತಿ ಬಗೆಗೆ ಜನರ ಮನದಲ್ಲಿ ಭ್ರಮೆ, ಅರೆಬರೆ ತಿಳಿವಳಿಕೆ ಸಾಕಷ್ಟಿರುವುದೂ ಸತ್ಯ. ಈ ನೌಕರಿಗಾಗಿ ಕನಸುವವರಿಗಾಗಿ ಮುಂದಿನ ತಿಂಗಳು ವಿಶೇಷ ಮಾಹಿತಿಪೂರ್ಣ ಲೇಖನ ಪ್ರಕಟಿಸುತ್ತಿದ್ದೇವೆ. ಪತ್ರಕರ್ತನಾಗುವ ಆಸೆಯನ್ನು ಕಾರ್ಯರೂಪಕ್ಕಿಳಿಸಲು ಅಗತ್ಯವಾದ ಎಲ್ಲ ಅಪೂರ್ವ ಆಯಕಟ್ಟಿನ ವಿವರಗಳನ್ನು ಈ ಲೇಖನ ಒಳಗೊಂಡಿರುತ್ತದೆ. ಪತ್ರಕರ್ತರಿಗೆ ಸಿಗುವ ಸಂಬಳ ಸವಲತ್ತುಗಳ ಮಾಹಿತಯೂ ಲೇಖನದಲ್ಲಿ ಸಿಗುತ್ತದೆ.

*.....ಮುಂದಿನ ಸಂಚಿಕೆ ನಿರೀಕ್ಷಿಸಿ!*

## ಗಡಿ ಭದ್ರತಾ ಪಡೆಗೆ ನೇಮಕಾತಿ

ಗಡಿ ಭದ್ರತಾ ಪಡೆಗೆ ಪುರುಷ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಬೆಂಗಳೂರಿನ ಯಲಹಂಕ ಬಳಿಯ ಗಡಿ ಭದ್ರತಾ ಪಡೆಯ ಪೂರಕ ತರಬೇತಿ ಕೇಂದ್ರದಲ್ಲಿ ಜೂನ್ ೧೭ರಂದು ನೇಮಕಾತಿ ಶಿಬಿರ ನಡೆಯಲಿದೆ.

ಅಭ್ಯರ್ಥಿಗಳು ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು. ವಯಸ್ಸು ೧೮ ರಿಂದ ೨೨ ವರ್ಷ (ಪರಿಶಿಷ್ಟ ಜಾತಿ/ವರ್ಗದವರಿಗೆ ೫ ವರ್ಷ ಹಾಗೂ ಇತರೆ ಹಿಂದುಳಿದ ವರ್ಗದವರಿಗೆ ೩ ವರ್ಷಗಳ ರಿಯಾಯಿತಿ). ಎತ್ತರ ೧೬೭.೫ ಸೆಂ.ಮೀ. (ಪರಿಶಿಷ್ಟ ವರ್ಗದವರಿಗೆ ೧೬೨.೫ ಸೆಂ.ಮೀ) ಹಾಗೂ ತೂಕ ೪೯ ಕೆ.ಜಿ. (ಪರಿಶಿಷ್ಟ ವರ್ಗದವರಿಗೆ ೪೬ ಕೆ.ಜಿ.) ಹೊಂದಿರುವ ಅಭ್ಯರ್ಥಿಗಳು ಅರ್ಜಿ, ವಿದ್ಯಾರ್ಹತೆ, ಜಾತಿ ಹಾಗೂ ಜನ್ಮ ಸ್ಥಳ ಕುರಿತ ಮೂಲ ಪ್ರಮಾಣ ಪತ್ರ ಮತ್ತು ಪಾಸ್‌ಪೋರ್ಟ್ ಅಳತೆಯ ಐದು ಭಾವಚಿತ್ರಗಳ ಸಮೇತ ನೇಮಕಾತಿ ದಿನದಂದು ಯಲಹಂಕ ಗಡಿ ಭದ್ರತಾ ಪಡೆಯ ಪೂರಕ ತರಬೇತಿ ಕೇಂದ್ರದಲ್ಲಿ ಹಾಜರಾಗಲು ಪ್ರಕಟಣೆ ತಿಳಿಸಿದೆ.

# ಚಾರ್ಟರ್ಡ್ ಅಕೌಂಟೆಂಟ್ ಆಗುವುದು ಹೇಗೆ?

**ನಮ್ಮ ದೇಶದಲ್ಲಿ ಈ ದಿನದವರೆಗೆ ಕೇವಲ ೭೦,೦೦೦ ಜನ ಚಾರ್ಟರ್ಡ್ ಅಕೌಂಟೆಂಟರಿದ್ದು ಇನ್ನೂ ಸುಮಾರು ೫೦,೦೦೦ ಸಿ.ಎ. ಗಳ ಕೊರತೆ ಇದೆ. ಕಠಿಣ ಪರಿಶ್ರಮದಿಂದ ಸಿ.ಎ. ಕೋರ್ಸನ್ನು ಮುಗಿಸಿದವರು ಆರಂಭದಿಂದಲೇ ೧೫,೦೦೦ ರೂಪಾಯಿ ಮಾಸಿಕ ವೇತನ ಪಡೆಯಬಹುದು. ಭಾರತೀಯ ಚಾರ್ಟರ್ಡ್ ಅಕೌಂಟೆಂಟ್‌ರಿಗೆ ವಿದೇಶಗಳಲ್ಲೂ ಅಪಾರ ಬೇಡಿಕೆ ಇದೆ.**

### ಸಿ.ಎ. ಎಂದರೇನು ?

ಇಂಜನಿಯರಿಂಗ್, ಮೆಡಿಕಲ್ ಇತ್ಯಾದಿ ವೃತ್ತಿ ಶಿಕ್ಷಣಗಳಿಗಿಂತ ಭಿನ್ನವಾಗಿರುವ ಚಾರ್ಟರ್ಡ್ ಅಕೌಂಟೆಂಟ್ ಕೋರ್ಸು ವಿದ್ಯಾರ್ಥಿಗಳಲ್ಲಿ ವಿಶೇಷ ಆಸಕ್ತಿ ಹಾಗೂ ಅಭಿಲಾಷೆ ಅಂಕುರಿಸುತ್ತದೆ. ಪಿ.ಯು.ಸಿ. ನಂತರವೇ ಈ ಕೋರ್ಸಿಗೆ ಸೇರಬಹುದೆಂಬ ವಿಷಯ ಅನೇಕರಿಗೆ ಗೊತ್ತಿಲ್ಲ!

ಚಾರ್ಟರ್ಡ್ ಅಕೌಂಟೆಂಟ್‌ಗೆ ಸರಿಯಾದ ಕನ್ನಡ ಶಬ್ದ 'ರಾಜ ಸನ್ನದು ಪಡೆದ ಲೆಕ್ಕ ಪರಿಶೋಧಕ' ಅಥವಾ 'ವಿಶೇಷ ಲೆಕ್ಕಾಧಿಕಾರಿ'. ನಮ್ಮ ಆರ್ಥಿಕ ವ್ಯವಹಾರಗಳಲ್ಲಿ ಚಾರ್ಟರ್ಡ್ ಅಕೌಂಟೆಂಟ್‌ಗಳ ಪಾತ್ರ ವಿಶಿಷ್ಟ ಹಾಗೂ ಮಹತ್ವದ್ದು. ಚಾರ್ಟರ್ಡ್ ಅಕೌಂಟೆಂಟ್‌ರು ದೃಢೀಕರಿಸಿದ ವಹಿವಾಟು ಪತ್ರಗಳಿಗೆ ವಿಶೇಷವಾದ ಅರ್ಥ ಮತ್ತು ಗೌರವ ಉಂಟು. ಬ್ಯಾಂಕುಗಳು, ಆದಾಯ ತೆರಿಗೆ ಇಲಾಖೆಗಳಲ್ಲಿ ಚಾರ್ಟರ್ಡ್ ಅಕೌಂಟೆಂಟ್ ಪರಿಶೀಲಿಸಿ ದೃಢೀಕರಿಸಿದ ಲೆಕ್ಕ ಪತ್ರಗಳಿಗೆ ಸೂಕ್ತ ಮಾನ್ಯತೆ ಉಂಟು.

ಚಾರ್ಟರ್ಡ್ ಅಕೌಂಟೆಂಟ್‌ರು ಸಾಮಾನ್ಯವಾಗಿ ಕೆಳಗಿನ ಸಾರ್ವಜನಿಕ ಕೆಲಸಗಳನ್ನು ನಿರ್ವಹಿಸುತ್ತಾರೆ:

ಲೆಕ್ಕ ಬರಹಗಳು, ಲೆಕ್ಕ ಪರಿಶೋಧನೆ, ಕಂಪನಿಯ ವಿಷಯಗಳು, ತೆರಿಗೆಗೆ ಸಂಬಂಧಪಟ್ಟ ಸಲಹೆಗಳು, ಆದಾಯ ತೆರಿಗೆಗೆ ಸಂಬಂಧಪಟ್ಟ ಸಲಹೆಗಳು, ವ್ಯಾಪಾರ ತೆರಿಗೆಗಳ ಬಗ್ಗೆ ಸಲಹೆಗಳು, ವ್ಯವಹಾರದ ರೂಪುರೇಷೆಗಳ ಬಗ್ಗೆ ಸಲಹೆಗಳು, ಹಣ ತೊಡಗಿಸುವುದರ ಬಗ್ಗೆ ಸಲಹೆ ಪಾಲುದಾರಿಕೆ ವ್ಯವಹಾರಗಳ ಬಗ್ಗೆ ಮಾಹಿತಿ, ಸಲಹೆ ಅರಿಸಿಕೊಂಡು ಬಂದವರ ಸಾಲದ ಬಗ್ಗೆ ಬ್ಯಾಂಕು, ಹಣಕಾಸು ಸಂಸ್ಥೆಗಳೊಂದಿಗೆ

**ಆಯಾ ವೃತ್ತಿಗಳಲ್ಲಿ ಯಶಸ್ವಿಯಾದವರ ಮೂಲಕವೇ ವಿದ್ಯಾರ್ಥಿಗಳಿಗೆ ವೃತ್ತಿ ಮಾರ್ಗದರ್ಶನ ಮಾಡಿಸುವ ಅಪೂರ್ವ ಪ್ರಯೋಗದ ಮೊದಲ ಭಾಗವಿದು. ಇನ್ನು ಮುಂದೆ ಪ್ರತಿ ತಿಂಗಳು ಒಬ್ಬ ವೃತ್ತಿ ನಿರತರು ನಿಮ್ಮ ಮುಂದೆ ಪ್ರತ್ಯಕ್ಷವಾಗಲಿದ್ದಾರೆ.**

ಮಾತುಕತೆ.

ನಮ್ಮ ದೇಶದಲ್ಲಿ ಈ ದಿನದವರೆಗೆ ಕೇವಲ ೭೦,೦೦೦ ಜನ ಚಾರ್ಟರ್ಡ್ ಅಕೌಂಟೆಂಟ್‌ರುಗಳಿದ್ದು ಇನ್ನೂ ಸುಮಾರು ೪೦-೫೦,೦೦೦ ಜನ ಚಾರ್ಟರ್ಡ್ ಅಕೌಂಟೆಂಟ್‌ರುಗಳ ಅವಶ್ಯಕತೆ ಇದೆ. ಈ ೭೦,೦೦೦ ಜನ ಚಾರ್ಟರ್ಡ್ ಅಕೌಂಟೆಂಟ್‌ರಲ್ಲಿ ಸುಮಾರು ೧೨,೦೦೦ ಜನ ವಿದೇಶಗಳಲ್ಲಿ ಕೆಲಸ ಮಾಡುತ್ತಿರುವರು!

ನಮ್ಮ ದೇಶದ ಸಿ.ಎ. ಕೋರ್ಸು ಜಗತ್ತಿನ ಇತರೆ ದೇಶಗಳ ಸಿ.ಎ.ಗೆ ಸಮಾನವಾದುದು. ನಮ್ಮ ದೇಶದ ವಿಶಿಷ್ಟ, ಕಷ್ಟತರವಾದ, ಆದರೆ ಗೌರವಾನ್ವಿತ ವಿದ್ಯಾಭ್ಯಾಸವಾದ ಸಿ.ಎ.ಗೆ ಉತ್ತಮ ಭವಿಷ್ಯ, ಸಾಮಾಜಿಕ ಗೌರವ-ನೆಲೆ ಉಂಟು.

### ಅರ್ಹ ಅಭ್ಯರ್ಥಿಗಳು

ಚಾರ್ಟರ್ಡ್ ಅಕೌಂಟೆಂಟ್ ಪರೀಕ್ಷೆಗೆ ಅರ್ಹರಾಗಲು ಕನಿಷ್ಠ ಪಿ.ಯು.ಸಿ.ಯನ್ನು ದ್ವಿತಿಯ ದರ್ಜೆಯಲ್ಲಿ ಪಾಸು ಮಾಡಿಕೊಂಡಿರ



**ಗುರುಕುಮಾರ ಚೌಕಿಮಠ**
ಚಾರ್ಟರ್ಡ್ ಅಕೌಂಟೆಂಟ್
ನಂ. ೨೬, ೧ನೇ ಮೇನ್, ೧ನೇ ಫೇಜ್,
ಪಶ್ಚಿಮ ಕಾರ್ಡ್ ರಸ್ತೆ, ಮಂಜುನಾಥ ನಗರ,
ಬೆಂಗಳೂರು -೫೬೦ ೦೧೦.

*ಚಾರ್ಟರ್ಡ್ ಅಕೌಂಟೆಂಟ್ ಆಗುವ ಆಕಾಂಕ್ಷೆ ಹೊತ್ತ ವಿದ್ಯಾರ್ಥಿಗಳಿಗೆ ಈ ಕೋರ್ಸಿನ ಸಂಪೂರ್ಣ ಮಾಹಿತಿ ಒದಗಿಸಿದ ಗುರುಕುಮಾರ ಚೌಕಿಮಠರ ಸ್ವಂತ ಊರು ನರಗುಂದ. ಪ್ರಥಮ ದರ್ಜೆಯಲ್ಲಿ ಬಿ.ಕಾಂ. ಪಾಸಾಗಿ ಸಿ.ಎ. ಮಾಡಿರುವ ೩೨ರ ಹರೆಯದ ಗುರುಕುಮಾರರು ನರಗುಂದದ ಸರ್ಕಾರಿ ಕನ್ನಡ ಶಾಲೆಗಳಲ್ಲಿ ತಮ್ಮ ಪ್ರಾಥಮಿಕ ವಿದ್ಯಾಭ್ಯಾಸ ಪೂರೈಸಿದ್ದಾರೆ. ಮಧ್ಯ ಈಶಾನ್ಯ ರಾಷ್ಟ್ರ ಬೆಹರಿನ್‌ನಲ್ಲಿ ಬಹುರಾಷ್ಟ್ರೀಯ ಕಂಪನಿಯಲ್ಲಿ ಮುಖ್ಯ ಲೆಕ್ಕಾಧಿಕಾರಿಯಾಗಿ ಎರಡು ವರ್ಷ ಸೇವೆ ಸಲ್ಲಿಸಿದ ಅನುಭವ ಅವರಿಗಿದೆ. ಕಂಟ್ರಿಕ್ಲಬ್‌ನ ಆರ್ಥಿಕ ಸಲಹೆಗಾರರಾಗಿಯೂ ಕೆಲಸ ಮಾಡಿದ್ದಾರೆ. ಕಳೆದ ಎರಡು ವರ್ಷಗಳಿಂದ ಬೆಂಗಳೂರಿನಲ್ಲಿ ಸ್ವತಂತ್ರ ಸಿ.ಎ. ವೃತ್ತಿಯಲ್ಲಿ ನಿರತರಾಗಿದ್ದಾರೆ.*

ಬೇಕು ಹಾಗೂ ಕೌನ್ಸಿಲ್ ಆಫ್ ಚಾರ್ಟರ್ಡ್ ಅಕೌಂಟೆಂಟ್ಸ್ ಆಫ್ ಇಂಡಿಯಾ ನವದೆಹಲಿ ಇವರು ಏರ್ಪಡಿಸುವ ಪ್ರವೇಶ ಪರೀಕ್ಷೆಯನ್ನು ಪಾಸು ಮಾಡಿಕೊಂಡಿರಬೇಕು. ಆಗ ವಿದ್ಯಾರ್ಥಿಯು ಸಿ.ಎ. ಅಪ್ರೆಂಟಿಸ್‌ಶಿಪ್ ಪಡೆಯಬಹುದು. ಅಂತಿಮ ಬಿ.ಕಾಂ.ದಲ್ಲಿ ಶೇ.೫೦, ಬಿ.ಎ. ಶೇ. ೫೫ ಹಾಗೂ ಬಿ.ಎಸ್ಸಿ. ಪದವಿ ಪರೀಕ್ಷೆಗಳಲ್ಲಿ ಶೇ.೬೦ರಷ್ಟು ಅಂಕ ಗಳಿಸಿದವರು ನೇರವಾಗಿ ಅಪ್ರೆಂಟಿಸ್‌ಶಿಪ್ ಪ್ರಾರಂಭಿಸಬಹುದಾಗಿದೆ.

**ಫೌಂಡೇಶನ್ ಕೋರ್ಸ್**

ವಿದ್ಯಾರ್ಥಿಗಳು ಪದವಿ ನಂತರ ಸಿ.ಎ.ನೊಂದಿಗೆ ಕಳೆಯಬಹುದಾದ ವರ್ಷಗಳನ್ನು ಪರಿಶೀಲಿಸಿ ಭಾರತೀಯ ಲೆಕ್ಕಪರಿಶೋಧಕರ ಸಂಸ್ಥೆಯು ೦೧.೦೪.೧೯೯೨ ರಿಂದ ವಿದ್ಯಾರ್ಥಿಗಳು ಬೇಗನೆ ಸಿ.ಎ. ಸೇರಲು, ಬೇಗನೆ ಮುಗಿಸಲು ಫೌಂಡೇಶನ್ ಕೋರ್ಸ್‌ನ್ನು ಪ್ರಾಂಭಿಸಿತು.

ಸಿ.ಎ. ಫೌಂಡೇಶನ್ ಕೋರ್ಸು ಸಿ.ಎ. ಅಭ್ಯಾಸದ ಪ್ರಾರಂಭದ ಹೆಜ್ಜೆ (ಹಂತ). ವಾಣಿಜ್ಯ ಅಥವಾ ವಿಜ್ಞಾನದ ಪಿ.ಯು.ಸಿ. ಪರೀಕ್ಷೆ ಪಾಸಾದ ಯಾವುದೇ ವಿದ್ಯಾರ್ಥಿ ಸಿ.ಎ. ಫೌಂಡೇಶನ್ ಕೋರ್ಸ್ ಸೇರಿಕೊಳ್ಳಬಹುದಾಗಿದೆ (ಕನಿಷ್ಠವಾಗಿ ಪಾಸಾದ ವಿದ್ಯಾರ್ಥಿಯು ಸಹ).

ಸಿ.ಎ. ಫೌಂಡೇಶನ್ ಪಾಸಾದ ವಿದ್ಯಾರ್ಥಿ ನೇರವಾಗಿ ಸಿ.ಎ. ಅಭ್ಯಾಸ ಪ್ರಾರಂಭಿಸಬಹುದಾಗಿದೆ. ಇದರಿಂದ ಆತ ಪದವಿಯ ಮೂರು ವರ್ಷಗಳನ್ನು ಉಳಿಸಬಹುದು!.

**ಸಿ.ಎ. ಅಭ್ಯಾಸ ಮತ್ತು ಪರೀಕ್ಷೆಗಳು**

ಅರ್ಹತೆ ಪಡೆದ ವಿದ್ಯಾರ್ಥಿ ವೃತ್ತಿಯಲ್ಲಿರುವ ಚಾರ್ಟರ್ಡ್ ಅಕೌಂಟೆಂಟ್‌ರನ್ನು ಸಂಪರ್ಕಿಸಿ ಅವರಲ್ಲಿರುವ ತರಬೇತಿ ವ್ಯವಸ್ಥೆಯಲ್ಲಿ ಸೇರಿಕೊಳ್ಳಬೇಕು. ಸೇರಿಕೊಂಡ ೯ ತಿಂಗಳ ನಂತರ ವಿದ್ಯಾರ್ಥಿಯು ಸಿ.ಎ. ಮೊದಲ ಪರೀಕ್ಷೆಯಾದ 'ಇಂಟರ್ ಮೀಡಿಯೆಟ್ ಪೂರ್ವ' ಪರೀಕ್ಷೆಯಲ್ಲಿ ಪಾಸಾಗಿ ಇಂಟರ್ ಮೀಡಿಯೆಟ್‌ಗೆ ಅರ್ಹತೆ (Eligibility)ಗಳಿಸಬೇಕು.

ಇಂಟರ್‌ಮೀಡಿಯೆಟ್ ಪರೀಕ್ಷೆಯು Group I ಮತ್ತು Group II ಪರೀಕ್ಷೆಗಳನ್ನು ಒಳಗೊಂಡಿರುತ್ತದೆ. ಪರೀಕ್ಷಾಪೂರ್ವ ಸಿದ್ಧತೆಯ ಆಧಾರದ ಮೇಲೆ ವಿದ್ಯಾರ್ಥಿಯು ಎರಡು ಗ್ರೂಪ್‌ಗಳನ್ನು ಒಟ್ಟಿಗೆ ಅಥವಾ ಒಂದೊಂದಾಗಿ ತೆಗೆದುಕೊಳ್ಳಬಹುದಾಗಿದೆ. ಇಂಟರ್‌ಮೀಡಿಯೆಟ್ ಪಾಸು ಮಾಡುವುದೆಂದರೆ ಅಂತಿಮ ಸಿ.ಎ.ಗೆ ಹತ್ತಿರವಾದಂತೆಯೇ!

ಸಿ.ಎ. ಇಂಟರ್‌ಮೀಡಿಯೆಟ್ ಆದ ೯ ತಿಂಗಳ ನಂತರ ಸಿ.ಎ.ಫೈನಲ್ ಪರೀಕ್ಷೆಗೆ ಕುಳಿತುಕೊಳ್ಳುವ ಅರ್ಹತೆಯನ್ನು ವಿದ್ಯಾರ್ಥಿ ಪಡೆಯಬಹುದಾಗಿದೆ.

ಸಿ.ಎ. ಪರೀಕ್ಷೆಯು ಕಷ್ಟ-ಸಾಧ್ಯ ಸವಾಲು. ವಿದ್ಯಾರ್ಥಿಯ ಪರಿಶ್ರಮ, ದೃಢ ಸಂಕಲ್ಪ ಮತ್ತು ಛಲಗಳ ಸಂಗಮದಲ್ಲಿ ಸಿ.ಎ. ಅಸಾಧ್ಯವಾದುದೇನಲ್ಲ. ಸಿ.ಎ. ಮುಗಿಯುವವರೆಗೂ ಸ್ವಾಮಿ ವಿವೇಕಾನಂದರ ಪುಸ್ತಕಗಳು ಖಂಡಿತ ಆತ್ಮವಿಶ್ವಾಸ-ನಿಶ್ಚಯತೆಯನ್ನು ಹಿಡಿದಿಡಬಲ್ಲವು. ಆತ್ಮವಿಶ್ವಾಸ, ದೃಢ ನಿಶ್ಚಯತೆಗಳು ಉದ್ದೀಪನಗೊಂಡರೆ "ಸಿ.ಎ." ವಿದ್ಯಾರ್ಥಿಯ ಕನಸಲ್ಲ-ನನಸು.

**ವಾಣಿಜ್ಯೇತರ ವಿದ್ಯಾರ್ಥಿಗಳ ತೊಂದರೆ**

ವಾಣಿಜ್ಯೇತರ ವಿದ್ಯಾರ್ಥಿಗಳಿಗೆ ವಾಣಿಜ್ಯ ವಿಷಯಗಳು ಹೊಸದಾಗುವುದರಿಂದ, ಅವುಗಳು ಉಚ್ಚಮಟ್ಟದಲ್ಲಿರುವುದರಿಂದ ತಕ್ಷಣ ಅರ್ಥವಾಗಲಾರವು. ನಿಯಮಿತ ಅಭ್ಯಾಸ, ಗ್ರಹಿಕೆ ಸತತ ಪರಿಶ್ರಮಗಳೊಂದಿಗೆ ಅವೆಲ್ಲವುಗಳನ್ನು ಅರ್ಥೈಸಿಕೊಳ್ಳಬಹುದು. ಆಂಗ್ಲ ಭಾಷೆಯ ಪ್ರಬುದ್ಧತೆಯೂ ಬಹು ಅವಶ್ಯಕ.

**ಸಿ.ಎ. ನಂತರ....**

ಸಾಮಾನ್ಯವಾಗಿ ನಾಲ್ಕು-ಐದು ವರ್ಷಗಳ ದೀರ್ಘ ಪರಿಶ್ರಮ (ಅದು ಒಂದು ಅರ್ಥದಲ್ಲಿ ತಪಸ್ಸು)ದ ನಂತರ ಸಿ.ಎ. ಪದವಿ ಪಡೆದು ಹೊರಬಂದಾಗ ವಿದ್ಯಾರ್ಥಿಯ ಮುಂದೆ ಎರಡು ದಾರಿಗಳು ಕಾಣಸಿಗುವುವು.

೧. ವೃತ್ತಿಯನ್ನು ಆಯ್ಕೆ ಮಾಡುವುದು
೨. ನೌಕರಿ ಸೇರುವುದು

ಸಿ.ಎ. ಪದವೀಧರ ವೃತ್ತಿಯನ್ನು ಆಯ್ಕೆ ಮಾಡಿಕೊಂಡರೆ ೩-೪ ತಿಂಗಳ ಪ್ರಯತ್ನದಲ್ಲಿ ಒಂದು ನಿಶ್ಚಿತ ಆದಾಯ ಕಂಡುಕೊಳ್ಳುತ್ತಾನೆ. ಅದು ಆತನ ವ್ಯಕ್ತಿತ್ವ ವ್ಯವಹಾರ ಕುಶಲತೆಯನ್ನು ಆಧರಿಸಿದೆ.

ಕೆಲಸಕ್ಕೆ ಸೇರಿದರೆ ಸಧ್ಯದ ಪರಿಸ್ಥಿತಿಯಲ್ಲಿ ಆತನಿಗೆ ೧೦,೦೦೦ದಿಂದ ೧೫,೦೦೦ ರೂಪಾಯಿಗಳ ಪ್ರಾರಂಭಿಕ ತಿಂಗಳ ವೇತನ ಸಿಗುವುದು.

ಭಾರತೀಯ ಸಿ.ಎ.ಗಳಿಗೆ ವಿದೇಶಗಳಲ್ಲೂ ಹೆಚ್ಚಿನ ಬೇಡಿಕೆ-ಮಾನ್ಯತೆ ಇದೆ.

*ಸಂಪರ್ಕ ವಿಳಾಸಗಳು :*

೧. (ಪ್ರಾದೇಶಿಕ ಕಛೇರಿ)
**ದಿ ಇನ್‌ಸ್ಟಿಟ್ಯೂಟ್ ಆಫ್ ಚಾರ್ಟರ್ಡ್ ಅಕೌಂಟೆಂಟ್ಸ್ ಆಫ್ ಇಂಡಿಯಾ**
೧೬/೦, ಮಿಲ್ಲರ್ಸ್ ಟ್ಯಾಂಕ್ ಬೆಡ್ ಏರಿಯಾ,
ಬೆಂಗಳೂರು-೫೬೦೦೫೨

೨. (ವಲಯ ಕಛೇರಿ)
**ದಿ ಇನ್‌ಸ್ಟಿಟ್ಯೂಟ್ ಆಫ್ ಚಾರ್ಟರ್ಡ್ ಅಕೌಂಟೆಂಟ್ಸ್ ಆಫ್ ಇಂಡಿಯಾ**
೧೨೨, ಉತ್ತಮಹಾರ ಗಾಂಧಿ ಸರಾಯಿ
ಪೊ.ಬಾ: ೩೩೧೪,
ಚೆನ್ನೈ-೬೦೦ ೦೩೪.

೩. **ದಿ ಇನ್‌ಸ್ಟಿಟ್ಯೂಟ್ ಆಫ್ ಚಾರ್ಟರ್ಡ್ ಅಕೌಂಟೆಂಟ್ಸ್ ಆಫ್ ಇಂಡಿಯಾ**
ಇಂದ್ರ ಪ್ರಸ್ಥ ಮಾರ್ಗ,
ನವದೆಹಲಿ-೧೧೦ ೦೦೨.

## ಚಾಲನಾ ತರಬೇತಿ

ಬೆಂಗಳೂರು ನಗರ ಜಿಲ್ಲೆಯ ಹಿಂದುಳಿದ ವರ್ಗಗಳ ವರ್ಗ-೧, ೨ಎ, ೩ಎ, ೩ಬಿಗೆ ಸೇರಿದ ನಿರುದ್ಯೋಗಿ ಯುವಕರು ಮತ್ತು ಮಹಿಳೆಯರಿಗೆ ಆಟೋರಿಕ್ಷಾ, ಲಘು ವಾಹನ ಮತ್ತು ಭಾರಿ ವಾಹನಗಳ ಚಾಲನೆ ತರಬೇತಿಗೆ ಅರ್ಜಗಳನ್ನು ಆಹ್ವಾನಿಸಲಾಗಿದೆ.

ಲಘು ವಾಹನಗಳ ಚಾಲನಾ ತರಬೇತಿಗೆ ೧೮ ವರ್ಷ ಮತ್ತು ಭಾರಿ ವಾಹನಗಳಿಗೆ ೨೦ ವರ್ಷ ಆದವರು ಅರ್ಹರು, ಭಾರಿ ವಾಹನಗಳ ಚಾಲನೆ ತರಬೇತಿ ಪಡೆಯಲು ಬಯಸುವವರು ಎರಡು ವರ್ಷಗಳ ಲಘು ವಾಹನ ಚಾಲನಾ ಪರವಾನಗಿ ಹೊಂದಿರಬೇಕು. ಹೆಚ್ಚಿನ ಮಾಹಿತಿಯನ್ನು ಜಿಲ್ಲಾ ಅಧಿಕಾರಿಗಳು, ಹಿಂದುಳಿದ ಮತ್ತು ಅಲ್ಪಸಂಖ್ಯಾತರ ಇಲಾಖೆ, ಬೆಂಗಳೂರು ನಗರ ಜಿಲ್ಲೆ, ಮೊದಲ ಮಹಡಿ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಕೇಂದ್ರ, ಡಾ.ಬಿ.ಆರ್.ಅಂಬೇಡ್ಕರ್ ಬೀದಿ. ಬೆಂಗಳೂರು ಈ ಕಚೇರಿಯಿಂದ ಪಡೆದು ಜೂನ್ ೩೦ರ ಒಳಗಾಗಿ ಅರ್ಜಿ ಸಲ್ಲಿಸಲು ಕೋರಲಾಗಿದೆ.

# ಸಾಮಾನ್ಯ ಪ್ರವೇಶ ಪರೀಕ್ಷೆ ಏಕೆ ಬೇಕು?

ದಿನದ ಇಪ್ಪತ್ನಾಲ್ಕು ಗಂಟೆಗಳಲ್ಲಿ ಕನಿಷ್ಠ ಹದಿನೈದು ಗಂಟೆಗಳ ಕಾಲ ಸತತ ಒಂದು ವರ್ಷ ಅಭ್ಯಾಸ ಮಾಡಿ ದ್ವಿತೀಯ ಪಿ.ಯು.ಸಿ.ಯ ವಿಜ್ಞಾನ ವಿಷಯಗಳಲ್ಲಿ ಉತ್ತಮ ಅಂಕ ಪಡೆದು ತೇರ್ಗಡೆ ಆಗುವ ವಿದ್ಯಾರ್ಥಿ ಯಾವುದೇ ತೊಂದರೆ ಇಲ್ಲದೆ ಮುಂದಿನ ವ್ಯಾಸಂಗವನ್ನು ಮುಂದುವರಿಸಬಹುದು ಎಂಬುದರಲ್ಲಿ ಎರಡು ಮಾತಿಲ್ಲ. ಅದರಲ್ಲೂ ಆತ ತನ್ನ ಜೀವನದ ಗುರಿಯಾದ ಇಂಜಿನಿಯರಿಂಗ್ ಮತ್ತು ವೈದ್ಯಕೀಯ ವಿಷಯವನ್ನು ಆಯ್ದುಕೊಳ್ಳಲು ಎಲ್ಲ ಹಕ್ಕುಗಳನ್ನು ಪಡೆದಿರುತ್ತಾನೆ ಎಂಬುದು ಸರ್ವ ವಿಧಿತ.

ಈ ಮೇಲಿನ ನಿಮ್ಮ ಆರೋಗ್ಯಕರ ಮನಸ್ಸಿನ ತರ್ಕಬದ್ಧ ಯೋಚನೆ ತಪ್ಪು! ಈ ಸತ್ಯವನ್ನು ನಮ್ಮ ರಾಜ್ಯ ಸರ್ಕಾರವೇ ಪ್ರತಿ ವರ್ಷವೂ ಸಾಬೀತುಪಡಿಸಿ ತೋರಿಸುತ್ತಿದೆ. ಪಿ.ಯು.ಸಿ. ಪರೀಕ್ಷೆಯಲ್ಲಿ ರ್‍ಯಾಂಕ್ ಪಡೆದು ಈ ಹಿಂದಿನ ಎಲ್ಲಾ ವರ್ಷಗಳ ಗರಿಷ್ಠ ಅಂಕಗಳ ದಾಖಲೆ ಮುರಿದ ವಿದ್ಯಾರ್ಥಿಯೂ ಸಹ ನೇರವಾಗಿ ತಾನು ಇಚ್ಚಿಸಿದ ಕಾಲೇಜಿನಲ್ಲಿ ಇಂಜಿನಿಯರಿಂಗ್ ಅಥವಾ ಮೆಡಿಕಲ್ ಶಿಕ್ಷಣಕ್ಕೆ ಪ್ರವೇಶ ಪಡೆಯುವಂತಿಲ್ಲ. ಆತ ರಾಜ್ಯ ಸರ್ಕಾರವೇ ರೂಪಿಸಿರುವ ಸಾಮಾನ್ಯ ಪ್ರವೇಶ ಪರೀಕ್ಷೆ ಎಂಬ ಗೊಂದಲದ ಚೌಕಟ್ಟಿಗೆ ಒಳಪಡಲೇ ಬೇಕು. ಇಲ್ಲವಾದರೆ ವಿದ್ಯಾರ್ಥಿಯ ಪರಿಶ್ರಮ ವ್ಯರ್ಥ. ಈ ವ್ಯವಸ್ಥೆಯನ್ನು ನಮ್ಮ ರಾಜ್ಯ ಸರ್ಕಾರವೇ ರೂಪಿಸಿದೆ!

ವರ್ಷವಿಡೀ ಪರಿಶ್ರಮದಿಂದ ಓದಿ ಪಿ.ಯು.ಸಿ. ಮುಗಿಸುವ ವಿಜ್ಞಾನ ವಿಷಯದ ವಿದ್ಯಾರ್ಥಿ ತನ್ನ ಬೆನ್ನ ಹಿಂದೆಯೇ ಬರುವ ಪ್ರವೇಶ ಪರೀಕ್ಷೆ ಎಂಬ ಝಳಪಿಸುವ ಕತ್ತಿಗೆ ಮೈಯೊಡ್ಡಲೇ ಬೇಕಾದ ಅನಿವಾರ್ಯ ಪ್ರಸಂಗ. ಇದರಿಂದ ಪೋಷಕರಿಗಂತೂ ಅಪರಿಮಿತ ಅನ್ಯಾಯವಾಗುತ್ತದೆ.

ತಾನೇ ರಚಿಸಿರುವ ಪಿ.ಯು.ಸಿ. ಮಂಡಲಿಯು ನಡೆಸುವ ಪರೀಕ್ಷೆಗಳ ಬಗ್ಗೆ ರಾಜ್ಯ ಸರ್ಕಾರಕ್ಕೆ ವಿಶ್ವಾಸವಿಲ್ಲವೆಂದು ಸಿ.ಇ.ಟಿ. ಪರೀಕ್ಷೆಯಿಂದ ಗೊತ್ತಾಗುತ್ತದೆ. ಮುಂದಿನ ವ್ಯಾಸಂಗಕ್ಕೆ ಅನುಕೂಲವಾಗುವ ಸಲುವಾಗಿ ಪಿ.ಯು.ಸಿ. ಪರೀಕ್ಷೆಯನ್ನು ನಡೆಸುವುದು ಎಂಬುದು ಸರ್ವವಿಧಿತ ವಿಷಯ. ಅಲ್ಲಿ ಉತ್ತೀರ್ಣನಾದ ವಿದ್ಯಾರ್ಥಿಯನ್ನು ಇನ್ನೊಂದು ಪರೀಕ್ಷೆಗೊಳಪಡಿಸಿ ವಿದ್ಯಾರ್ಥಿ ಹಾಗೂ ಪೋಷಕರ ಮನ ನೋಯಿಸುವ ಯೋಚನೆ ನಮ್ಮ ರಾಜ್ಯ ಸರ್ಕಾರಕ್ಕೆ ಎಲ್ಲಿಂದ ಬಂದಿತು?

ಪಿ.ಯು.ಸಿ. ಉತ್ತೀರ್ಣನಾದ ವಿದ್ಯಾರ್ಥಿ ತಾನು ಪರೀಕ್ಷೆಯಲ್ಲಿ ಗಳಿಸಿದ ಅಂಕಗಳ ಆಧಾರದ ಮೇಲೆ ಆತನ ಇಚ್ಛೆಯ ಶಿಕ್ಷಣದ ವಿಷಯಕ್ಕೆ ಪ್ರವೇಶ ನೀಡಲು ಸರ್ಕಾರ ಹಿಂದೇಟು ಹಾಕಿ ಇಲ್ಲದ ಗೊಂದಲ ಸೃಷ್ಟಿಸುವುದಾದರೂ ಯಾವ ಪುರುಷಾರ್ಥಕ್ಕೆ ಎಂಬುದು ತಿಳಿಯದ ವಿಷಯವಾಗಿದೆ. ಇಂಜಿನಿಯರಿಂಗ್, ಮೆಡಿಕಲ್ ಶಿಕ್ಷಣಕ್ಕೆ ಸೇರಬಯಸುವ ಪಿ.ಯು.ಸಿ. ವಿದ್ಯಾರ್ಥಿಯನ್ನು ಪ್ರವೇಶ ಪರೀಕ್ಷೆಗೆ ಒಳಪಡಿಸುವುದಾದರೆ ಆತ ಮತ್ತೇಕೆ ಪಿ.ಯು.ಸಿ. ಪರೀಕ್ಷೆಗೆ ಒಳಪಡಬೇಕು. ನೇರವಾಗಿ ಪ್ರವೇಶ ಪರೀಕ್ಷೆ ಬರೆದು ಅದರ ಆಧಾರದ ಮೇಲೆ ಪ್ರವೇಶ ಕಲ್ಪಿಸಿಕೊಳ್ಳಬಹುದಲ್ಲವೇ? ಎನ್ನುವ ಪ್ರಶ್ನೆ ಎದುರಾಗುತ್ತದೆ.

ಸರ್ಕಾರ ತಾನೇ ಸೃಷ್ಟಿಸಿಕೊಂಡಿರುವ ಗೊಂದಲಗಳಿಂದ ಹೊರ ಬರಲು ಎಷ್ಟೇ ಕಸರತ್ತು ನಡೆಸಿದರೂ ಪ್ರಯೋಜನವಾಗುತ್ತಿಲ್ಲ. ಪ್ರತಿವರ್ಷ ವೃತ್ತಿ ಶಿಕ್ಷಣ ಪ್ರವೇಶಾವಧಿಯಲ್ಲಿ ಸರ್ಕಾರ, ಕಾಲೇಜು ಆಡಳಿತ ಮಂಡಲಿ ಮತ್ತು ನ್ಯಾಯಾಲಯದ ನಡುವೆ ಈ ಕುರಿತು ಉದ್ಭವವಾಗುವ ಸಮಸ್ಯೆಗಳೇ ಇದಕ್ಕೆ ಸಾಕ್ಷಿ.

## ಮಾರ್ಗದರ್ಶಿ

ವಿದ್ಯಾರ್ಥಿ ದೆಸೆಯಲ್ಲಿಯಾಗಲಿ, ಉದ್ಯೋಗ ಅರಸುವಾಗಲಾಗಲಿ ಮಾಹಿತಿಯ ಕೊರತೆ ಎಂಬುದು ಬಹುಪಾಲು ಯುವಕ-ಯುವತಿಯರ ಬಹುದೊಡ್ಡ ಅಡಚಣೆ. ಈ ಹಂತದಲ್ಲಿ ಸರಿಯಾದ ಮಾಹಿತಿ-ಮಾರ್ಗದರ್ಶನ ಲಭಿಸದಿದ್ದರೆ ಯಾವುದೋ ದಡ ತಲುಪಬೇಕಾದ ಬದುಕಿನ ನೌಕೆ ಇನ್ಯಾವುದೋ ದಿಕ್ಕು ಸೇರಬೇಕಾಗುತ್ತದೆ. ಭವಿಷ್ಯದ ಕನಸುಗಳನ್ನು ಕಣ್ತುಂಬ ಕಟ್ಟಿಕೊಂಡ ಯುವ ಜನಾಂಗದ ನೆರವಿಗಾಗಿಯೇ **''ಮಾರ್ಗದರ್ಶಿ''** ಅಂಕಣ ಪ್ರಾರಂಭಿಸುತ್ತಿದ್ದೇವೆ.

ಮುಂದಿನ ಸಂಚಿಕೆಯಿಂದ ಆರಂಭವಾಗುವ ಈ ಅಂಕಣಕ್ಕೆ ವಿದ್ಯಾರ್ಥಿಗಳು, ಉದ್ಯೋಗಾಕಾಂಕ್ಷಿಗಳು ತಮಗೆ ಎದುರಾದ ಸಮಸ್ಯೆ, ಅನುಮಾನಗಳನ್ನು ಚುಟುಕಾಗಿ ಬರೆಯಬಹುದು. ವಿದ್ಯೆ-ಉದ್ಯೋಗಕ್ಕೆ ಸಂಬಂಧಿಸಿದಂತೆ ತಮಗೆ ಅಗತ್ಯವಿರುವ ಮಾಹಿತಿಯನ್ನು ಕೋರಬಹುದು. ಈ ವಿಷಯದಲ್ಲಿ ಅಪಾರ ಅನುಭವ ಗಳಿಸಿರುವ ಡಾ. ಎಸ್.ಸಿ. ಶರ್ಮಾ ಅವರು ನಿಮ್ಮ ಪ್ರಶ್ನೆಗಳಿಗೆ ಉತ್ತರಿಸುತ್ತಾರೆ. ಸಲಹೆ ನೀಡುತ್ತಾರೆ. ಪ್ರಶ್ನೆ ಕಳಿಸಬೇಕಾದ ವಿಳಾಸ:

**ಬಿಸಿಲ ಬದುಕು** ಮಾಸಪತ್ರಿಕೆ
(''ಮಾರ್ಗದರ್ಶಿ'' ವಿಭಾಗ) ಅಂಚೆ ಪೆಟ್ಟಿಗೆ: ೭೫೫೧, ಬಸವೇಶ್ವರನಗರ,
ಬೆಂಗಳೂರು - ೫೬೦ ೦೭೯.

ಜಗತ್ತಿನ ಯಾವ ಮೂಲೆಯಲ್ಲೂ ಇಂತಹ ವೈರುಧ್ಯದ ಪ್ರವೇಶ ಪದ್ಧತಿ ಕಂಡು ಬರುವುದಿಲ್ಲ. ಆದರೆ ನಮ್ಮ ರಾಜ್ಯದ ವಿದ್ಯಾರ್ಥಿಗಳಿಗೆ ಮಾತ್ರ ಏಕೆ ಈ ಕಹಿ ಅನುಭವ ಎನ್ನುವುದು ಅಗೋಚರವಾಗಿದೆ.

ವೈದ್ಯ ಅಥವಾ ಎಂಜಿನಿಯರ್ ಆಗಬೇಕೆಂಬ ಹಂಬಲದಿಂದ ವಿಜ್ಞಾನ ವಿಷಯವನ್ನು ತೆಗೆದುಕೊಂಡು ಪಿ.ಯು.ಸಿ. ಓದುವ ವಿದ್ಯಾರ್ಥಿ ಪಿ.ಯು.ಸಿ. ಪರೀಕ್ಷೆಗಿಂತ ಹೆಚ್ಚಾಗಿ ಸಾಮಾನ್ಯ ಪ್ರವೇಶ ಪರೀಕ್ಷೆಯ ಬಗ್ಗೆಯೇ ಹೆಚ್ಚು ಕಾಳಜಿ ವಹಿಸಿರುತ್ತಾನೆ ಎಂಬುದನ್ನು ನಾವು ಸ್ಪಷ್ಟವಾಗಿ ಕಾಣಬಹುದಾಗಿದೆ.

ಸರ್ಕಾರದ ಸಾಮಾನ್ಯ ಪ್ರವೇಶ ಪರೀಕ್ಷೆಯ ಈ ವ್ಯವಸ್ಥೆಯಿಂದ ವಿದ್ಯಾರ್ಥಿಗೆ ಪರೀಕ್ಷೆಯ ತಳಮಳವುಂಟಾದರೆ ಪೋಷಕರಿಗೆ ಮಾನಸಿಕ ಗೊಂದಲ ಹಾಗೂ ದೈಹಿಕ ಪರಿಶ್ರಮ ಉಂಟಾಗುತ್ತದೆ ಎಂಬುದರಲ್ಲಿ ಉತ್ಪ್ರೇಕ್ಷೆ ಇಲ್ಲ. ಜಾತಿ ಪತ್ರ, ಅಂಕಪಟ್ಟಿ, ನಡವಳಿಕೆ ಪಟ್ಟಿ ಎಂಬ ಗೊಂದಲದಲ್ಲಿ ಸುಮಾರು ಮೂರ್ನಾಲ್ಕು ತಿಂಗಳು ಪೋಷಕರನ್ನು ಅನಿಶ್ಚಿತ ವಾತಾವಾರಣಕ್ಕೆ ತಳ್ಳುವ ಸಾಮಾನ್ಯ ಪ್ರವೇಶ ಪರೀಕ್ಷಾ ಮಂಡಳಿ, ಹಲವಾರು ಗೊಂದಲದ ಗೂಡಾಗಿದೆ. ಇವೆಲ್ಲವನ್ನು ಸಹನೆಯಿಂದ ನಿವಾರಿಸಿಕೊಂಡು ಮಕ್ಕಳ ಶ್ರೇಯೋಭಿವೃದ್ಧಿಯ ಕನಸು ಕಾಣುವ ಪೋಷಕರಿಗೆ ಫಲಿತಾಂಶವೇನಾದರೂ ನಿರುತ್ಸಾಹದಾಯಕವಾದರೆ ಅವರ ದಯನೀಯ ಸ್ಥಿತಿ ಕಲ್ಪಿಸಲಸಾಧ್ಯವೇ ಸೈ. ಮಧ್ಯಮ ವರ್ಗದ ಜನರಂತೂ ಇದರಿಂದ ಪಡುವ ಪಾಡು ಅಷ್ಟಿಷ್ಟಲ್ಲ. ಯಾವುದೇ ಸದುದ್ದೇಶವಿಲ್ಲದೆ ವರ್ಷಕ್ಕೊಮ್ಮೆ ನಡೆಯುವ ಪ್ರವೇಶ ಪರೀಕ್ಷೆ ಎಂಬುದು ಒಂದು ಜಾತ್ರೆ ಎಂಬುದರಲ್ಲಿ ಎರಡು ಮಾತಿಲ್ಲ. ರಾಜ್ಯದ ಯಾವುದೇ ಮೂಲೆಯಲ್ಲಿದ್ದರೂ ಬೆಂಗಳೂರಿಗೆ ಬಂದು ಜಾತ್ರೆಯಲ್ಲಿ ಪಾಲ್ಗೊಂಡು ಸಿಕ್ಕಿದ್ದನ್ನೇ ಪ್ರಸಾದವೆಂದು ಸ್ವೀಕರಿಸಬೇಕಾದ ಕೆಟ್ಟ ಸ್ಥಿತಿ ನಮ್ಮ ವಿದ್ಯಾರ್ಥಿಗಳು ಮತ್ತು ಪೋಷಕರದ್ದು.

ವೃತ್ತಿ ಶಿಕ್ಷಣ ಸೀಟುಗಳನ್ನು ಸಮರ್ಪಕ ರೀತಿಯಲ್ಲಿ ಹಂಚುವ ಸಲುವಾಗಿ ಸ್ಥಾಪನೆಯಾಗಿರುವ ಪ್ರವೇಶ ಪರೀಕ್ಷಾ ಮಂಡಲಿಯು ತಾನು ನಿರ್ವಹಿಸುವ ಕಾರ್ಯದಲ್ಲಿ ಅನಗತ್ಯ ಗೊಂದಲ ಸೃಷ್ಟಿಸಿಕೊಂಡು ಸಹಸ್ರಾರು ವಿದ್ಯಾರ್ಥಿಗಳ ಭವಿಷ್ಯವನ್ನು ಲಘುವಾಗಿ ಪರಿಗಣಿಸಿದೆ. ಪಿ.ಯು.ಸಿ.ಯಲ್ಲಿ ವಿದ್ಯಾರ್ಥಿ ಗಳಿಸಿದ ಅಂಕದ ಆಧಾರದ ಮೇಲೆ ವೃತ್ತಿ ಶಿಕ್ಷಣ ಸೀಟುಗಳನ್ನು ಹಂಚುವುದಕ್ಕೆ ಈ ಮಂಡಲಿಗೆ ಒಂದು ತಿಂಗಳ ಕಾಲಾವಕಾಶ ಸಾಕು. ಅಂದರೆ ಈ ಮಂಡಲಿಯ ಸಿಬ್ಬಂದಿ ವರ್ಷದ ಉಳಿದ ಹನ್ನೊಂದು ತಿಂಗಳು ಮಾಡುವುದಾದರೂ ಏನನ್ನು?

ವರ್ಷವಿಡೀ ಓದಿ ಸುಸ್ತಾದ ವಿದ್ಯಾರ್ಥಿಗಳನ್ನು ಹತಾಶರನಾಗಿ ಮಾಡಲು ಈ ಮಂಡಲಿ ಶಸ್ತ್ರಸಜ್ಜಿತವಾಗಿರುತ್ತದೆ. ರಾಜ್ಯದ ವಿವಿಧೆಡೆಯಿಂದ ಬೆಂಗಳೂರಿಗೆ ಬಂದು ಹಲವಾರು ದಿನ ಉಳಿದು ಊಟ - ವಸತಿಗೆಂದು ಸಹಸ್ರಾರು ರೂಪಾಯಿ ಖರ್ಚು ಮಾಡಲು ಪೋಷಕರು ಸಿದ್ಧರಿರಬೇಕು. ಸಿ.ಇ.ಟಿ. ಕಚೇರಿಯ ಕಂಬ ಕಂಬ ಸುತ್ತಿ ಮಕ್ಕಳ ಭವಿಷ್ಯವನ್ನು ಅರಸುತ್ತಿರಬೇಕು. ಹೀಗಾದರೆ ಮಾತ್ರ ಪ್ರವೇಶ ಪರೀಕ್ಷಾ ಮಂಡಳಿಗೆ ಒಂದು ಅಸ್ತಿತ್ವ ಬಂದಂತಾಗುತ್ತದೆ. ಇಲ್ಲವಾದರೆ ಇದು ಇದ್ದಾರೂ ಪ್ರಯೋಜನವೇನು? ಸರ್ಕಾರ ಈ ನಿಟ್ಟಿನಲ್ಲಿ ಯೋಚಿಸಿ ಒಂದು ಪರಿಹಾರ ಕಂಡು ಹಿಡಿಯುವ ಪ್ರಯತ್ನವನ್ನು ಏಕೆ ಮಾಡಿಲ್ಲವೋ?

ಒಂದು, ಎರಡು, ಮೂರು ಎಂದು ಬಗೆ ಬಗೆಯಲ್ಲಿ ಆಯ್ಕೆ ಪಟ್ಟಿಗಳನ್ನು ಪ್ರಕಟಿಸುವ ಸಾಮಾನ್ಯ ಪ್ರವೇಶ ಪರೀಕ್ಷಾ ಮಂಡಲಿ ತಾನೇ ಸೃಷ್ಟಿಸಿಕೊಂಡ ಸಿಕ್ಕುಗಳನ್ನು ನಿವಾರಿಸಿಕೊಂಡು ವಿದ್ಯಾರ್ಥಿಗಳಿಗೆ ಪ್ರವೇಶ ನೀಡುವ ವೇಳೆಗೆ ಶೈಕ್ಷಣಿಕ ವರ್ಷದಲ್ಲಿ ಆರು ತಿಂಗಳು ಮುಗಿದೇ ಹೋಗಿರುತ್ತವೆ. ಪ್ರವೇಶ ವಿಷಯದಲ್ಲಿ ಗೊಂದಲ ಸೃಷ್ಟಿಯಾಗಿ ಈ ಗೊಂದಲ ಪರಿಹಾರಕ್ಕೆ ನ್ಯಾಯಾಲಯದ ಮೆಟ್ಟಿಲು ಹತ್ತಿದರೆ ಮತ್ತಷ್ಟು ವಿಳಂಬ ಖಡಾಖಂಡಿತ. ಇದಕ್ಕೆಲ್ಲಾ ಬಲಿಪಶುಗಳಾಗಲು ವಿದ್ಯಾರ್ಥಿಗಳು ಸಿದ್ಧರಿರಬೇಕು!

## ವೈವಿಧ್ಯಮಯ ಆಸಕ್ತಿಯ ಪ್ರಾಧ್ಯಾಪಕ



**ಡಾ. ಎಸ್.ಸಿ. ಶರ್ಮಾ**
**ಪ್ರಾಧ್ಯಾಪಕರು**
**ಆರ್.ವಿ. ಇಂಜಿನಿಯರಿಂಗ್ ಕಾಲೇಜು,**
**ಮೈಸೂರು ರಸ್ತೆ, ಬೆಂಗಳೂರು - ೫೬೦ ೦೫೯.**

*ಬೆಂಗಳೂರಿನ ಆರ್.ವಿ. ಇಂಜಿನಿಯರಿಂಗ್ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿರುವ ಡಾ. ಎಸ್.ಸಿ.ಶರ್ಮಾ ಅವರು ಕಾಲೇಜಿನಲ್ಲಿ ಸಂಬಳಕ್ಕಾಗಿ ಮೆಕ್ಯಾನಿಕಲ್ ಇಂಜಿನಿಯರಿಂಗ್ ವಿಷಯ ಬೋಧಿಸಿ ಮನೆಯಲ್ಲಿ ಮಕ್ಕಳೊಂದಿಗೆ ಹಾಯಾಗಿ ಕಾಲ ಕಳೆಯುವ ಪೈಕಿಯಲ್ಲ. ವಿದ್ಯಾರ್ಥಿ-ಯುವ ಜನರ ಪರವಾದ ಹತ್ತುಹಲವು ಯೋಜನೆಗಳನ್ನು ತಲೆ ತುಂಬ ತುಂಬಿಕೊಂಡು ಸುತ್ತುತ್ತಿರುತ್ತಾರೆ. ಅವರ ಆಸಕ್ತಿಯ ಕಾರ್ಯ ಕ್ಷೇತ್ರಗಳಲ್ಲಿ ವಿದ್ಯೆ-ಉದ್ಯೋಗ ಕುರಿತ ಮಾರ್ಗದರ್ಶನವೂ ಒಂದು. ಹಳ್ಳಿಗಾಡಿನ ಬಡ ವರ್ಗದವರಿಗೆ ತರಬೇತಿ ನೀಡಲೆಂದು ಸಮಾಜ ಸೇವಾ ಕೇಂದ್ರವನ್ನು ಸ್ಥಾಪಿಸಿ ಅದರಲ್ಲೂ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.*

*ಬೆಂಗಳೂರು ವಿಶ್ವವಿದ್ಯಾಲಯದ ಸ್ನಾತಕೋತ್ತರ ಪದವಿಯನ್ನು ಮೊದಲ ರ್‍ಯಾಂಕ್ ಸಹಿತ ತಮ್ಮದಾಗಿಸಿಕೊಂಡಿರುವ ಡಾ. ಶರ್ಮಾ ಮೈಸೂರು ವಿಶ್ವವಿದ್ಯಾಲಯದಿಂದ ಪಿ. ಎಚ್. ಡಿ. ಯನ್ನೂ ಗಳಿಸಿದ್ದಾರೆ. ಅಮೆರಿಕಾ, ಜಪಾನ್, ಆಸ್ಟ್ರೇಲಿಯಾ, ಪಾಕಿಸ್ತಾನ ದೇಶಗಳ ವಿಶ್ವವಿದ್ಯಾಲಯಗಳಲ್ಲಿ ಉಪನ್ಯಾಸ ನೀಡಿದ ಅನುಭವವನ್ನು ಹೊಂದಿರುವ ಈ ಮೇಷ್ಟ್ರ ಮತ್ತೊಂದು ಆಸಕ್ತಿಯ ಕ್ಷೇತ್ರವೆಂದರೆ ಕರ್ನಾಟಕ ಸಂಗೀತ. ಕರ್ನಾಟಕ ಸಂಗೀತ ಮತ್ತು ನೃತ್ಯ ಕಲಾ ಅಕಾಡೆಮಿಯ ಪ್ರತಿಷ್ಠಿತ **ಕರ್ನಾಟಕ ಕಲಾಶ್ರೀ** ಪ್ರಶಸ್ತಿ ಇವರ ಮನೆ ಬಾಗಿಲು ಬಡಿದಿದೆ. ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಯೂ ಬಳಿ ಬಂದಿದೆ.*

*ಪ್ರತಿಭೆಯೊಂದಿಗೆ ಸಮಾಜಕ್ಕೆ ಒಳಿತು ಮಾಡುವ ತುಡಿತ ಹೊಂದಿರುವ ಇಂತಹ ಅಪರೂಪದ ಪ್ರಾಧ್ಯಾಪಕರು ''ಬಿಸಿಲ ಬದುಕು'' ಪತ್ರಿಕೆಯೊಂದಿಗೆ ಕೈಜೋಡಿಸಿ ಪ್ರತಿ ತಿಂಗಳು ವಿದ್ಯೆ-ಉದ್ಯೋಗದ ಬಗ್ಗೆ* **'ಮಾರ್ಗದರ್ಶನ'** *ಮಾಡಲು ಮುಂದಾಗಿದ್ದಾರೆ.*

## ಕೌನ್ಸಿಲಿಂಗ್ ಎಂಬ ಕಸರತ್ತು

ಸಾಮಾನ್ಯ ಪ್ರವೇಶ ಪರೀಕ್ಷೆ ಮುಗಿದ ಕೂಡಲೇ ಅದರಲ್ಲಿ ವಿಜೇತನಾದ ವಿದ್ಯಾರ್ಥಿ ಹಾಗೂ ಪೋಷಕರು ನೆಮ್ಮದಿಯ ನಿಟ್ಟುಸಿರು ಬಿಡುವಂತಿಲ್ಲ. ಇದನ್ನು ಹಿಂಬಾಲಿಸಿಕೊಂಡೇ ಬರುವ ಮಂಡಲಿಯು ನಡೆಸುವ ಶೈಕ್ಷಣಿಕ ಸಂದರ್ಶನ (Academic Counseling) ಎಂಬ ಪ್ರಕ್ರಿಯೆಗೆ ಒಳಗೊಳ್ಳಬೇಕು.

ತಮ್ಮ ಮಕ್ಕಳು ಇಂತಹದ್ದೇ ಕಾಲೇಜಿನಲ್ಲಿ ಓದಬೇಕೆಂದು ನಿರ್ಧರಿಸುವ ಹಕ್ಕು ಪೋಷಕರಿಗಿರಬೇಕಾದುದು ಅಪೇಕ್ಷಣೀಯ. ಆದರೆ ಈಗಿನ ವ್ಯವಸ್ಥೆಯಲ್ಲಿ ಅದನ್ನು ನಿರ್ಧರಿಸುವುದು ವಿದ್ಯಾರ್ಥಿಗೆ ಸಂಬಂಧವೇ ಇಲ್ಲದ ಒಂದು ಅಸಮರ್ಪಕ ಗುಂಪಿನಂತಿರುವ ಸಾಮಾನ್ಯ ಪ್ರವೇಶ ಪರೀಕ್ಷಾ ಮಂಡಲಿ.

ವಿದ್ಯಾರ್ಥಿ ವಾಸಿಸುವ ಸ್ಥಳ, ಕಾಲೇಜಿನ ಅಂತರ, ಶೈಕ್ಷಣಿಕ ಶುಲ್ಕ ಇದಾವುದರ ಬಗ್ಗೆಯೂ ಯೋಚಿಸದ ಸಿ.ಇ.ಟಿ.ಯ ಅಧಿಕಾರಿಗಳು ತಮ್ಮ ಮುಂದಿರುವ ಕಂಪ್ಯೂಟರ್ (ಗಣಕ ಯಂತ್ರ) ಮುಖಾಂತರ ಆಯ್ಕೆ ಮಾಡಿ ತಮ್ಮ ಮೇಲೆ ಇರುವ ಹೊರೆಯನ್ನು ಕಳಚಿಕೊಳ್ಳುತ್ತಾರೆ.

ಇದೇ ವೇಳೆಯಲ್ಲಿ ನಡೆಯುವ ಬದಲಾವಣೆ ವರ್ಗಾವಣೆ ಮುಗಿಸಿ ವಿದ್ಯಾರ್ಥಿ ತರಗತಿಗೆ ಹೋದರೆ ಆ ವೇಳೆಗಾಗಲೇ ಅಲ್ಲಿ ಪಾಠ ಪ್ರವಚನಗಳು ಆರಂಭವಾಗಿ ಹಲವು ದಿನಗಳೇ ಆಗಿರುತ್ತದೆ. ವಿದ್ಯಾರ್ಥಿಗಳನ್ನು ತ್ರಿಶಂಕು ಸ್ಥಿತಿಯಲ್ಲಿಡುವ ಈ ವ್ಯವಸ್ಥೆಯಿಂದಾಗಿ ಬಡ ಹಾಗೂ ಗ್ರಾಮಾಂತರ ಪ್ರದೇಶಗಳಿಂದ ಬಂದ ವಿದ್ಯಾರ್ಥಿಗಳಿಗೆ ಆಗುವ ಕಷ್ಟ ಅಷ್ಟಿಷ್ಟಲ್ಲ. ಹಣದ ಅಭಾವದಿಂದ ವಿದ್ಯಾರ್ಥಿಗಳು ಕಾಲೇಜಿಗೆ ಬರದಿದ್ದರೆ ಹಲವಾರು ಸೀಟುಗಳು ಖಾಲಿ ಉಳಿಯುತ್ತವೆ. ಅನಗತ್ಯವಾಗಿ ಖಾಲಿ ಇರುವ ಈ ಸೀಟುಗಳನ್ನು ತುಂಬಲು ಸರ್ಕಾರ ಈವರೆಗೂ ಯಾವ ಯೋಚನೆಯನ್ನೂ ಮಾಡಿಲ್ಲ.

ರಾಜ್ಯದಲ್ಲಿ ಪ್ರತಿ ವರ್ಷ ಸರಾಸರಿ ಸುಮಾರು ಐವತ್ತು ಸಾವಿರ ವಿದ್ಯಾರ್ಥಿಗಳು ಪ್ರವೇಶ ಪರೀಕ್ಷೆಯನ್ನು ತೆಗೆದುಕೊಳ್ಳುತ್ತಾರೆ. ದುರ್ದೈವದ ಸಂಗತಿ ಎಂದರೆ ಈ ವಿದ್ಯಾರ್ಥಿಗಳು ಪಿ.ಯು.ಸಿ. ಪಠ್ಯ ವಿಷಯಗಳಿಗೆ ಸಂಬಂಧಿಸಿದ ಪ್ರಶ್ನೆಗಳಿಗೆ ಮತ್ತೊಮ್ಮೆ ಉತ್ತರಿಸ ಬೇಕಾಗಿರುವುದು. ಇದಲ್ಲದೆ ಇವರು ಪಿ.ಯು.ಸಿ.ಯಲ್ಲಿ ಗಳಿಸಿದ ಅಂಕಗಳಲ್ಲಿ ಶೇ.೫೦ರಷ್ಟು ಮಾತ್ರ ಪರಿಗಣಿಸಿ ವೃತ್ತಿಶಿಕ್ಷಣ ಪ್ರವೇಶವನ್ನು ನೀಡಲಾಗುವುದು. ಇದರಿಂದಾಗಿ ಪಿ.ಯು.ಸಿ. ಪರೀಕ್ಷೆಗಾಗಿ ವಿದ್ಯಾರ್ಥಿ ವರ್ಷವಿಡೀ ಪಟ್ಟ ಪರಿಶ್ರಮಕ್ಕೆ ಸಿಕ್ಕ ಬೆಲೆಯಾದರೂ ಏನು?

ಸಿ.ಇ.ಟಿ.ಯು ಎರಡು ದಿನ ಪರೀಕ್ಷೆ ನಡೆಸಿ ವಿದ್ಯಾರ್ಥಿಯ ಅರ್ಹತೆಯನ್ನು ಪರಿಗಣಿಸುವುದಾದರೆ, ಎರಡು ವರ್ಷಗಳ ಕಾಲ ವಿದ್ಯಾರ್ಥಿಯನ್ನು ಮುಂದಿನ ಬದುಕಿಗೆ ಅನುಕೂಲವಾಗುವಂತೆ ತಳಹದಿ ಹಾಕುವ ಪಿ.ಯು.ಸಿ. ಮಂಡಲಿಯ ಕಾರ್ಯ ನಿರ್ವಹಣೆ ಸರಿ ಇಲ್ಲವೇ? ಒಂದು ವೇಳೆ ಈ ಮಂಡಲಿ ಬಗ್ಗೆ ಸರ್ಕಾರಕ್ಕೆ ವಿಶ್ವಾಸವಿದ್ದರೆ ಪ್ರತಿ ವರ್ಷ ಐವತ್ತು ಸಾವಿರ ವಿದ್ಯಾರ್ಥಿಗಳಿಗೆ ಅನಾವಶ್ಯಕವಾಗಿ ಸಾಮಾನ್ಯ ಪ್ರವೇಶ ಪರೀಕ್ಷೆ ನಡೆಸುವುದಾದರೂ ಏತಕ್ಕೆ? ಇವೆಲ್ಲವನ್ನೂ ಯೋಚಿಸುತ್ತಾ ಹೋದರೆ ಪ್ರವೇಶ ಪರೀಕ್ಷೆ ವ್ಯವಸ್ಥೆಯ ಬಗ್ಗೆ ಜಿಗುಪ್ಸೆ ಮೂಡದಿರದು.

ಈ ಅನಗತ್ಯ ಗೊಂದಲಗಳಿಂದ ಹೊರ ಬರುವ ಪ್ರಯತ್ನದಲ್ಲಿ ರಾಜ್ಯ ಸರ್ಕಾರ ಮತ್ತೊಂದು ಗೊಂದಲದ ಗುಂಡಿಗೆ ಬೀಳುವುದೆಂಬ ಆತಂಕ ನಮ್ಮನ್ನು ಕಾಡದಿಲ್ಲ. ಹೀಗಾಗಿ ನಮ್ಮ ವಿದ್ಯಾರ್ಥಿಗಳು ಮತ್ತು ಅವರ



## ನೀನಾಸಮ್ ರಂಗ ಶಿಕ್ಷಣ

ನೀನಾಸಮ್ ರಂಗ ಶಿಕ್ಷಣ ಕೇಂದ್ರ ೧೯೯೭-೯೮ನೇ ಸಾಲಿಗೆ ಪ್ರಶಿಕ್ಷಣಕ್ಕೆ ಅರ್ಜಿಗಳನ್ನು ಆಹ್ವಾನಿಸುತ್ತದೆ. ಪ್ರವೇಶಕ್ಕೆ ಕನಿಷ್ಠ ವಿದ್ಯಾರ್ಹತೆ ಎಸ್‌ಎಸ್‌ಎಲ್‌ಸಿ ಪದವೀಧರರಿಗೆ ಆದ್ಯತೆ. ರಂಗಭೂಮಿಯಲ್ಲಿ ಆಸಕ್ತಿಯಿದ್ದು, ಸ್ವಲ್ಪ ಮಟ್ಟಿಗೆ ಅನುಭವ ಅಗತ್ಯ. ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ಊಟ ವಸತಿ ವ್ಯವಸ್ಥೆಯಿದೆ. ಎಲ್ಲೂರಿಗೂ ವಿದ್ಯಾರ್ಥಿ ವೇತನ ದೊರೆಯುತ್ತದೆ. ಇಪ್ಪತ್ತು ರೂಪಾಯಿ ಕಳಿಸಿ ಪ್ರಾಸ್ಪೆಕ್ಟಸ್ ಮತ್ತು ಪ್ರವೇಶ ಪತ್ರ ಪಡೆದುಕೊಳ್ಳಬಹುದು.

ವಿಳಾಸ :

**ನೀನಾಸಮ್ ರಂಗ ಶಿಕ್ಷಣ ಕೇಂದ್ರ,**
ಹೆಗ್ಗೋಡು, ಸಾಗರ,
ಶಿವಮೊಗ್ಗ-೫೭೭ ೪೧೭

ಪೋಷಕರು ಇಂಜನಿಯರಿಂಗ್ ಮತ್ತು ವೈದ್ಯಕೀಯ ಶಿಕ್ಷಣವೆಂಬ ಭ್ರಮೆಯಿಂದ ಹೊರಬರಬೇಕು. ಇಲ್ಲವಾದರೆ ಇದೇ ಭ್ರಮೆಯಲ್ಲಿ ಬಳಲಬೇಕು.

ವ್ಯವಹಾರಿಕವಾಗಿ ಹಾಗೂ ವೈಜ್ಞಾನಿಕವಾಗಿ ಸಾಕಷ್ಟು ಸ್ಪರ್ಧಾತ್ಮಕವಾದ ಈ ದಿನಗಳಲ್ಲಿ ಪೋಷಕರು ತಮ್ಮ ಮಕ್ಕಳಿಗೆ ವೈದ್ಯಕೀಯ ಮತ್ತು ಇಂಜನಿಯರಿಂಗ್ ಶಿಕ್ಷಣವನ್ನೇ ಕೊಡಿಸ ಬೇಕೆಂಬ ಆಸೆಯನ್ನು ಬಿಡಬೇಕು. ಈ ನಿಮ್ಮ ಆಸೆ ಪ್ರವೇಶ ಪರೀಕ್ಷೆಯಂತಹ ವ್ಯವಸ್ಥೆಯಂತೆ ಒಂದು ಅವಾಸ್ತವಿಕ ಕಲ್ಪನೆಯಷ್ಟೇ. ಸಹಸ್ರಾರು ಮಂದಿ ವೈದ್ಯಕೀಯ ಹಾಗೂ ಎಂಜನಿಯರಿಂಗ್ ಪದವೀಧರರು ನಿರುದ್ಯೋಗ ಮಾರುಕಟ್ಟೆ ಯಲ್ಲಿ ಅಸ್ತಿತ್ವಕ್ಕಾಗಿ ಹೆಣಗುತ್ತಿದ್ದಾರೆ. ಸ್ಪರ್ಧಾತ್ಮಕವಾಗಿ ಬದುಕಲು ಇನ್ನೂ ಅನೇಕ ಅತ್ಯುತ್ತಮ ಕೋರ್ಸ್‌ಗಳಿವೆ ಎಂಬುದನ್ನು ಪೋಷಕರು ಮನಗಾಣಬೇಕು. ಎಂ.ಸಿ.ಎ., ಬಿ.ಎಸ್ಸಿ. (ಕಂಪ್ಯೂಟರ್) ಕೋರ್ಸ್‌ಗಳು, ಪರಿಸರ ಮಾಲಿನ್ಯ ನಿಯಂತ್ರಣಕ್ಕೆ ಸಂಬಂಧಿಸಿದ ಪದವಿಗಳು, ಎಕಾಲಜಿ, ರೇಡಿಯೋಗ್ರಾಫಿ, ಹೋಟೆಲ್ ಮ್ಯಾನೇಜ್‌ಮೆಂಟ್, ಏರ್‌ಕ್ರಾಫ್ಟ್ ಗ್ರೌಂಡ್ ಇಂಜನಿಯರಿಂಗ್ ಮಂತಾದ ವೃತ್ತಿಪರ ವಿಷಯಗಳಲ್ಲಿ ಪದವಿ ಪಡೆದರೆ ಉದ್ಯೋಗಕ್ಕೆ ಉತ್ತಮ ಅವಕಾಶವಿದೆ. ಇದಲ್ಲದೆ ಪಶು ವೈದ್ಯಕೀಯ, ಮೀನುಗಾರಿಕೆ, ತೋಟಗಾರಿಕೆ, ಹೈನುಗಾರಿಕೆ, ಅರಣ್ಯಶಾಸ್ತ್ರ ರೇಷ್ಮೆ ಕೃಷಿ ವಿಜ್ಞಾನದಂತಹ ವಿಷಯಗಳಲ್ಲಿನ ಪದವಿಗಳು ವೈದ್ಯಕೀಯ ಮತ್ತು ಇಂಜನಿಯ ರಿಂಗ್ ಪದವಿಯಷ್ಟೇ ಪ್ರಾಮುಖ್ಯವನ್ನು ಪಡೆದಿವೆ.

ಇನ್ನಾದರೂ ನಮ್ಮ ಪೋಷಕರು ಇಂಜನಿಯರ್ ಮತ್ತು ವೈದ್ಯಕೀಯ ಪದವಿಯ ವಾಸ್ತವ ಕಠೋರತೆಯನ್ನು ಮನಗಂಡು ಅದಕ್ಕಿಂತಲೂ ಉತ್ತಮವಾದ ಪರ್ಯಾಯ ಗಳನ್ನು ಹುಡುಕಿಕೊಳ್ಳುವುದು ಉಚಿತ ಎನಿಸುತ್ತದೆ.

●

---

## ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು

### ಬಹುಮಾನ

ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು ಶ್ರೀಮತಿ ಯಮುನಾಬಾಯಿ ಅವರ ನೆನಪಿನಲ್ಲಿ ಮಕ್ಕಳ ವಿಜ್ಞಾನ ಸಾಹಿತ್ಯ ಪುಸ್ತಕಕ್ಕೆ ರೂ.೧,೦೦೦ ಬಹುಮಾನ ನೀಡಲಿದೆ. ಮಕ್ಕಳ ವಿಜ್ಞಾನ ಸಾಹಿತ್ಯ ಪುಸ್ತಕಗಳು ೧೯೯೧ ಜನವರಿಯಿಂದ ೧೯೯೭ ಡಿಸೆಂಬರ್ ಒಳಗೆ ಪ್ರಕಟವಾಗಿರಬೇಕು.

ವಿಜ್ಞಾನಕ್ಕೆ ಒತ್ತು ಕೊಡುವ, ೯ ರಿಂದ ೧೫ ವರ್ಷ ವಯೋಮಿತಿಯ ಮಕ್ಕಳನ್ನು ಗಮನದಲ್ಲಿಟ್ಟು ರಚಿತವಾದ ಕೃತಿಗಳು ಮಾತ್ರ ಬಹುಮಾನಕ್ಕೆ ಅರ್ಹತೆ ಪಡೆಯ ಲಿವೆ. ಕೃತಿ ಕನಿಷ್ಟ ನಾಲ್ಕು ಸಾವಿರ ಪದಗಳನ್ನು ಒಳಗೊಂಡಿರಬೇಕು ಹಾಗೂ ಯಾವುದೇ ಪಠ್ಯಕ್ರಮವನ್ನು ಅನುಸರಿಸಿ ಬರೆದದ್ದಾಗಿರ ಬಾರದು. ಹೆಚ್ಚಿನ ವಿವರಗಳನ್ನು ಕಾರ್ಯದರ್ಶಿ, ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು, ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಸೈನ್ಸ್ ಆವರಣ, ಬೆಂಗಳೂರು-೧೨ ಅವರಿಂದ ಪಡೆಯಲು ಕೋರಲಾಗಿದೆ. ಪುಸ್ತಕಗಳನ್ನು ವಿಜ್ಞಾನ ಪರಿಷತ್ತಿಗೆ ಕಳುಹಿಸಲು ಜೂನ್ ೩೦ ಕೊನೆಯ ದಿನಾಂಕ.

## ಧನ ಸಹಾಯ

ಬುಡಕಟ್ಟು ಹಾಗೂ ಜಾನಪದ ಕಲೆ, ಸಂಸ್ಕೃತಿಗೆ ಪ್ರೋತ್ಸಾಹ ನೀಡಿ ಅದರ ಅಭಿವೃದ್ಧಿಗೆ ಶ್ರಮಿಸುತ್ತಿರುವ ನೋಂದಾಯಿತ ಸ್ವಯಂ ಸೇವಾ ಸಂಸ್ಥೆ ಮತ್ತು ವ್ಯಕ್ತಿಗಳಿಗೆ ಧನ ಸಹಾಯ ಒದಗಿಸಲು ಯೋಜಿಸಲಾಗಿದೆ. ಆಯ್ಕೆ ಯಾದ ಕಾರ್ಯಕ್ರಮ ಹಾಗೂ ಯೋಜನೆಗೆ ಎಲ್ಲ ಖರ್ಚು ಸೇರಿ ನೀಡಲಾಗುವ ಗರಿಷ್ಠ ಮೊತ್ತ ಎರಡು ಲಕ್ಷ ರೂಪಾಯಿಗಳು.

ಅರ್ಜಿಗಳನ್ನು ಸಲ್ಲಿಸುವ ಸ್ವಯಂ ಸೇವಾ ಸಂಸ್ಥೆಗಳು ರಾಜ್ಯ ಸರ್ಕಾರದ ಮೂಲಕ ಕಳುಹಿಸಬೇಕು.

ನಿಗದಿತ ಅರ್ಜಿ ನಮೂನೆಯನ್ನು ವಿಭಾಗಾಧಿಕಾರಿ, ಸಂಸ್ಕೃತಿ ಇಲಾಖೆ, ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವಾಲಯ, ಪಿ.ಎ.ಜಡ್.ಸಿ.ಸಿ. ವಿಭಾಗ, ಶಾಸ್ತ್ರೀ ಭವನ, ನವದೆಹಲಿ-೧. ಇವರಿಂದ ಅಥವಾ ಆಯಾ ರಾಜ್ಯ ಸರ್ಕಾರಗಳಿಂದ ಪಡೆದು, ಭರ್ತಿ ಮಾಡಿದ ಅರ್ಜಿಯನ್ನು ಜೂನ್ ೩೦ ರೊಳಗೆ ಹಿಂದಿರುಗಿಸಲು ಕೋರಲಾಗಿದೆ.

# ಅಮೆರಿಕದಲ್ಲಿ ಉನ್ನತ ಶಿಕ್ಷಣ!

**ಅಮೆರಿಕದಲ್ಲಿ ಶಿಕ್ಷಣ ಪಡೆಯುತ್ತಿರುವ ಭಾರತೀಯ ವಿದ್ಯಾರ್ಥಿಗಳ ಸಂಖ್ಯೆ ೩೬೦೦೦! ಪ್ರಯತ್ನಪಟ್ಟರೆ ನೀವೂ ಅಮೆರಿಕೆಯಲ್ಲಿ ಉನ್ನತ ಶಿಕ್ಷಣ ಪಡೆಯುವುದು ಅಸಾಧ್ಯವಲ್ಲ.**

ಜಗತ್ತಿನಾದ್ಯಂತ ನಡೆದ ವೈಜ್ಞಾನಿಕ ಸಂಶೋಧನೆಯಿಂದಾಗಿ ಇಂದಿನ ವಿಶ್ವ ಸಂಕುಚಿತವಾಗುತ್ತ ನಡೆದಿದೆ. ಅತ್ಯಂತ ವೇಗವಾಗಿ ಹಾರಾಡುವ ವಿಮಾನಗಳು ಇದಕ್ಕೆ ಕಾರಣವೆಂದು ಧಾರಾಳವಾಗಿ ಹೇಳಬಹುದು. ಆದರೆ ಮನುಷ್ಯನ ದೈನಂದಿನ ಚಟುವಟಿಕೆಗಳಿಗೆ ಅವಶ್ಯವಿರುವ ಕ್ಷೇತ್ರಗಳು ಬೆಳೆಯುತ್ತಲೇ ಇವೆ. ಮನುಷ್ಯನು ಶಿಕ್ಷಣ ಕ್ಷೇತ್ರದಲ್ಲಿ ಆಸ್ಥೆ ವಹಿಸುತ್ತಿದ್ದಂತೆಯೇ ಅವನಲ್ಲಿ ಸುಪ್ತನಾಗಿದ್ದ ಆಸೆ ಆಕಾಂಕ್ಷೆಗಳು ದಿಗಂತದತ್ತ ಧಾವಿಸುತ್ತವೆ. ಅವುಗಳನ್ನು ಸಾಕಾರಗೊಳಿಸುವ ಪ್ರಯತ್ನದ ಫಲವಾಗಿ ಸಂಶೋಧನೆಯತ್ತ ತನ್ನ ದೃಷ್ಟಿ ಹರಿಸಬೇಕಾಗುತ್ತದೆ. ಇಂದಿನ ಆಶ್ಚರ್ಯಕರ ವಿಶ್ವಕ್ಕೆ ಈ ಸಂಶೋಧನೆಯೇ ಭದ್ರವಾದ ತಳಪಾಯವಾಗಿದೆ. ಎಂಥ ಅಗಾಧವಾದ ಬೆಳವಣಿಗೆಯನ್ನೂ ತಡೆದುಕೊಳ್ಳುವ ಶಕ್ತಿ ಈ ತಳಪಾಯಕ್ಕಿದೆ ಎಂದರೆ ಯಾವ ಅತಿಶಯೋಕ್ತಿಯೂ ಆಗಲಾರದು.

ಶಿಕ್ಷಣ ಕ್ಷೇತ್ರ ಎಲ್ಲ ಚಟುವಟಿಕೆಗಳಿಗೂ ಮೂಲ. ದೇಶದ, ಅಷ್ಟೆ ಏನು, ವಿಶ್ವದ ಜನಸಂಖ್ಯೆ ಬೆಳೆದಷ್ಟೂ ಜನರು ಶಿಕ್ಷಣದ ಮಹತ್ವದ ಬಗ್ಗೆ ಎಚ್ಚೆತ್ತುಕೊಳ್ಳುತ್ತಿದ್ದಾರೆ. ಶಿಕ್ಷಣವಿಲ್ಲದೆ ಜೀವನವೇ ಅಸಾಧ್ಯವೆನ್ನುವಷ್ಟರ ಮಟ್ಟಿಗೆ ಶೈಕ್ಷಣಿಕ ಕ್ಷೇತ್ರ ಬೆಳೆಯುತ್ತಿದೆ. ಭಾರತದಲ್ಲಿ ಆ ಕ್ಷೇತ್ರ ಬೆಳೆದಂತೆ ವಿಶ್ವದ ಅನೇಕ ದೇಶಗಳಲ್ಲಿ ಸಹ, ಬೆಳವಣಿಗೆ ಒಂದೇ ವೇಗದಲ್ಲಿ ಆಗದಿದ್ದರೂ, ಬೆಳೆಯುತ್ತಲೇ ಇದೆ. ಈ ಹೇಳಿಕೆಯನ್ನು ಪುಷ್ಟೀಕರಿಸಲು ಅನೇಕ ಉದಾಹರಣೆಗಳನ್ನು ಕೊಡಬಹುದು.

ಇತ್ತೀಚಿನ ವರುಷಗಳಲ್ಲಿ ಆರ್ಥಿಕ ಉದಾರೀಕರಣದ ಫಲವಾಗಿ ಶಿಕ್ಷಣ ಪಡೆದ ವಿದ್ಯಾರ್ಥಿಗಳ ಮನೆ ಬಾಗಿಲುಗಳನ್ನು ಸಾವಿರಾರು ಸಂಖ್ಯೆಯ ಸುಸಂಧಿಗಳು ತಟ್ಟುತ್ತಿವೆ. ಬಹುರಾಷ್ಟ್ರೀಯ ಸಂಸ್ಥೆಗಳು ದೇಶದಲ್ಲಿ ಕಾಲಿಟ್ಟಾಗಿನಿಂದ ವಿಜ್ಞಾನ-ಇಂಜನಿಯರಿಂಗ್ ಶಿಕ್ಷಣ ಪಡೆದ ಸಾವಿರಾರು ವಿದ್ಯಾರ್ಥಿಗಳ ಕಲ್ಪನೆಗೆ ಗರಿಮೂಡಿದೆ. ಈ ಸಂಸ್ಥೆಗಳ ಕಾರ್ಯಕ್ರಮಗಳಲ್ಲಿ, ಯೋಜನೆಗಳಲ್ಲಿ ತೊಡಗಿಸಿಕೊಳ್ಳುವ ಅವಕಾಶಗಳು ಹೆಚ್ಚಿದಂತೆ, ಆದಾಯವೂ ಸಹ ಭೂತ ಕಾಲದೊಂದಿಗೆ ತುಲನೆ ಅಸಾಧ್ಯವಾಗುವ ರೀತಿಯಲ್ಲಿ ಹೆಚ್ಚಿದೆ.

ಶಿಕ್ಷಣದ ಬೆಳವಣಿಗೆ 'ಪಿರಾಮಿಡ್' ಮಾದರಿಯದಾದ ಕಾರಣ ಪದವಿಪೂರ್ವ ಮಹಾವಿದ್ಯಾಲಯಗಳ ಸಂಖ್ಯೆಯಲ್ಲೂ ಹೆಚ್ಚಳ ನೋಡುತ್ತೇವೆ. ಮುಂದಿನ ಶಿಕ್ಷಣಕ್ಕೆ ಈ ಹಂತವೇ 'ಮಹಾದ್ವಾರ'ವಾಗಿರುವುದರಿಂದ ವಿದ್ಯಾರ್ಥಿಗಳು ಗಂಭೀರ ಅಧ್ಯಯನ ಮಾಡಲೇಬೇಕಾಗುತ್ತದೆ. ವೈದ್ಯಕೀಯ, ಇಂಜನಿಯರಿಂಗ್, ಕಲೆ, ವಿಜ್ಞಾನ ಹಾಗೂ ವಾಣಿಜ್ಯ ಅಧ್ಯಯನಕ್ಕೆ ಒಳ್ಳೆಯ ದರ್ಜೆಯ ಮಹಾವಿದ್ಯಾಲಯದಲ್ಲಿ ಪ್ರವೇಶ ಪಡೆಯಬೇಕಾದರೆ ಮೊದಲನೆ ವರ್ಗದಲ್ಲಿ ಉತ್ತೀರ್ಣರಾಗಬೇಕಾಗುತ್ತದೆ. ತಪ್ಪಿದರೆ ಯಾವದೋ ಒಂದು

*ಮೂಲತಃ ಧಾರವಾಡದವರಾದ ಡಾ. ನಾರಾಯಣ್ ಮಹಿಷಿಯವರು ಕರ್ನಾಟಕ ಕಾಲೇಜಿನಲ್ಲಿ ವಿಜ್ಞಾನ ಪದವಿಯನ್ನೂ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಸ್ನಾತಕೋತ್ತರ ಪದವಿಯನ್ನೂ ಪಡೆದು ಭಾರತೀಯ ವಿಜ್ಞಾನ ಸಂಸ್ಥೆಯಲ್ಲಿ ಪಿ.ಎಚ್.ಡಿ. ಮಾಡಿದ್ದಾರೆ. ಲಂಡನ್ನಿನ ರಾಯಲ್ ಸೊಸೈಟಿ ಆಫ್ ಕೆಮಿಸ್ಟ್ರಿಯ ಸದಸ್ಯರಾಗಿರುವ ಅವರು ಅದೇ ಸಂಸ್ಥೆಯ ದಕ್ಷಿಣ ವಿಭಾಗದ ಗೌರವ ಕಾರ್ಯದರ್ಶಿಯೂ ಹೌದು. ಪ್ರಸ್ತುತ ಭಾರತೀಯ ವಿಜ್ಞಾನ ಸಂಸ್ಥೆಯ ಅಲಮ್ನಿ ಅಸೋಶಿಯೇಷನ್‌ನ ಗೌರವ ಮಹಾಕಾರ್ಯದರ್ಶಿಯಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಅವರು ಕಳೆದ ಮೂವತ್ತೈದು ವರ್ಷಗಳ ಅವಧಿಯಲ್ಲಿ ಕನ್ನಡ ಹಾಗೂ ಇಂಗ್ಲಿಷ್ ಭಾಷೆಗಳೆರಡರಲ್ಲಿ ಸುಮಾರು ೧೫೦೦ ಲೇಖನಗಳನ್ನು ಬರೆದಿದ್ದಾರೆ. ಜನಪ್ರಿಯ ವಿಜ್ಞಾನ ವಿಷಯದ ಮೇಲೆ ಮಹಿಷಿಯವರು ಕನ್ನಡದಲ್ಲಿ ಐದು ಪುಸ್ತಕ ಪ್ರಕಟಿಸಿದ್ದಾರೆ.*

*ಅವರ ಪತ್ನಿ ಹೇಮಲತಾ ಮಹಿಷಿಯವರು ಸಹ ಕನ್ನಡದ ಹೆಸರಾಂತ ಲೇಖಕಿ. ಮಹಿಷಿ ದಂಪತಿಗೆ ಒಬ್ಬನೇ ಮಗ. ಚಿಕ್ಕ ಚೊಕ್ಕ ಸಂಸಾರ.*

*ಅನೇಕ ವರ್ಷಗಳ ಕಾಲ ವಿದೇಶದಲ್ಲಿದ್ದು ಬಂದಿರುವ, ಹಲವಾರು ವಿಶ್ವವಿದ್ಯಾಲಯಗಳೊಂದಿಗೆ ನಿಕಟ ಸಂಪರ್ಕ ಹೊಂದಿರುವ ಡಾ. ನಾರಾಯಣ್ ಮಹಿಷಿಯವರು 'ಬಿಸಿಲ ಬದುಕು' ಓದುಗರಿಗಾಗಿಯೇ ಪ್ರತಿ ತಿಂಗಳು ಉನ್ನತ ವ್ಯಾಸಂಗದ ಬಗ್ಗೆ ಉಪಯುಕ್ತ ಮಾಹಿತಿ - ಮಾರ್ಗದರ್ಶನ ನೀಡುತ್ತಾರೆ.*



**ಡಾ. ನಾರಾಯಣ್ ಮಹಿಷಿ**
ಭಾರತೀಯ ವಿಜ್ಞಾನ ಸಂಸ್ಥೆ,
ಬೆಂಗಳೂರು.

ಕಳಪೆ ಮಹಾವಿದ್ಯಾಲಯವನ್ನು ಸೇರಬೇಕಾಗುತ್ತದೆ. ಈ ಅರ್ಧ ಶತಮಾನದಲ್ಲಿ ವಿಶ್ವವಿದ್ಯಾಲಯಗಳ ಸಂಖ್ಯೆಯಲ್ಲೂ ಗಣನೀಯವಾದ ಹೆಚ್ಚಳ ಕಂಡುಬಂದಿದೆ. ೧೯೪೭ರಲ್ಲಿ

***ಪಿ.ಎಚ್.ಡಿ. ನಂತರದ ಸಂಶೋಧನೆಯಲ್ಲಿ ಮೂರು ವರುಷ ಸಂಪಾದಿಸಿದ ಹಣವನ್ನು ಭಾರತಕ್ಕೆ ಹಿಂತಿರುಗಿದ ನಂತರ ಬ್ಯಾಂಕ್‌ನಲ್ಲಿಟ್ಟು ಅದರ ಬಡ್ಡಿಯ ಮೇಲೆ ಇಡೀ ಜೀವನ ನಡೆಸಬಹುದು!***

ದೇಶದಲ್ಲಿ ಕೇವಲ ಹತ್ತೊಂಬತ್ತು ವಿಶ್ವವಿದ್ಯಾಲಯಗಳಿದ್ದವು; ಈಗ ಈ ಸಂಖ್ಯೆ ಇನ್ನೂರನ್ನು ಮುಟ್ಟಿದೆ. ಕೃಷಿ ವಿಶ್ವವಿದ್ಯಾಲಯಗಳೂ ಅಸ್ತಿತ್ವದಲ್ಲಿ ಬಂದಿದೆ. ಇಷ್ಟಾದರೂ ಸಹ ಅಮೆರಿಕ ವಿಶ್ವವಿದ್ಯಾಲಯಗಳ ಸಂಖ್ಯೆಯನ್ನು ಮುಟ್ಟುವದು ಅಸಾಧ್ಯವೆಂದರೂ ಆಶ್ಚರ್ಯವಾಗುವುದಿಲ್ಲ. ಅಮೆರಿಕದಲ್ಲಿರುವ ಭಾರತೀಯ ವಿದ್ಯಾರ್ಥಿಗಳ ಸಂಖ್ಯೆ ಸುಮಾರು ೩೬,೦೦೦. ಪ್ರತಿ ವರುಷ ನಮ್ಮ ವಿದ್ಯಾರ್ಥಿಗಳು ವಲಸೆ ಹೋಗುತ್ತಲೇ ಇರುತ್ತಾರೆ. ಅಲ್ಲಿ ವಿಶ್ರಾಂತಿ ಇಲ್ಲದಂತೆ ಶ್ರಮ ವಹಿಸಿ ಅಧ್ಯಯನ ನಡೆಸಿ ಪ್ರತಿಭಾವಂತರಾಗಿ ತಿರುಗಿ ಬರುತ್ತಾರೆ. ನಮ್ಮ ವಿದ್ಯಾರ್ಥಿಗಳು ಅಮೆರಿಕದ ನೆಲದ ಮೇಲೆ ಕಾಲಿಟ್ಟ ಕ್ಷಣದಿಂದ ಸಮಯಕ್ಕೆ ಎಲ್ಲಿಲ್ಲದ ಮಹತ್ವ ಬರುತ್ತದೆ. ಅಲ್ಲಿಯ ಶಿಕ್ಷಣ ಬಹಳೇ ತುಟ್ಟಿಯಾದದ್ದು. ಜೀವನ ನಡೆಸುವದೂ ಅಷ್ಟೇ ಖರ್ಚಿನದು. ಆದ ಕಾರಣ ಸಮಯಪ್ರಜ್ಞೆ ಜಾಗ್ರತವಾಗಲೇ ಬೇಕಾಗುತ್ತದೆ.

## ಪರದೇಶಕ್ಕೆ ಹೋಗುವ ಮುನ್ನ

ಪರದೇಶ ಎಂದ ತಕ್ಷಣ ನಮ್ಮ ಕಣ್ಮುಂದೆ ಬಂದು ನಿಲ್ಲುವದು ಅಮೆರಿಕ. ಇತ್ತೀಚೆಗೆ ಕೆನಡಾ, ಆಸ್ಟ್ರೇಲಿಯಾ, ಇಂಗ್ಲೆಂಡ್‌ಗಳು ಸಹ ಪಟ್ಟಿಯಲ್ಲಿ ಸೇರ್ಪಡೆಯಾಗಿವೆ. ಇಲ್ಲಿಯ-ಅಲ್ಲಿಯ ಶೈಕ್ಷಣಿಕ ಗುಣಮಟ್ಟಗಳಲ್ಲಿ ವ್ಯತ್ಯಾಸವಿರುವದರಿಂದೇ ನಾವು ಟಾಫೆಲ್ (TOEFL) ಮತ್ತು ಗ್ರಾಜುಯೇಟ್ ರೆಕಾರ್ಡ್ ಪರೀಕ್ಷೆ (GRE) ಅಥವಾ ವಾಣಿಜ್ಯ ವಿಷಯವನ್ನು ಅಧ್ಯಯನ ಮಾಡಲು ಹೋಗುವದಿದ್ದರೆ GMAT ಪರೀಕ್ಷೆಯನ್ನು ಉಚ್ಚ ಅಂಕಗಳನ್ನು ಪಡೆದು ಪಾಸ್ ಮಾಡಬೇಕಾಗುತ್ತದೆ. ಇವುಗಳ ಜೊತೆಗೆ ಪ್ರಾಧ್ಯಾಪಕರು ಬರೆದ ಶಿಫಾರಸು ಪತ್ರಗಳು ಮತ್ತು ಇಲ್ಲಿಯವರೆಗಿನ ವಿಶ್ವವಿದ್ಯಾಲಯದಲ್ಲಿನ ಅಧ್ಯಯನದ ಫಲಿತಾಂಶಗಳ ಆಧಾರದ ಮೇಲೆ ಆರ್ಥಿಕ ಸಹಾಯ ನಿರ್ಧಾರವಾಗುತ್ತದೆ. ಉಳಿದ ವಿದ್ಯಾರ್ಥಿಗಳೊಂದಿಗೆ ಸ್ಪರ್ಧೆಯಲ್ಲಿ ಭಾಗವಹಿಸಬೇಕಾಗುತ್ತದೆ. ಸ್ಪರ್ಧಾ ಕಣದ ಎಲ್ಲರೂ ಪ್ರತಿಭಾವಂತ ವಿದ್ಯಾರ್ಥಿಗಳೇ ಇರುವುದರಿಂದ, ಸ್ಪರ್ಧೆ ಮೇಲ್ಮಟ್ಟದ್ದಿರುತ್ತದೆಂಬುದನ್ನು ಯಾರೂ ಮರೆಯುವಂತಿಲ್ಲ. ಶಿಷ್ಯ ವೃತ್ತಿ ಸಂಖ್ಯೆ, ಬೋಧಕ ಸಹಾಯಕರ (TEACHING ASSISTANT) ಹಾಗೂ ಸಂಶೋಧನ ಸಹಾಯಕರ (RESEARCH ASSISTANT) ಸಂಖ್ಯೆ ಪ್ರವೇಶ ಪಡೆಯ ಬಯಸುವ ವಿದ್ಯಾರ್ಥಿಗಳ ಸಂಖ್ಯೆಗಿಂತ ಕಡಿಮೆ ಇರುವುದರಿಂದಲೇ ಸ್ಪರ್ಧೆ ತುಂಬ ತುರುಸಿನದಾಗಿರುತ್ತದೆ. ಮೊದಲನೆ ಸೆಮಿಸ್ಟರ್‌ನಲ್ಲಿ ಆರ್ಥಿಕ ಸಹಾಯ ಸಿಗದೇ ಹೋದರೂ ಎರಡನೆಯದರಲ್ಲಿ ಸಿಗುವ ಸಂಭವ ಹೆಚ್ಚು. ಇದು ಕೇಳಿ-ನೋಡಿದ ಅನುಭವ. ಇಂಥ ಸಹಾಯವಿಲ್ಲದೆ ಎರಡು ವರುಷ ಅಧ್ಯಯನ ನಡೆಸುವದು ಸಾಮಾನ್ಯ ಭಾರತೀಯ ವಿದ್ಯಾರ್ಥಿಗೆ ಸಾಧ್ಯವೇ ಇಲ್ಲ!

ಸುಮಾರು ಎರಡು ವರುಷಗಳಲ್ಲಿ ಎಂ.ಎಸ್. ಮುಗಿಸಿ ಪಿ.ಹೆಚ್.ಡಿ. ಮಾಡುವಷ್ಟು ತಾಳ್ಮೆ, ಉತ್ಸಾಹ, ಆಂತರಿಕ ಹಂಬಲ ಇದ್ದರೆ ಕೂಡಾ ಅಂತಿಮವಾಗಿ ಶಿಕ್ಷಣ ಮುಗಿಸಲು ೩-೪ ವರುಷಗಳು ಬೇಕಾಗುತ್ತವೆ. ಪಿಎಚ್‌ಡಿ ನಂತರ ಸಂಶೋಧನೆ ಸಾಧ್ಯವಾದಲ್ಲಿ (POST DOCTORAL FELLOWSHIP) ಕಲಿಯುವದರ ಜೊತೆಗೆ ಹಣ ಸಂಪಾದನೆಗೂ ಬೇಕಾದಷ್ಟು ಅವಕಾಶವಿದೆ. ಅತಿಶಯೋಕ್ತಿ ಇರದ ಭಾಷೆಯಲ್ಲಿ ಹೇಳಬೇಕಾದರೆ, ಮೂರು ವರುಷ ಪಿಎಚ್‌ಡಿ ನಂತರದ ಸಂಶೋಧನೆಯಲ್ಲಿ ಸಂಪಾದಿಸಿದ ಹಣವನ್ನು ಭಾರತಕ್ಕೆ ಹಿಂತಿರುಗಿದ ಮೇಲೆ ಬ್ಯಾಂಕ್‌ನಲ್ಲಿಟ್ಟು ಬಂದ ಬಡ್ಡಿಯ ಮೇಲೆ ಮತ್ತಾವ ಕೆಲಸವನ್ನೂ ಮಾಡದೆ ಇಡೀ ಜೀವನ ನಡೆಸಬಹುದು. ಅಮೆರಿಕದ ಸಾಮಾನ್ಯ ವಿಶ್ವವಿದ್ಯಾಲಯದಲ್ಲಿಯೂ ಆಧುನಿಕ ಉಪಕರಣಗಳ ಸೌಲಭ್ಯವಿರುವದರಿಂದ ಸಂಶೋಧನೆಯ ಗುಣಮಟ್ಟ ಹೆಚ್ಚುತ್ತಿದೆಂಬುದಕ್ಕೆ ಪ್ರಕಟಿಸಿದ ಸಂಶೋಧನಾ ಪ್ರಬಂಧಗಳೇ ಸಾಕ್ಷಿ.

## ಇತ್ತೀಚಿನ ಧೋರಣೆ

ಪರದೇಶಗಳಿಗೆ ಹೋಗಬೇಕಾದರೆ ಭಾರತ ಸರ್ಕಾರ ಕೊಡುವ ಪಾಸ್‌ಪೋರ್ಟ್‌ಬೇಕು, ನಾವು ಹೋಗುವ ದೇಶದ 'ವಿಸಾ' (VISA) ಸಹ ಅತ್ಯಗತ್ಯ. ಅದಿಲ್ಲದೆ ಪರದೇಶದ ನೆಲದ ಮೇಲೆ ಕಾಲಿಡಲೂ ಸಾಧ್ಯವಾಗುವದಿಲ್ಲ. ಇತ್ತೀಚಿನ ದಿನಗಳಲ್ಲಿ ಅಮೆರಿಕಕ್ಕೆ ಓದಲು ಹೋಗುವ ಅನೇಕ ವಿದ್ಯಾರ್ಥಿಗಳಿಗೆ 'ವಿಸಾ'. ಸಿಗದ ಕಾರಣ ಆ ದೇಶಕ್ಕೆ ಹೋಗಲು ಹಿಂದೇಟು ಹಾಕುತ್ತಿದ್ದಾರೆ. ಪ್ರಾಥಮಿಕ ಸಿದ್ಧತೆಯ ಕೊನೆಯ ಹಂತವೇ 'ವಿಸಾ' - ಅದನ್ನೇ ನಿರಾಕರಿಸಿದ ಮೇಲೆ ಅಲ್ಲಿಯವರೆಗೆ ಮಾಡಿದ ಪ್ರಯತ್ನಗಳೆಲ್ಲ ನಿಷ್ಪ್ರಯೋಜಕವಾಗುತ್ತವೆ. ಆದ್ದರಿಂದ ಅನೇಕ ವಿದ್ಯಾರ್ಥಿಗಳು ಕೆನಡಾ, ಆಸ್ಟ್ರೇಲಿಯಾ ದೇಶಗಳಿಗೆ ಹೋಗಲು ಪ್ರಯತ್ನ ಪಡುತ್ತಿದ್ದಾರೆ. ಅನೇಕ ವಾಣಿಜ್ಯ ಸಂಸ್ಥೆಗಳು 'ವಿಸಾ' ದೊರಕಿಸುವಲ್ಲಿ ಪೂರಕವಾದ ಪ್ರಯತ್ನ ಮಾಡಿ ಸಂಭಾವನೆಗೆ ಅರ್ಹವಾಗುತ್ತವೆ ಅರ್ಥಾತ್ 'ಫೀ' ತೆಗೆದುಕೊಂಡು ಸಹಾಯ ಮಾಡುತ್ತದೆ.

ಉಚ್ಚ ಶಿಕ್ಷಣಕ್ಕಾಗಿ ಪರದೇಶಗಳಿಗೆ, ಅದೂ ಅಮೆರಿಕಾಕ್ಕೆ ಹೋಗಬೇಕಾದರೆ ಸುಮಾರು ಒಂದು ವರುಷ ಮೊದಲಿನಿಂದ ಪತ್ರವ್ಯವಹಾರ ಪ್ರಾರಂಭಿಸಬೇಕಾಗುತ್ತದೆ. ಟಾಫೆಲ್ ಪರಿಣಾಮವನ್ನು ಎರಡು ವರುಷಗಳವರೆಗೆ ಉಪಯೋಗಿಸಬಹುದು. ಜಿ.ಆರ್.ಇ. ಪರಿಣಾಮ ಐದು ವರುಷ ಸಪ್ರಮಾಣವಾಗಿರುತ್ತದೆ. ಆದ್ದರಿಂದ ಈ ಪರಿಕ್ಷೆಗಳನ್ನು ತೆಗೆದುಕೊಳ್ಳುವ ಸಮಯವನ್ನು ಅನುಕೂಲಕರವಾಗಿ ನಿರ್ಧರಿಸಬೇಕಾಗುತ್ತದೆ. ಇತ್ತೀಚಿನ ಕಾಲದಲ್ಲಿ ಫ್ಯಾಕ್ಸ್ (FAX) ಈಮೇಲ್ (E-Mail) ಸೌಲಭ್ಯ ಬಂದದ್ದರಿಂದ ಸಾಕಷ್ಟು ಸಮಯದ ಉಳಿತಾಯವನ್ನು ಮಾಡಬಹುದು.

## ಪ್ರವೇಶ ಅರ್ಜಿಗಾಗಿ ಇನ್ನೊಂದು ಅರ್ಜಿ

ಕೆಲವು ವರುಷಗಳ ಹಿಂದೆ ಪ್ರವೇಶ ಅರ್ಜಿಗಾಗಿ ತಾವು ಓದಿದ ವಿಷಯ, ಪದವಿ

***ಉನ್ನತ ಶಿಕ್ಷಣಕ್ಕಾಗಿ ಅಮೆರಿಕೆಗೆ ಹೋಗಬೇಕಾದರೆ ಒಂದು ವರುಷ ಮುಂಚಿನಿಂದಲೇ ಪತ್ರ ವ್ಯವಹಾರ ಪ್ರಾರಂಭಿಸಬೇಕಾಗುತ್ತದೆ.***

ಇತ್ಯಾದಿಗಳನ್ನು ಬರೆದು ಕಳಿಸಿದ್ದರೆ ಅರ್ಜಿ ಕಾಗದಗಳು ಬಂದುಬಿಡುತ್ತಿದ್ದವು. ಅಮೆರಿಕನ್ನರಿಗೂ ಅಂಚೆ ವೆಚ್ಚ ಅತಿಯಾಗಿ ಹೆಚ್ಚಾದ್ದರಿಂದ ಪ್ರವೇಶಾರ್ಜಿಪೂರ್ವದ

ಅರ್ಜಿಯೊಂದನ್ನು ನಿಶ್ಚಿತವಾದ ನಮೂನೆಯಲ್ಲಿ ಕಳಿಸಬೇಕಾಗುತ್ತದೆ. ಅದರಲ್ಲಿಯ (PREAPPLICATION) ವಿವರಗಳು ಸಮಾಧಾನಕರವಾಗಿದ್ದರೆ ಅರ್ಜಿ ಫಾರ್ಮನ್ನು ಮತ್ತು ಅಗತ್ಯವಿದ್ದ ಮಾಹಿತಿಯನ್ನು ಕಳಿಸಿ ಕೊಡುತ್ತಾರೆ. ಆರ್ಥಿಕ ಸಹಾಯಕ್ಕಾಗಿ ಅವಕಾಶ ವಿದ್ದರೆ ಅದಕ್ಕೆ ಸಂಬಂಧಿಸಿದ ಫಾರ್ಮನ್ನು ಕಳಿಸಿಕೊಡುತ್ತಾರೆ. ಜೊತೆಗೆ ನಿಗದಿಪಡಿಸಿದ, ಕಲಿಸಿದ ಪ್ರಾಧ್ಯಾಪಕರಿಂದ ತುಂಬಬೇಕಾದ, ಸಾಮಾನ್ಯವಾಗಿ ಮೂರು ಶಿಫಾರಸುಗಳನ್ನು ಕಳಿಸುತ್ತಾರೆ. ಎಲ್ಲ ವಿವರಗಳನ್ನು ತುಂಬಿ ಜೊತೆಗೆ ಡಾಲರ್ ರೂಪದ ಡಿ.ಡಿ.ಯನ್ನು ಕಳಿಸಬೇಕಾಗುತ್ತದೆ. ಅರ್ಜಿ ಸುಮಾರಾಗಿ ಮೂವತ್ತು, ನಲವತ್ತು, ಐವತ್ತು, ಅರುವತ್ತು ಡಾಲರುಗಳಷ್ಟಿರುತ್ತದೆ. ಸಮ ಮೊತ್ತದ ರೂಪಾಯಿಗಳನ್ನು ಕೊಟ್ಟು ಬ್ಯಾಂಕ್‌ನಲ್ಲಿ ಡಾಲರ್ ಡಿಮಾಂಡ್ ಡ್ರಾಫ್ಟ್ ಪಡೆದು ಪ್ರವೇಶಾರ್ಜಿಯ ಜೊತೆಗೆ ಕಳಿಸಬೇಕಾಗುತ್ತದೆ. ವಿದ್ಯಾರ್ಥಿಯು ಓದಿದ ಸಂಸ್ಥೆಯವರು ವಾರ್ಷಿಕ ಮಾರ್ಕ್ಸ್‌ಕಾರ್ಡನ್ನು ಸೀಲು ಮಾಡಿದ ಲಕೋಟೆಯಲ್ಲಿ ಕಳಿಸಬೇಕಾಗುತ್ತದೆ. ಎಷ್ಟೋ ವಿಶ್ವವಿದ್ಯಾಲಯಗಳು ಅಟೆಸ್ಟ್ (ATTEST) ಮಾಡಿದ ಮಾರ್ಕ್ಸ್‌ಕಾರ್ಡ್‌ನ್ನು ಸಹ ಸ್ವೀಕರಿಸುತ್ತವೆ. ಅಲ್ಲಿ ಪರೀಕ್ಷೆಗಳಲ್ಲಿ ಗ್ರೇಡ್‌ಗಳನ್ನು ಕೊಟ್ಟರೆ ಇಲ್ಲಿ ಶೇಕಡವಾರು ಅಂಕಗಳನ್ನು ಕೊಡುತ್ತಾರೆ. ರೂಪಾಂತರ ಅಸಾಧ್ಯವಾಗಿರುತ್ತದೆ. ಇದನ್ನು ಸಾಧ್ಯಗೊಳಿಸಲು ಸಹ ಅಮೆರಿಕಾದಲ್ಲಿ ಸಂಸ್ಥೆಗಳಿದ್ದು ಆ ಕೆಲಸಕ್ಕೆ ಸಂಭಾವನೆಯೆಂದು ಸುಮಾರು ಅರುವತ್ತು ಡಾಲರುಗಳಷ್ಟನ್ನು ತೆರಬೇಕಾಗುತ್ತದೆ. ಶೇಕಡಾವಾರು ಅಂಕಗಳನ್ನು ಪರಿಗಣಿಸುವ ವಿಶ್ವವಿದ್ಯಾಲಯಗಳೂ ಇವೆ. ಯಾವ ಒಂದು ಪ್ರಮಾಣೀಕೃತ ದಾಖಲೆ ಇಲ್ಲದೆ ಹೋದರೆ ಪ್ರವೇಶಾರ್ಜಿ ಅಪೂರ್ಣವೆನಿಸಿ ಅದನ್ನು ತಿರಸ್ಕರಿಸುವದೂ ಸಾಧ್ಯವಿದೆ. ಸ್ವೀಕಾರಾರ್ಹವೆನಿಸಿದರೆ, ಅದನ್ನು ತಿಳಿಸಲಾಗುವುದು. ವಿದ್ಯಾರ್ಥಿಯೇ ಖರ್ಚನ್ನು ವಹಿಸುವದಾದರೆ, ಅಷ್ಟೊಂದು ಹಣ ಅವನ ಅಕೌಂಟ್‌ನಲ್ಲಿದೆ ಎಂದು ಬ್ಯಾಂಕ್ ಮೆನೇಜರ್ ಕಡೆಯಿಂದ ಪ್ರಮಾಣಪತ್ರ ಬೇಕಾಗುತ್ತದೆ. ಸಾಕಷ್ಟು ದುಡ್ಡು ವಿದ್ಯಾರ್ಥಿಯ ಹತ್ತಿರ ಇದೆ ಎಂದ ಮಾತ್ರಕ್ಕೆ ಅವನನ್ನು ಆರ್ಥಿಕ ಸಹಾಯಕ್ಕೆ ಗಣನೆಗೆ ತೆಗೆದುಕೊಳ್ಳುವದಿಲ್ಲವೆನ್ನುವದು ಸರಿಯಲ್ಲ. ಇವು ಎರಡೂ ಪ್ರತ್ಯೇಕ ವಿಷಯಗಳಾಗಿವೆ. ವಿದ್ಯಾರ್ಥಿಯ ಮುಂದಿನ ಕ್ರಮವೆಂದರೆ 'ವಿಸಾ'ದ ಸಲುವಾಗಿ ಅರ್ಜಿ ಸಲ್ಲಿಸುವದು. ಅದು ಸಿಗಬಹುದು, ಸಿಗಲಿಕ್ಕಿಲ್ಲ; ಇಂದಿನ ಪರಿಸ್ಥಿತಿಯಲ್ಲಿ ಎರಡೂ ಸಾಧ್ಯ. ಸಿಗದಿದ್ದರೆ ವಿವರಣೆ ಕೇಳಲು ಅವಕಾಶವಿಲ್ಲ.

***ಭಾರತೀಯ ತಿಂಡಿ - ತೀರ್ಥಗಳು, ಅಡಿಗೆ ಪದಾರ್ಥಗಳು ಅಮೆರಿಕೆಯಲ್ಲಿ ಸಿಗುತ್ತವೆಯೇ ಎಂಬ ಅನುಮಾನ ಅನೇಕ ವಿದ್ಯಾರ್ಥಿಗಳಲ್ಲಿರುತ್ತದೆ. ವಾಸ್ತವಾಂಶವೆಂದರೆ ಇಲ್ಲಿಗಿಂತ ಅಲ್ಲಿಯೇ ಒಳ್ಳೆಯ ಶಾಕಾಹಾರಿ ಜೀವನ ನಡೆಸಬಹುದು.***

**ಹೊರಡುವ ಸಿದ್ಧತೆ**

ವಿಶ್ವವಿದ್ಯಾಲಯವಿರುವ ಪ್ರದೇಶದಲ್ಲಿ ಹಿಮ ಬೀಳುತ್ತಿದ್ದರೆ ಉಣ್ಣೆಬಟ್ಟೆಯನ್ನು ತೆಗೆದುಕೊಂಡು ಹೋಗಬೇಕಾಗುತ್ತದೆ. ಜಾರಿ ಬೀಳದಂತೆ ಓಡಾಡಲು ವಿಶೇಷವಾದ 'ಶೂ'ಗಳನ್ನು ಹಾಕಿಕೊಳ್ಳಬೇಕಾಗುತ್ತದೆ. ಮನೆಯ ಒಳಗಡೆ ಬೆಚ್ಚನೆಯ ಹವೆ ಇರುವದರಿಂದ ಹೊರಗೆ ಹಿಮ ಬೀಳುತ್ತಿದ್ದರೂ ಒಳಗೆ ಕೂತು ಐಸ್‌ಕ್ರೀಂನಂಥ ತಣ್ಣನೆಯದನ್ನು ತಿನ್ನುತ್ತಿರಬಹುದು. ಭಾರತೀಯ ತಿಂಡಿ-ತೀರ್ಥಗಳು, ಅಡಿಗೆ ಪದಾರ್ಥಗಳು ಅಲ್ಲಿ ಸಿಗುತ್ತವೆಯೇ ಎಂಬ ಪ್ರಶ್ನೆ ಕೇಳುವ ವಿದ್ಯಾರ್ಥಿಗಳೂ ಅನೇಕರು. ಇಲ್ಲಿಗಿಂತ ಅಲ್ಲಿಯೇ, ಎಂದರೆ ಅಮೆರಿಕದಲ್ಲಿ, ಒಳ್ಳೆಯ ಶಾಕಾಹಾರಿ ಜೀವನವನ್ನು ನಡೆಸಬಹುದು. ಮಾಂಸಾಹಾರಿಯಾಗುವ ಅಗತ್ಯ ಎಂದೂ ಎದುರಾಗುವುದಿಲ್ಲ. ಜೊತೆಗೆ ಆಲ್ಕೋಹಾಲ್‌ನಂಥ ಪಾನೀಯಗಳನ್ನು ಸೇವಿಸುವ ಸಂದರ್ಭ ಸಹ ಎಂದೂ ಬರುವದಿಲ್ಲ. ಅಮೆರಿಕನ್ನರು ಬಲವಂತವಾಗಿ ಏನನ್ನೂ ಮಾಡಿಸುವದಿಲ್ಲ. ಭಾರತೀಯರ ಜೀವನದ ರೀತಿಯನ್ನು ಮನಸಾ ಪುರಸ್ಕರಿಸುತ್ತಾರೆ. ಪ್ರಾಣಿಗಳಿಂದ ಬಂದ ಹಾಲು, ಮೊಸರನ್ನು ಸಹ ಕೊಡದಷ್ಟರ ಮಟ್ಟಿಗೆ ಶಾಕಾಹಾರವನ್ನು ಪ್ರೋತ್ಸಾಹಿಸುತ್ತಾರೆ.

ಅಮೆರಿಕದಲ್ಲಿ ಕಾಯಕ-ಸಂಸ್ಕೃತಿ (WORK CULTURE) ಅಸಾಧಾರಣ ಮಟ್ಟದ್ದಿದೆ. ಅಲ್ಲಿ ಮೇಸ್ತ್ರಿಗಳಿರುವದಿಲ್ಲ, ಕೆಲಸಗಾರರ ಮೇಲ್ವಿಚಾರಣೆಗೆಂದೇ ಯಾರೂ ಇರುವದಿಲ್ಲ. ಕರ್ತವ್ಯ ಜವಾಬ್ದಾರಿಗಳು ಪ್ರತಿಯೊಬ್ಬನ ಜೀವನದಲ್ಲಿ ಬಹಳ ಮಹತ್ವದ ಪಾತ್ರವನ್ನು ವಹಿಸುತ್ತವೆ. ಹಾಗೆ ನೋಡಿದರೆ ಅಲ್ಲಿ ಅವುಗಳೇ ದಾರಿದೀಪಗಳಾಗಿ ಮುನ್ನಡೆಸುತ್ತವೆ.

***ಅಮೆರಿಕದಲ್ಲಿ ಕಾಯಕ ಸಂಸ್ಕೃತಿ (WORK CULTURE) ಅಸಾಧಾರಣ ಮಟ್ಟದ್ದಿದೆ. ಅಲ್ಲಿ ಮೇಸ್ತ್ರಿಗಳಿರುವದಿಲ್ಲ, ಕೆಲಸಗಾರರ ಮೇಲ್ವಿಚಾರಣೆಗೆಂದೇ ಯಾರೂ ಇರುವದಿಲ್ಲ. ಕರ್ತವ್ಯ ಜವಾಬ್ದಾರಿಗಳು ಪ್ರತಿಯೊಬ್ಬನ ಜೀವನದಲ್ಲಿ ಬಹಳ ಮಹತ್ವದ ಪಾತ್ರವನ್ನು ವಹಿಸುತ್ತವೆ. ಹಾಗೆ ನೋಡಿದರೆ ಅಲ್ಲಿ ಅವುಗಳೇ ದಾರಿದೀಪಗಳಾಗಿ ಮುನ್ನಡೆಸುತ್ತವೆ.***

ಭಾರತೀಯ ವಿದ್ಯಾರ್ಥಿ ಬಹಳ ಬುದ್ಧಿವಂತನಿದ್ದರೂ ಸಹ ಅದರ ಸದುಪಯೋಗ ಸತತ ಪರಿಶ್ರಮದಿಂದಲೇ ಸಾಧ್ಯವಾಗುವದು. ಹರಟೆ ಹೊಡೆಯುವಲ್ಲಿ, ಯಾವ ಕೆಲಸಕ್ಕೂ ಬಾರದ ಮಾತುಗಳನ್ನಾಡಿ ಕಾಲಹರಣ ಮಾಡುವಲ್ಲಿ, ಮನರಂಜನೆಯಲ್ಲಿ ನಾವು ಕಳೆದಷ್ಟು ಕಾಲವನ್ನು ಬಹುಶಃ ಯಾರೂ ಕಳೆಯುವುದಿಲ್ಲ. ನಾವು ಜಾಣತನದಿಂದ ಹಣವನ್ನು ತೊಡಗಿಸುವಂತೆ, ಶ್ರಮ, ಸಮಯ, ಬುದ್ಧಿಶಕ್ತಿಗಳೆಲ್ಲವನ್ನೂ ತೊಡಗಿಸಬೇಕಾಗುತ್ತದೆ. ಶಿಕ್ಷಣ ಮುಗಿಸಿ ಕೆಲಸಕ್ಕೆ ಸೇರಿದಾಗ ನಮಗೆ ಬರುವ ಲಾಭಗಳು ಕಣ್ಣಿಗೆ ಕಾಣಿಸುತ್ತವೆ. ಇವೆಲ್ಲ ಒಳ್ಳೆಯ ಗುಣಗಳಿಂದ ಬರಬೇಕಾದ ಸುಖ-ಸಂತೋಷಗಳು ಉಪಮಾತೀತವಾಗಿವೆ. ಅನುಭವಿಸಿಯೇ ನೋಡಬೇಕು.

ಅಮೆರಿಕಾದಲ್ಲಿ ಸಾವಿರಾರು ವಿಜ್ಞಾನಿಗಳು ಅಖಂಡ ಸಂಶೋಧನೆಯಲ್ಲಿ ನಿರತರಾಗಿರುವುದರಿಂದಲೆ ಆ ದೇಶದಲ್ಲಿ ದೊಡ್ಡ ಸಂಖ್ಯೆಯಲ್ಲಿ 'ನೊಬೆಲ್ ಪಾರಿತೋಷಕ ವಿಜೇತರು' ಸಿಗುತ್ತಾರೆ. ಭಾರತದಲ್ಲಿ ನಾಲ್ಕು ಪಟ್ಟು ಹೆಚ್ಚು ಜನಸಂಖ್ಯೆಯಿದ್ದರೂ ಸಹ ವಿಜ್ಞಾನ ಕ್ಷೇತ್ರದಲ್ಲಿ ನೊಬೆಲ್ ಪಾರಿತೋಷಕ ವಿಜೇತರು ಒಬ್ಬರೇ ಒಬ್ಬರು. ಅವರೇ ಸರ್ ಸಿ.ವಿ.ರಾಮನ್. ಇದನ್ನು ತಿಳಿದಾಗ ನಾವು ತಲುಪಬೇಕಾದ ಗುರಿ ಕಣ್ಣಿಗೆ ಕಾಣಿಸದಷ್ಟು ದೂರವಿದೆ ಎಂಬುದರ ಅರಿವಾಗುವದು. ಇಡೀ ದೇಶವೇ ಎಚ್ಚರಗೊಂಡು ಮುನ್ನಡೆದಾಗ ಸ್ಫೂರ್ತಿಯ ಸೆಲೆ ಗೋಚರವಾದಾಗ ಪ್ರಗತಿ ಸಹ ಸಾಧ್ಯವಾಗುತ್ತದೆ. ನೊಬೆಲ್‌ಪಾರಿತೋಷಕ ವಿಜೇತರೂ ಅಸ್ತಿತ್ವದಲ್ಲಿ ಬರುತ್ತಾರೆ!

# ಶ್ರೇಷ್ಠ ನ್ಯಾಯಾಲಯ ಪೀಠ

# ತಾಟಿಗೆ ಬಂದ ತುತ್ತು ತುಟಿಗೆ ಬರಲಿಲ್ಲ!

ನಮ್ಮ ಸಂವಿಧಾನ ಪಿತೃಗಳು ಕಂಡ ಕನಸು ರಾಮರಾಜ್ಯದ್ದು ತಾನೇ? ರಾಮರಾಜ್ಯದಲ್ಲಿ ನಾಯಿಗೂ ನ್ಯಾಯದ ಗಂಟೆಯ ಹಗ್ಗ ಎಳೆದು ದೂರು ಹೇಳಿ ನ್ಯಾಯ ದೊರಕಿಸುವ ಅವಕಾಶ ಇತ್ತಂತೆ. ದ್ವಾಪರ, ತ್ರೇತಾಯುಗಗಳ ಪ್ರಸ್ತಾಪವೇಕೆ? ಮೊಗಲ್ ದೊರೆ ಜಹಾಂಗೀರ್ ನ್ಯಾಯದ ಗಂಟೆ ಕಟ್ಟಿಸಿದ್ದನಲ್ಲ. ಸ್ಥಳೀಯವಾಗಿ, ಸುಲಭವಾಗಿ, ತ್ವರಿತವಾಗಿ ಪ್ರಜೆಗಳಿಗೆ ನ್ಯಾಯ ಲಭ್ಯಗೊಳಿಸುವದು ದೊರೆಯ ಆದ್ಯ ಕರ್ತವ್ಯಗಳಲ್ಲೊಂದೆಂದು ಆತ ಸರಿಯಾಗಿಯೇ ಗ್ರಹಿಸಿದ್ದ.

ಈ ಹಿನ್ನೆಲೆಯಲ್ಲಿ ವಿಶ್ಲೇಷಿಸಿದಾಗ ಉತ್ತರ ಕರ್ನಾಟಕದಲ್ಲಿ ಹೈಕೋರ್ಟ್ ಪೀಠ ಸ್ಥಾಪನೆಯ ಅಗತ್ಯ ಹಾಗೂ ಮಹತ್ವ ಮನವರಿಕೆಯಾಗುತ್ತದೆ. ಕರ್ನಾಟಕ ರಚನೆಗಿಂತಲೂ ಮೊದಲೇ ಕೆ. ನಾರಾಯಣ ಸ್ವಾಮಿಯವರ ಅಧ್ಯಕ್ಷತೆಯಲ್ಲಿನ ಸಮಿತಿ ಹುಬ್ಬಳ್ಳಿಯಲ್ಲಿ ಶ್ರೇಷ್ಠ ನ್ಯಾಯಾಲಯದ ಪೀಠ ಸ್ಥಾಪಿಸಿ ಪ್ರಾದೇಶಿಕ ಅಸಮಾನತೆಯನ್ನು ಕಡಿಮೆ ಮಾಡಬಹುದು ಎಂದು ತಿಳಿಸಿತ್ತು.

ಮಹಾನಗರದ ಕೋತಂಬ್ರಿ ಕಾನೂನು ಮಹಾವಿದ್ಯಾಲಯದ ಪ್ರಾಚಾರ್ಯ **ಡಿ.ಎಮ್. ಬಿರಾದಾರ್**‌ರನ್ನು ಈ ಕುರಿತು ಮಾತನಾಡಿಸಿದಾಗ:

"ಕರ್ನಾಟಕ ಸರಕಾರ ವಿಕೇಂದ್ರೀಕರಣ ನೀತಿಯಲ್ಲಿ ವಿಶ್ವಾಸವಿರಿಸಿದೆ. ಅದರ ಫಲವಾಗಿ ಜಿಲ್ಲೆ, ತಾಲೂಕು ಹಾಗೂ ಗ್ರಾಮಮಟ್ಟದಲ್ಲಿ ಪಂಚಾಯತಿಗಳು ಅಸ್ತಿತ್ವದಲ್ಲಿ ಬಂದಿವೆ. ಗ್ರಾಮ ಪಂಚಾಯತಿಗಳಿಗೂ ಸಹ ನ್ಯಾಯದಾನದ ಅಧಿಕಾರ ನೀಡಲಾಗಿದೆ. ಇದೇ ತತ್ವ ಶ್ರೇಷ್ಠ ನ್ಯಾಯಾಲಯಗಳ ಕರ್ತವ್ಯಗಳ ವಿಕೇಂದ್ರೀಕರಣದಲ್ಲೂ ಅಡಗಿದೆ" ಎಂದರು.

ಕರ್ನಾಟಕದ ಕಾನೂನು ಸಚಿವ **ಎಂ.ಸಿ. ನಾಣಯ್ಯ**ನವರು ಸಹ ಪ್ರತಿಯೊಬ್ಬನ ಮನೆ ಬಾಗಿಲಿಗೆ ನ್ಯಾಯದಾನ ಮಾಡುವ ವ್ಯವಸ್ಥೆ ಬರಬೇಕು ಎಂಬ ಅಭಿಪ್ರಾಯದವರು.

ವಿಧಾನ ಪರಿಷತ್ ಪ್ರತಿಪಕ್ಷದ ನಾಯಕ **ಎಚ್.ಕೆ.ಪಾಟೀಲ**ರು ತಮ್ಮ ಇತ್ತೀಚಿನ ಬಹು ಚರ್ಚಿತ ಪುಸ್ತಿಕೆಯಲ್ಲಿ ('ಚೆಲುವ ಕನ್ನಡ ನಾಡು') ಉತ್ತರ ಕರ್ನಾಟಕವು ಅಭಿವೃದ್ಧಿ ವಂಚಿತವಾಗಿರುವ ಕುರಿತು ನಿರಾಶೆ ಅಸಮಾಧಾನಗಳ ನಿಟ್ಟುಸಿರುಗರೆದಿದ್ದಾರೆ. ರಾಜ್ಯದ ಅರ್ಧಕ್ಕಿಂತಲೂ ಹೆಚ್ಚು ವಿಸ್ತೀರ್ಣ ಹೊಂದಿದ ಉತ್ತರ ಕರ್ನಾಟಕಕ್ಕೆ ಜಿಲ್ಲೆ, ಉಪವಿಭಾಗ, ತಾಲೂಕುಗಳ ಸಂಖ್ಯೆಯಲ್ಲಿ ಅನ್ಯಾಯವಾಗಿರುವದನ್ನು ಅವರು ಸ್ಪಷ್ಟಗೊಳಿಸಿದ್ದಾರೆ. ಈ ಭಾಗದ ತಲಾ ವಾರ್ಷಿಕ ಆದಾಯವೂ ಸಹ ಸುಮಾರು ರೂ.೬,೦೦೦; ಸಾಕ್ಷರತೆಯ ಶೇಕಡಾವಾರು ೪೮. ತುತ್ತಿನ ಚೀಲ ತುಂಬುವದೇ ಬಹುಸಂಖ್ಯೆ ಅನಕ್ಷರಸ್ಥ ಬಡವರಿಗೆ ಅಸಾಧ್ಯವಾಗಿರುವಾಗ ನ್ಯಾಯಕ್ಕಾಗಿ ಹೋರಾಡುವ ಪ್ರಸಂಗ ಬಂದರೆ ಶ್ರೇಷ್ಠ ನ್ಯಾಯಾಲಯವನ್ನು ಅರಸಿಕೊಂಡು ರಾಜ್ಯದ ದಕ್ಷಿಣ ತುದಿಗೆ ಹೋದಾರೇ? ಅದೂ ಸಹ, ನ್ಯಾಯಾಂಗ ಹೋರಾಟದಲ್ಲಿಯ ವ್ಯಂಗ್ಯ "ಗೆದ್ದವ ಸೋತ; ಸೋತವ ಸತ್ತ" ಎಂಬುದು ಗೊತ್ತಿದ್ದೂ!

ಮಹಾನಗರದ ಸಕ್ರಿ ಕಾನೂನು ಮಹಾವಿದ್ಯಾಲಯದ ಪ್ರಾಚಾರ್ಯ **ಆರ್.ಎಸ್.ಹೆಗಡೆ** ಹೇಳುತ್ತಾರೆ:

"ದಕ್ಷಿಣದ ತುದಿಗಿರುವ ಬೆಂಗಳೂರಿಗೆ ನ್ಯಾಯಕ್ಕಾಗಿ ಅಲೆಯುವದು ಕಾಲ ಹರಣ; ಹಣದ ಪೋಲು; ಶಕ್ತಿ ಹ್ರಾಸ. ಅಲ್ಲದೆ ಇಲ್ಲಿ ಶ್ರೇಷ್ಠ ನ್ಯಾಯಾಲಯದ ಪೀಠ ನೆಲೆಗೊಂಡರೆ ಸ್ಥಳೀಯ ಪ್ರತಿಭಾವಂತ ನ್ಯಾಯವಾದಿಗಳಿಗೆ ನ್ಯಾಯಾಧೀಶರಾಗುವ ಅವಕಾಶ ಹೆಚ್ಚುತ್ತವೆ. ನ್ಯಾಯಾಧೀಶರಾಗಿ ಆಯ್ಕೆಯಾಗಲು ಶ್ರೇಷ್ಠ ನ್ಯಾಯಾಲಯದ ನ್ಯಾಯವಾದಿಗಳಾಗಿ ಹತ್ತು ವರ್ಷದ ವೃತ್ತಿ

**ಮಹಾನಗರದ ಗಣ್ಯರ, ಬುದ್ಧಿಜೀವಿಗಳ**
**ಹಾಗೂ ಜನ-ಪ್ರತಿನಿಧಿಗಳ ಸಭೆ**
**ಹುಬ್ಬಳ್ಳಿಯಲ್ಲಿ ಸಮಾವೇಶಗೊಂಡು**
**ಶಾಸಕರ ರಾಜೀನಾಮೆ, ಪ್ರತ್ಯೇಕ ಉತ್ತರ**
**ಕರ್ನಾಟಕ ರಾಜ್ಯ ರಚನೆಯ**
**ಎಚ್ಚರಿಕೆಗಳಂಥ ಅಬ್ಬರದ**
**ಘೋಷಣೆಗಳೊಡನೆ ಕೊನೆಗೊಂಡಿತು.**
**ಕ್ರಿಯಾಸಮಿತಿಯ ನೇತೃತ್ವ ವಹಿಸಿದ್ದ**
**ಹಿರಿಯ ಪತ್ರಕರ್ತ ಡಾ. ಪಾಟೀಲ**
**ಪುಟ್ಟಪ್ಪನವರು ಸಂಸದರು, ಶಾಸಕರು**
**ಕಾರ್ಯ ನಿರ್ವಹಿಸದ ಪರಿಸ್ಥಿತಿ**
**ನಿರ್ಮಿಸಲು ಕರೆಕೊಟ್ಟರು.**
**ಆದರೆ ಆದದ್ದೇನು?**
**ಗುಡ್ಡ ತೋಡಿಯಾಯಿತು.**
**ಇಲಿ ಮಾತ್ರ ಹೊರಬರಲಿಲ್ಲ!**

**○ ಡಾ. ಟಿ.ಕೆ. ತಾಪಸ್**
ನೆರವು: **ಸತೀಶ್ ನೂಲ್ವಿ**

ಅನುಭವದ ಅರ್ಹತೆಯ ಷರತ್ತನ್ನೂ ಅವರು ಸುಲಭವಾಗಿ ಪೂರೈಸಬಹುದು''.

ಕರ್ನಾಟಕ ಸರಕಾರದ ಪರಿಸರ ಹಾಗೂ ತಂತ್ರಜ್ಞಾನ ಸಚಿವ ಬಸವರಾಜ ಶಿವಣ್ಣನವರ ಇದೇ ರೀತಿ ಭಾವಿಸುತ್ತಿದ್ದುದೇ-ಉತ್ತರ ಕರ್ನಾಟಕದಲ್ಲಿ ಹೈಕೋರ್ಟ್ ಪೀಠ ಸ್ಥಾಪನೆ ಅತ್ಯಂತ ಯೋಗ್ಯ ಹಾಗೂ ನ್ಯಾಯಯುತ-ಎಂದು ಅವರು ಹೇಳಲು ಕಾರಣ.

ರಾಜ್ಯ ಶ್ರೇಷ್ಠ ನ್ಯಾಯಾಲಯಗಳ ಪೀಠಗಳನ್ನು ಆಯಾ ರಾಜ್ಯಗಳ ಪ್ರಮುಖ ಸ್ಥಳಗಳಲ್ಲಿ ಸ್ಥಾಪಿಸುವ ಚಿಂತನೆ ಕರ್ನಾಟಕದ್ದು ಮಾತ್ರವಲ್ಲ; ಮೊದಲನೆಯದಂತೂ ಅಲ್ಲವೇ ಅಲ್ಲ. ಮಹಾರಾಷ್ಟ್ರ ಶ್ರೇಷ್ಠ ನ್ಯಾಯಾಲಯದ ಪೀಠಗಳು ಈಗಾಗಲೇ ನಾಗಪೂರ ಹಾಗೂ ಔರಂಗಬಾದಗಳಲ್ಲಿ, ಉತ್ತರ ಪ್ರದೇಶ ಶ್ರೇಷ್ಠ ನ್ಯಾಯಾಲಯದ ಪೀಠ ಲಕ್ನೋನಲ್ಲೂ ಕಾರ್ಯನಿರ್ವಹಿಸುತ್ತಿವೆ. ಇದೇ ಚಿಂತನೆಯನ್ನು ವಿಸ್ತರಿಸಿ, ಸರ್ವೋಚ್ಚ ನ್ಯಾಯಾಲಯದ ಪೀಠಗಳನ್ನು ಭಾರತದ ಇತರೆಡೆಗೆ ಏಕೆ ಸ್ಥಾಪಿಸಬಾರದು ಎಂದು ಕೇಳಲಾಗುತ್ತಿದೆ. ಈ ಅಭಿಪ್ರಾಯ ತಾರ್ಕಿಕವೂ, ತಥ್ಯಪೂರ್ಣವೂ ಆಗಿದೆ. ಆದುದರಿಂದಲೇ ಭಾರತೀಯ ಜನತಾ ಪಕ್ಷದ ಶಾಸಕಿ ಪ್ರಮೀಳಾ ನೇಸರಗಿಯವರು ದಕ್ಷಿಣ ಭಾರತದ ರಾಜ್ಯಗಳ ಉಪಯೋಗಕ್ಕಾಗಿ ಬೆಂಗಳೂರಿನಲ್ಲಿ ಸರ್ವೋಚ್ಚ ನ್ಯಾಯಾಲಯದ ಪೀಠ ಸ್ಥಾಪನೆಗಾಗಿ ರಾಜ್ಯ ವಿಧಾನ ಸಭೆಯಲ್ಲಿ ಆಗ್ರಹ ಪಡಿಸಿದಾಗ, ಎಂ.ಸಿ.ನಾಣಯ್ಯನವರು ''ಕೇಂದ್ರವನ್ನು ಒತ್ತಾಯಿಸುತ್ತೇವೆ'' ಎಂದರು. ಕಳೆದ ಅಕ್ಟೋಬರ್‌ನಲ್ಲಿ ಕೇರಳದಲ್ಲಿ ದಕ್ಷಿಣ ಭಾರತ ನ್ಯಾಯವಾದಿಗಳ ಒಂದು ದಿನದ ಸಮಾವೇಶ ಜರುಗಿತು. ಪ್ರಮುಖ ಭಾಷಣಕಾರರಾದ ಸರ್ವೋಚ್ಚ ನ್ಯಾಯಾಲಯದ ಹಿಂದಿನ ನ್ಯಾಯಮೂರ್ತಿ **ವಿ.ಆರ್.ಕೃಷ್ಣ ಅಯ್ಯರ್**ರವರು,

''ಸಾಮಾನ್ಯ ಜನತೆಗೆ ತ್ವರಿತಗತಿಯ ನ್ಯಾಯ ವಿತರಣೆಯ ದೃಷ್ಟಿಯಿಂದ ನ್ಯಾಯಾಂಗದ ವಿಕೇಂದ್ರೀಕರಣ ಅಗತ್ಯ''ಎಂದು ಹೇಳಿದರು. ಕಳೆದ ಕರ್ನಾಟಕ ರಾಜ್ಯೋತ್ಸವದಂದು (೧೯೯೬) ಕರ್ನಾಟಕ ಹಾಗೂ ಕೇರಳ ಬಾರ್ ಕೌನ್ಸಿಲ್‌ಗಳ ಘಟಕಗಳು ಬೆಂಗಳೂರಿನಲ್ಲಿ, ''ಎಲ್ಲರಿಗೂ ಸಮಾನ ನ್ಯಾಯ ಒದಗಿಸುವ ಹಿನ್ನೆಲೆಯಲ್ಲಿ ದಕ್ಷಿಣ ಭಾರತದಲ್ಲಿ ಸುಪ್ರೀಮ್ ಕೋರ್ಟ್ ಪೀಠವೊಂದನ್ನು ಸ್ಥಾಪಿಸಲು ಅನುಮತಿ ನೀಡಬೇಕು''ಎಂಬ ಬೇಡಿಕೆ ಮಂಡಿಸಿದವು.

ಅಂತೂ ಉತ್ತರ ಕರ್ನಾಟಕಕ್ಕೆ ಶ್ರೇಷ್ಠ ನ್ಯಾಯಾಲಯದ ಕನಿಷ್ಠ ಒಂದು ಪೀಠವನ್ನಾದರೂ ಹೊಂದುವ ಅರ್ಹತೆ ವಿವಾದಾತೀತವೆಂದಾಯಿತು. ಹಾಗಾದರೆ ಈ ಪೀಠ ಎಲ್ಲಿ ಸ್ಥಾಪನೆಯಾಗಬೇಕು? ಈ ಪ್ರಶ್ನೆ ಪೀಠಸ್ಥಾಪನೆಯ ವಿಷಯದಲ್ಲಿ ಪ್ರಮುಖವಾದುದು. ಸಮಸ್ಯೆ ಇತ್ಯರ್ಥಗೊಳ್ಳದಿರಲು ಒಮ್ಮತದ ಸ್ಥಳ ನಿರ್ಧಾರದ ಅಭಾವವೂ ಕಾರಣ. ಪೀಠ ಸ್ಥಾಪಿಸಬೇಕೆನ್ನುವ ಆಗ್ರಹಕ್ಕೆ ತಣ್ಣೀರು ಎರಚಲು ಬಯಸುವವರಿಗೆ ಈ ನೆಪ ಸಾಕು.

**ರಾಜ್ಯ ಶ್ರೇಷ್ಠ ನ್ಯಾಯಾಲಯಗಳ ಪೀಠಗಳನ್ನು ಆಯಾ ರಾಜ್ಯಗಳ ಪ್ರಮುಖ ಸ್ಥಳಗಳಲ್ಲಿ ಸ್ಥಾಪಿಸುವ ಚಿಂತನೆ ಕರ್ನಾಟಕದ್ದು ಮಾತ್ರವಲ್ಲ; ಮೊದಲನೆಯದಂತೂ ಅಲ್ಲವೇ ಅಲ್ಲ.**

ಶ್ರೇಷ್ಠ ನ್ಯಾಯಾಲಯದ ಪೀಠ ಸ್ಥಾಪಿಸಲು ರಾಜ್ಯ ಸರಕಾರದ ತಾತ್ವಿಕ ಸಮ್ಮತಿ ತಿಳಿದ ತಕ್ಷಣ ಉತ್ತರ ಕರ್ನಾಟಕದ ವಿವಿಧ ಭಾಗಗಳಿಂದ ಬೇಡಿಕೆ ಪ್ರಾರಂಭ.

ಬೆಳಗಾವಿಯ ನ್ಯಾಯವಾದಿಗಳ ಸಂಘ ಬೆಳಗಾವಿಯಲ್ಲಿ ಪೀಠಕ್ಕಾಗಿ ಜುಲೈ ೧೯೯೬ ರಿಂದಲೇ ಆಗ್ರಹಿಸುತ್ತಲಿದೆ. ನಾಟಕ ಅಕಾಡೆಮಿಯ ಹಿಂದಿನ ಅಧ್ಯಕ್ಷ **ಚಿಂದೋಡಿ ಲೀಲಾ**ರವರ ಅಭಿಪ್ರಾಯದಲ್ಲಿ

''ಪೀಠ ಸ್ಥಾಪನೆ ಬೆಳಗಾವಿಯಲ್ಲಾದರೆ ಕನ್ನಡಿಗರ ಸಂಖ್ಯೆ ಹೆಚ್ಚಿ ಗಡಿ ಸಮಸ್ಯೆ ತಂತಾನೆ ಬಗೆಹರಿಯುತ್ತದೆ; ಕನ್ನಡ ವಾತಾವರಣ ನಿರ್ಮಾಣಗೊಳ್ಳುತ್ತದೆ; ಉದ್ಯೋಗಾವಕಾಶಗಳೂ ಹೆಚ್ಚುತ್ತವೆ''.

ಕೆಲ ಕಾಂಗ್ರೆಸ್ ಹಾಗೂ ಬಹುಜನ ಸಮಾಜ ಪಕ್ಷದ ಶಾಸಕರು ಹೈದರಾಬಾದ ಕರ್ನಾಟಕದ ಕೇಂದ್ರ ಸ್ಥಾನ-ಕಲಬುರ್ಗಿದಲ್ಲಿ ಪೀಠಸ್ಥಾಪನೆ ಆಗಬೇಕೆನ್ನುತ್ತಿದ್ದಾರೆ. ಭಾರತೀಯ ಜನತಾ ಪಕ್ಷದ ಶಾಸಕ **ಡಾ. ಎಂ.ಆರ್.ತಂಗಾ,**

''ಕಲಬುರ್ಗಿಯಿಂದ ೮೦೦ಕಿಮೀ ದೂರದ ಬೆಂಗಳೂರಿಗೆ ಹೋಗುವದು ಹುಬ್ಬಳ್ಳಿಗೆ ಹೋಗುವದಕ್ಕಿಂತಲೂ ಕಕ್ಷಿದಾರರಿಗೆ ಸುಲಭ. ಫಜಲ್ ಅಲಿ ಆಯೋಗ ಕಲಬುರ್ಗಿಯಲ್ಲಿ ಪೀಠ ಸ್ಥಾಪಿಸಲು ಶಿಫಾರಸು ಮಾಡಿದೆ'' ಎಂದು ಹೇಳಿಕೆ ನೀಡಿದ್ದಾರೆ.

ಬಂಗಾರಪ್ಪನವರು ಮುಖ್ಯಮಂತ್ರಿಗಳಾಗಿದ್ದಾಗ ಕಲಬುರ್ಗಿಯಲ್ಲಿ ಪೀಠ ಸ್ಥಾಪಿಸುವ ಬಗ್ಗೆ ಸಚಿವ ಸಂಪುಟದ ನಿರ್ಧಾರ ಆಗಿತ್ತೆಂದೂ ತಿಳಿಸಲಾಗಿದೆ.

ಈ ಕತೆ ಇಷ್ಟಕ್ಕೇ ನಿಲ್ಲುವದಿಲ್ಲ. ವಿಭಾಗ ಕೇಂದ್ರಗಳಿಂದ ನಗರಗಳತ್ತ ಸಾಗುತ್ತದೆ.

ದಾವಣಗೆರೆ ನಗರ ಯುವ ಕಾಂಗ್ರೆಸ್ ಕಾರ್ಯದರ್ಶಿ **ಅಸ್ಲಾಂ ಖಾನ್**‌ರವರು ಭಾರತದ ಶ್ರೇಷ್ಠ ನ್ಯಾಯಾಲಯದ ನ್ಯಾಯಾಧೀಶರಿಗೆ ಪತ್ರ ಬರೆದು

''ರಾಜ್ಯದ ಮಧ್ಯವರ್ತಿ ಸ್ಥಳವಾದ ದಾವಣಗೆರೆಯಲ್ಲಿ ಶ್ರೇಷ್ಠ ನ್ಯಾಯಾಲಯದ ಪೀಠ ಸ್ಥಾಪಿಸಲು ಅನುಮತಿಸಿ ಸರ್ವರಿಗೂ ಅನುಕೂಲ ಕಲ್ಪಿಸಿ''ಎಂದು ವಿನಂತಿಸಿದ್ದಾರೆ.

ಸಂಸದ **ಬಿ.ಆರ್.ಪಾಟೀಲ್** (ಕನಮಡಿ)ರವರು

''ಸಾಕಷ್ಟು ಕಟ್ಟಡಗಳು ಲಭ್ಯವಿರುವ ಐತಿಹಾಸಿಕ ಸ್ಥಳ ಬಿಜಾಪುರದಲ್ಲಿ ಪೀಠ ಸ್ಥಾಪಿಸುವದು ಎಲ್ಲ ದೃಷ್ಟಿಯಿಂದಲೂ ಸೂಕ್ತ ಎಂದು ನ್ಯಾ.ಮೂ.ಜಸವಂತ್ ಸಿಂಗ್ ಆಯೋಗ ಶಿಫಾರಸು ಮಾಡಿದ್ದರಿಂದ ಆಯೋಗದ ಶಿಫಾರಸು ಅನುಷ್ಠಾನಗೊಳ್ಳಬೇಕು'' ಎಂದು ಆಗ್ರಹಪಡಿಸಿದ್ದಾರೆ.

ಲೋಕಶಕ್ತಿಯ ಶಾಸಕ **ಎನ್.ತಿಪ್ಪಣ್ಣ** ಅವರು,

''ನ್ಯಾ.ಮೂ. ಈ.ಎಸ್.ವೆಂಕಟರಾಮಯ್ಯನವರು ಸುಪ್ರೀಂ ಕೋರ್ಟ್ ಮುಖ್ಯ ನ್ಯಾಯಮೂರ್ತಿಗಳಾಗಿದ್ದಾಗ ಹರಪನಹಳ್ಳಿ ಅಥವಾ ಹೂವಿನ ಹಡಗಲಿಯಲ್ಲಿ ಶ್ರೇಷ್ಠ ನ್ಯಾಯಾಲಯದ ಪೀಠ ರಚಿಸುವ ಸಲಹೆ ನೀಡಿದ್ದರು'' ಎಂದು ನೆನಪಿಸಿದ್ದಾರೆ.

ಇಷ್ಟೆಲ್ಲ ಸ್ಥಳಗಳು ಪೀಠಕ್ಕಾಗಿ ಪೈಪೋಟಿ ನಡೆಸುತ್ತಿದ್ದರೂ ಹುಬ್ಬಳ್ಳಿ-ಧಾರವಾಡ ಮಹಾನಗರದ ಅರ್ಹತೆ ವಿಶಿಷ್ಟವಾದುದಾಗಿದೆಯೆಂದೆನಿಸಲು ಕಾರಣಗಳುಂಟು.

**ಪ್ರಾ.ಆರ್.ಎಸ್.ಹೆಗಡೆ** ಹೇಳುತ್ತಾರೆ:

''ಬೆಳಗಾವಿ, ಕಲಬುರ್ಗಿ, ವಿಜಾಪುರ, ಹಡಗಲಿ, ದಾವಣಗೆರೆಗಳ ಮಧ್ಯದಲ್ಲಿದೆ ಹುಬ್ಬಳ್ಳಿ ಮಹಾನಗರ. ಬೆಳಗಾವಿಯಂತೆ ಮಹಾರಾಷ್ಟ್ರದ ಅಥವಾ ಕಲಬುರ್ಗಿಯಂತೆ ಆಂಧ್ರದ ಗಡಿಜಿಲ್ಲೆ ಅದಲ್ಲ''.

**ಪ್ರಾ.ಡಿ.ಎಮ್.ಬಿರಾದಾರರ ಪ್ರತಿಕ್ರಿಯೆ :**

"೧೯೯೧ರಲ್ಲಿಯೇ ಮಹಾನಗರದ ಜನಸಂಖ್ಯೆ ಆರು ಲಕ್ಷ ದಾಟಿತ್ತು; ಇಲ್ಲಿ ನ್ಯಾಯವಾದಿಗಳ, ವ್ಯಾಜ್ಯಗಳ ಸಂಖ್ಯೆಯೂ ಅತಿ ಹೆಚ್ಚು; ಆರ್ಥಿಕ, ಸಾಮಾಜಿಕ ದೃಷ್ಟಿಗಳಿಂದ ಇದು ಅಭಿವೃದ್ಧಿ ಹೊಂದಿದ ಮಹಾನಗರ. ಬೇಕಾದಷ್ಟು ಸ್ಥಳ, ವಿಪುಲ ಕಟ್ಟಡಗಳು ಇಲ್ಲಿ ಲಭ್ಯವಿವೆ. ಆದುದರಿಂದ ಪೀಠ ಸ್ಥಾಪನೆಗೆ ಇದು ಅತ್ಯಂತ ಸೂಕ್ತ ಸ್ಥಳ".

ಇಂದಿನ ದಿನಗಳಲ್ಲಿ ಯಾವ ಕೆಲಸಕ್ಕಾದರೂ ಪೂರ್ವಾನುಭವ ಇರುವದು ಮಹತ್ವದ ಅರ್ಹತೆಗಳಲ್ಲಿ ಒಂದು. ಮಹಾನಗರಕ್ಕೆ ಅದೂ ಇದೆ. ೧೮೩೦ ರಿಂದ ೧೮೯೧ರ ವರೆಗೆ ಆಗಿನ ಆಂಗ್ಲರ ಆಳ್ವಿಕೆಯಲ್ಲಿ ಧಾರವಾಡದಲ್ಲಿ ಶ್ರೇಷ್ಠ ನ್ಯಾಯಾಲಯ ಮಾದರಿಯ ಸಗರ್ ಅದಾಲತ್ ಎಂಬ ಸಂಸ್ಥೆ ಕಾರ್ಯ ನಿರ್ವಹಿಸುತ್ತಿತ್ತು. ಆದರ ಅಧೀನದಲ್ಲಿ ಧಾರವಾಡ, ಬೆಳಗಾವಿ, ಸೊಲ್ಲಾಪೂರ ಮುಂತಾದ ಭಾಗಗಳಿದ್ದವು.

ಮಹಾನಗರದ ನ್ಯಾಯವಾದಿ **ಶ್ರೀಕಾಂತ್ ದೇಸಾಯಿ**ಯವರು ಇತಿಹಾಸವನ್ನೇ ಹೀಗೆ ಬಿಚ್ಚಿಡುತ್ತಾರೆ:

"ದಿನಾಂಕ ೧-೧೨-೧೯೭೧ರಂದು ಕರ್ನಾಟಕ ಸರಕಾರದ ಕಾನೂನು ಮಂತ್ರಿಗಳು ಕೇಂದ್ರ ಕಾನೂನು ಮಂತ್ರಿಗಳಿಗೆ ಮಹಾನಗರದಲ್ಲಿ ಪೀಠ ಸ್ಥಾಪನೆಯ ಬಗೆಗೆ ಅರೆಸರಕಾರೀ ಪತ್ರ ಬರೆದರು. ಆರು ವರ್ಷಗಳ ನಂತರ ಆಗಿನ ಮುಖ್ಯಮಂತ್ರಿ ಆರ್.ಗುಂಡೂರಾಯರು ೧೯೩೧ರ ಪತ್ರದ ಯಥಾಪ್ರತಿಯೊಡನೆ ವಿನಂತಿಯನ್ನು ನವೀಕರಿಸಿ ಕೇಂದ್ರ ಕಾನೂನು ಸಚಿವ ಶಿವಶಂಕರ್ ಅವರಿಗೆ ಪತ್ರ ಬರೆದರು. ನಂತರ ಕೇಂದ್ರ ಸರಕಾರ ನ್ಯಾ.ಮೂ.ಜಸವಂತಸಿಂಗ್‌ರವರ ನೇತೃತ್ವದಲ್ಲಿ ಹೈಕೋರ್ಟ್ ಪೀಠಗಳ ಸ್ಥಾಪನೆ ಕುರಿತು ಆಯೋಗ ನೇಮಕ ಮಾಡಿತು. ಈ ಆಯೋಗ ೧೯೮೫ರಲ್ಲಿ ಕರ್ನಾಟಕಕ್ಕೆ ಭೇಟಿ ನೀಡಿತು. ಮಾರ್ಗದರ್ಶಿ ಸೂತ್ರಗಳನ್ನು ಸಲ್ಲಿಸಿತು. ಇವುಗಳಲ್ಲಿ ಬಹುಪಾಲು ಸೂತ್ರಗಳು ಹುಬ್ಬಳ್ಳಿ-ಧಾರವಾಡ ಮಹಾನಗರದಲ್ಲಿ ಪೀಠ ಸ್ಥಾಪನೆಯ ಬೇಡಿಕೆಗೆ ಪೂರಕವಾಗಿವೆ".

ಮಹಾನಾಗರದ ಇನ್ನೊರ್ವ ನ್ಯಾಯವಾದಿ **ವೆಂಕಟೇಶ್ ಅಥಣಿ** ಹೆಮ್ಮೆಯಿಂದ ಹೇಳುತ್ತಾರೆ:

"ಶ್ರೇಷ್ಠ ನ್ಯಾಯಾಲಯದ ಪೀಠ ಸ್ಥಾಪನೆ ಹುಬ್ಬಳ್ಳಿ - ಧಾರವಾಡದಲ್ಲಾಗಬೇಕೆಂಬ ಬೇಡಿಕೆಯನ್ನು ಭಾರತೀಯ ಜನತಾ ಪಕ್ಷದ ರಾಜ್ಯ ಘಟಕ ಬೆಂಬಲಿಸಿದೆ".

ಕಳೆದ ೨೦ ವರ್ಷಗಳಿಂದಲೂ ಹುಬ್ಬಳ್ಳಿ-ಧಾರವಾಡದಲ್ಲಿ ಪೀಠಸ್ಥಾಪನೆಯ ಬೇಡಿಕೆ ಇದೆಯೆಂಬುದನ್ನು ಕಾನೂನು ಸಚಿವ **ಎಂ.ಸಿ.ನಾಣಯ್ಯ**ನವರೂ ವಿಧಾನ ಪರಿಷತ್ತಿನಲ್ಲಿ ಒಪ್ಪಿಕೊಂಡಿದ್ದಾರೆ. ಇದೆಲ್ಲದರ ಮಥಿತಾರ್ಥವೆಂದರೆ ಉತ್ತರ ಕರ್ನಾಟಕದಲ್ಲಿ-ಅದು ಎಲ್ಲಿಯೇ ಆಗಲಿ-ಶ್ರೇಷ್ಠ ನ್ಯಾಯಾಲಯದ ಪೀಠದ ಬೇಡಿಕೆ ಪೂರ್ಣಕುಂಭ, ಅರ್ಧಕುಂಭ ಮೇಳಗಳಂತೆ ನಿಶ್ಚಿತ ವಿರಾಮದ ನಂತರ ಜನಮನದಲ್ಲಿ ಪ್ರತ್ಯಕ್ಷವಾಗುತ್ತಾ ಅಷ್ಟೇ ನಿಶ್ಚಿತವಾಗಿ ಅದೃಶ್ಯವಾಗುತ್ತಲಿದೆ.

ಹಾಗಾದರೆ ನಾವು ಮಾಡುತ್ತಿರುವದೇನು? ನಮ್ಮ ಪ್ರಾಮಾಣಿಕ ಮತ್ತು ಅರ್ಹ ಬೇಡಿಕೆಗಳನ್ನು ಈಡೇರಿಸಿಕೊಳ್ಳದಷ್ಟು ನಾವು ನರ ಸತ್ತವರೇ? ಇಲ್ಲ. ಪ್ರಾಜಾಸತ್ತಾತ್ಮಕವಾಗಿ ಮಾಡಬಹುದಾದುದೆಲ್ಲವನ್ನೂ ರಾಜಕೀಯ ಪಕ್ಷಗಳು, ವೃತ್ತಿನಿರತರ ಸಂಘ-ಸಂಸ್ಥೆಗಳು, ರಾಜಕೀಯೇತರ ಸಂಘಟನೆಗಳು, ಗಣ್ಯವ್ಯಕ್ತಿಗಳು ಮಾಡುತ್ತಲಿದ್ದಾರೆ. ಆದರೆ ಎಲ್ಲಿ ಏನು ಕೊರತೆಯುಂಟಾಗಿದೆಯೆಂಬುದು ತಿಳಿಯುತ್ತಿಲ್ಲ. ಈಗಾಗಲೇ ನಡೆದ ಪ್ರಯತ್ನಗಳ ಸಮೀಕ್ಷೆ ಹೀಗಿದೆ :

ಹುಬ್ಬಳ್ಳಿಯ ನ್ಯಾಯವಾದಿಗಳ ಸಂಘ, ಸಿ.ಆರ್.ಪಾಟೀಲರ ನೇತೃತ್ವದಲ್ಲಿ ಕಳೆದ ಜುಲೈ ಮಧ್ಯದಿಂದ ನವ್ಹೆಂಬರ್ ಕೊನೆಯ ಸಪ್ತಾಹದ ವರೆಗೆ ಚಳವಳಿಯಲ್ಲಿ ನಿರತವಾಗಿತ್ತು. ಅದರ ಅಂಗವಾಗಿ ನ್ಯಾಯಾಲಯಗಳ ಕಾರ್ಯಕಲಾಪಗಳಿಗೆ ಬಹಿಷ್ಕಾರ, ಮಹಾಪೌರರಿಗೆ ಘೇರಾವೋ, ಬೇರೆ ಬೇರೆ ಸಚಿವರಿಗೆ ಪ್ರತಿಪಕ್ಷ ನಾಯಕರಿಗೆ ಮನವಿ ಅರ್ಪಣೆ, ಮಹಾನಗರ ಬಂದ್ ಇತ್ಯಾದಿ ನಡೆದವು. ಆದರೆ ಇದು ನಿಷ್ಫಲವಾದ 'ಚಾತುರ್ಮಾಸ ವ್ರತ'ವೆಂಬುದನ್ನು ಖೇದದಿಂದ ಒಪ್ಪಲೇಬೇಕು. ಈ ಅವಧಿಯಲ್ಲಿ ನ್ಯಾಯವಾದಿಗಳಲ್ಲಿ ಹಲವರ ವೃತ್ತಿಪರತೆ ಕಳೆಗುಂದಿದ್ದೀತು; ಹಲವರ ಜೀವನ ನಿರ್ವಹಣೆ ಜಟಿಲಗೊಂಡಿರಬಹುದು; ಕಕ್ಷಿಗಾರರಿಗಂತೂ ಅಪರಿಹಾರ್ಯವಾದ ಅನಾನುಕೂಲವಾಯಿತು; ನ್ಯಾಯಾಲಯಗಳು ಸುಮ್ಮನೆ ಕಾಲಕೊಲ್ಲುವಂತಾಯಿತು. 'ಮಾನವ ತಾಸು'ಗಳು ಈ ರೀತಿ ನಿರರ್ಥಕಗೊಂಡುದಕ್ಕೆ ಹೊಣೆಗಾರರಾರು?

ಈ ಹೋರಾಟದಲ್ಲಿ ಹುಬ್ಬಳ್ಳಿಯ ನ್ಯಾಯವಾದಿಗಳ ಸಂಘ ಏಕಾಂಗಿಯಾಗಿರಲಿಲ್ಲ ಎಂಬುದು ಸಮಾಧಾನದ ವಿಷಯ. ಧಾರವಾಡದ ನ್ಯಾಯವಾದಿಗಳ ಸಂಘವೂ ಈ ಕುರಿತು ಬಿ.ಡಿ. ಹಿರೇಮಠರ ನೇತೃತ್ವದಲ್ಲಿ ಪ್ರಧಾನಮಂತ್ರಿ, ರಾಷ್ಟ್ರಪತಿಗಳಲ್ಲಿಗೆ ನಿಯೋಗ ಕಳಿಸಲು ನಿರ್ಧರಿಸಿತು; ಎಸ್.ಆರ್.ಬೊಮ್ಮಾಯಿಯವರಿಗೆ ಮನವಿ ಅರ್ಪಿಸಿತು; ಸರಕಾರಿ ಕಚೇರಿಗಳ ಕಾರ್ಯ ಸ್ಥಗಿತ ಚಳವಳಿ ಹಮ್ಮಿಕೊಂಡಿತು; ಉತ್ತರ ಕರ್ನಾಟಕದಲ್ಲಿ ಎಲ್ಲಿಯಾದರೂ ಪೀಠ ಸ್ಥಾಪನೆಗಾಗಿ ಮುಖ್ಯ ನ್ಯಾಯಮೂರ್ತಿ



ಆರ್.ಪಿ.ಸೇಠಿಯವರಿಗೆ ಬೆಂಗಳೂರಿನಲ್ಲಿ ನಿಯೋಗ ಮನವಿ ಅರ್ಪಿಸಿತು. ೩೩ ದಿನಗಳ ಹೋರಾಟದ ನಂತರ ಬರಿಗೈಯಿಂದ ವೃತ್ತಿ ಕಾರ್ಯಕ್ಕೆ ಹಿಂದಿರುಗಲು ನಿರ್ಧರಿಸಿತು.

ಮೇಲಿನ ಎರಡೂ ಸಂಘಗಳ ಹೋರಾಟಕ್ಕೆ ಬೆಂಬಲವಾಗಿ ವೀರಶೈವ ಮಹಾಸಭೆಯ ಧಾರವಾಡ ಜಿಲ್ಲಾ ಸಮಿತಿ, ಕರ್ನಾಟಕ ಯುಥ್ ಫೆಡರೇಶನ್, ರಾಷ್ಟ್ರಕಲ್ಯಾಣ ವಿದ್ಯಾರ್ಥಿ ಸಂಘದ ಹುಬ್ಬಳ್ಳಿ ಶಾಖೆ, ಹುಬ್ಬಳ್ಳಿಯ ಕುಲಕರ್ಣಿ ಹಕ್ಕಲ ಯುವಕ ಮಂಡಳ ಧಾರವಾಡದ ದೀನದಯಾಳ ಹರಿಜನ ವಿಕಾಸ ಮಂಡಳಿ, ಚಾಮುಂಡೇಶ್ವರಿ ನಗರ ಯುವಕ ಮಂಡಳ, ಅಖಿಲ ಕರ್ನಾಟಕ ಆದಿ ಜಾಂಬವ ಸಂಘ, ಯುನೈಟೆಡ್ ಯುಥ್ ವೆಲ್‌ಫೇರ್ ಅಸೋಸಿಯೇಶನ್, ಕೋ ಆಪರೇಟಿವ್ ಹಾಸ್ಪಿಟಲ್ ಎಂಪ್ಲಾಯಿಸ್ ಯೂನಿಯನ್, ಹುಬ್ಬಳ್ಳಿ ಪತ್ರಿಕಾ ವಿತರಕರ ಸಂಘ, ಸೋಮವಂಶ ಸಹಸ್ರಾರ್ಜುನ ಕ್ಷತ್ರಿಯ ಪಂಚ ಸಮಿತಿ, ಹುಬ್ಬಳ್ಳಿಯ ಸರಾಫ ಸಂಘ ಮುಂತಾದ ಸಂಘಟನೆಗಳು ನಿಂತವು.

ಹಿಂದೂ ಮಹಾಸಭೆಯ ಹುಬ್ಬಳ್ಳಿ ಘಟಕ ತಹಸೀಲ್‌ದಾರರಿಗೆ, ಹುಬ್ಬಳ್ಳಿ ಧಾರವಾಡ ಫ್ರೆಂಡ್ಸ್ ಯುಥ್ ಅಸೋಸಿಯೇಶನ್ ಮುಖ್ಯ ಮಂತ್ರಿಗಳಿಗೆ, ಉತ್ತರ ಕರ್ನಾಟಕ ಸ್ವಾಭಿಮಾನ ಜಾಗೃತಿ ಹೋರಾಟ ಸಮಿತಿ ಪ್ರಧಾನ ಮಂತ್ರಿಗಳಿಗೆ ಈ ವಿಷಯ ಕುರಿತು ಮನವಿ ಅರ್ಪಿಸಿದವು

ಹುಬ್ಬಳ್ಳಿಯಲ್ಲಿ ಸಂಘಟಿತವಾದ ಭಾರತೀಯ ಜನತಾ ಪಕ್ಷದ ರಾಜ್ಯಮಟ್ಟದ ರೈತ ಸಮ್ಮೇಳನದಲ್ಲಿ ಉತ್ತರ ಕರ್ನಾಟಕದಲ್ಲಿ ಪೀಠ ಸ್ಥಾಪನೆ ಕುರಿತು ಗೊತ್ತುವಳಿ ಅಂಗೀಕೃತವಾಯಿತು. ಪ್ರಗತಿಪರ ವಿಚಾರವೇದಿಕೆಯ ಅಧ್ಯಕ್ಷರು ಕೇಂದ್ರ ಸಚಿವ ರೊಬ್ಬರು ಇಬ್ಬಗೆಯ ನೀತಿ ಅನುಸರಿಸುತ್ತಿದ್ದಾರೆಂದು ಆರೋಪಿಸಿದರು.

ದಿನಾಂಕ ೩೧-೭-೧೯೯೬ರಂದು ಆಚರಿಸಿದ ಹುಬ್ಬಳ್ಳಿ-ಧಾರವಾಡ ಬಂದ್‌ನಲ್ಲಿ ಆಡಳಿತ ಜನತಾದಳದ ಹೊರತಾಗಿ ಉಳಿದ ಪಕ್ಷಗಳ ಪ್ರಮುಖರು ಪಾಲ್ಗೊಂಡರು. ಹುಬ್ಬಳ್ಳಿಯ ವಾಣಿಜ್ಯೋದ್ಯಮ ಸಂಘ, ಉತ್ತರ ಕರ್ನಾಟಕ ಅಭಿವೃದ್ಧಿಪರ ಹೋರಾಟ ವೇದಿಕೆ, ಧಾರವಾಡ ಜಿಲ್ಲಾ ರಾಷ್ಟ್ರೀಯ ನವ ನಿರ್ಮಾಣ ವೇದಿಕೆ, ಅಖಿಲ ಭಾರತ ಜೈನ ಯುಥ್ ಫೆಡರೇಶನ್, ಬ್ಯಾಂಕ್ ನೌಕರರ ಸಂಘ, ಮಹಾನಗರ ಯುವ ಕಾಂಗ್ರೆಸ್, ರಿಕ್ಷಾ ಹಾಗೂ ಮ್ಯಾಕ್ಸಿಕ್ಯಾಬ್ ಚಾಲಕರು ಹಾಗೂ ಮಾಲಿಕರ ಸಂಘಗಳು, ಹಿಂದೂ-ಮುಸ್ಲಿಂ ಏಕತಾ ಮೋರ್ಚಾ, ಜವಳಿ ಹಾಗೂ ದಲಾಲಿ ವರ್ತಕರ ಸಂಘಗಳು, ರಾಷ್ಟ್ರ ಕಲ್ಯಾಣ ವಿದ್ಯಾರ್ಥಿಗಣ, ಉತ್ತರ ಕರ್ನಾಟಕ ಪ್ರಗತಿ ಪರ ಸಂಘರ್ಷ ಸಮಿತಿ ಭಾಗವಹಿಸಿದವಲ್ಲದೆ, ಕೊನೆಗೆ ಹೆಸರಿಸಿದ ಸಂಘಟನೆ ರೈಲು ತಡೆ ಕೂಡ ಹಮ್ಮಿಕೊಂಡಿತ್ತು.

ಧಾರವಾಡದಲ್ಲಿ ಸಹಕಾರ ಸಚಿವ **ಎಸ್.ಎಸ್.ಪಾಟೀಲರ** ಅಧ್ಯಕ್ಷತೆಯಲ್ಲಿ ಸೇರಿದ ಕರ್ನಾಟಕ ಪ್ರಗತಿ ಪರಿಶೀಲನಾ ಸಭೆ ಮಹಾ ನಗರದಲ್ಲಿ ಪೀಠ ಸ್ಥಾಪನೆಯ ಕುರಿತು ಗೊತ್ತುವಳಿ ಅಂಗೀಕರಿಸಿತು. ಮಹಾನಗರದಲ್ಲಿ ಪೀಠ ಸ್ಥಾಪನೆಯನ್ನು ಸುಗಮಗೊಳಿಸಲು ನವನಗರದಲ್ಲಿರುವ ಮಹಾನಗರಸಭೆಯ ಕಟ್ಟಡ ಹಾಗೂ ಅದಕ್ಕೆ ಹೊಂದಿದ ಸುಮಾರು ೨೦ಎಕರೆ ಜಮೀನಿನ ಕೊಡುಗೆಯ ಸರ್ವಾನುಮತದ ಗೊತ್ತುವಳಿಯನ್ನು ೩೦-೯-೧೯೯೬ರಂದು ಮಹಾನಗರಸಭೆ ಪಾಸು ಮಾಡಿತು. ಹಾಸನದಲ್ಲಿ ಜರುಗಿದ ೬೫ನೇ ಅಖಿಲ ಭಾರತ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ **ಚನ್ನವೀರ ಕಣವಿಯವರು**

> "ಹೈಕೋರ್ಟ್ ಪೀಠವನ್ನು ಉತ್ತರ ಕರ್ನಾಟಕದಲ್ಲಿ ಪ್ರಾರಂಭಿಸಲು ಏಕೆ ಪ್ರಾಮಾಣಿಕವಾದ ಪ್ರಯತ್ನ ನಡೆಯುತ್ತಿಲ್ಲ?"

ಎಂದು ತಮ್ಮ ಮನದಳಲನ್ನು ಹೊರಹಾಕಿದರು. ಈ ಮಧ್ಯೆ ಕಲಬುರ್ಗಿ ಜಿಲ್ಲಾ ವಕೀಲರ ಸಂಘ ಹಾಗೂ ಹೈಕೋರ್ಟ್ ಪೀಠ ಸ್ಥಾಪನೆ ಹೋರಾಟ ಸಮಿತಿಗಳ ಸಂಯುಕ್ತ ಕರೆಯ ಮೇರೆಗೆ ಆಚರಿಸಿದ ಕಲಬುರ್ಗಿ ಬಂದ್ ಅಷ್ಟಾಗಿ ಪ್ರಚಾರ ಪಡೆಯಲಿಲ್ಲ.

ರಾಜಕೀಯ ಪಕ್ಷಗಳ ಮುಖಂಡರು, ಸಾಮಾಜಿಕ-ಸಾಂಸ್ಕೃತಿಕ ರಂಗಗಳ ಮುಂಚೂಣಿಯಲ್ಲಿರುವ ವಿವಿಧ ಮಹನೀಯರು ಸಹ ಉತ್ತರ ಕರ್ನಾಟಕದಲ್ಲಿ ಶ್ರೇಷ್ಠ ನ್ಯಾಯಾಲಯ ಪೀಠ ರಚನೆ ವಿನಾಕಾರಣ ವಿಳಂಬಗೊಂಡಿರುವದರ ಬಗೆಗೆ ಆತಂಕ ವ್ಯಕ್ತಪಡಿಸಿದ್ದಾರೆ. ಆದರೆ ಅವರವರ ರೀತಿಯಲ್ಲಿಯೇ ಈ ಸಮಸ್ಯೆ ವಿಶ್ಲೇಷಣೆಗೊಳಗಾಗಿರುವದೂ ಪೀಠಸ್ಥಾಪನೆಯೊಡನೆ ಬೇರೊಂದು ಅಭಿಪ್ರಾಯ ರೂಪಿಸುವದಕ್ಕೆ ಅವರು ಪ್ರಯತ್ನಿಸುತ್ತಿರುವದೂ ಒಡೆದು ಕಾಣುತ್ತದೆ. ಇಲ್ಲಿವೆ ಕೆಲವು ಉದಾಹರಣೆಗಳು:




**ಸುಳ್ಳು ಸುದ್ದಿ !**

ಖ್ಯಾತ ಸಾಹಿತಿಯೊಬ್ಬ
ಅಂಗಲಾಚಿದ
ಸರ್ಕಾರದ ಮುಂದೆ
-ನನಗೆ ಬೇಕಿಲ್ಲ ಜ್ಞಾನಪೀಠ;
ಉತ್ತರ ಕರ್ನಾಟಕ್ಕೆ
ಕೊಟ್ಟರೆ ಸಾಕು
ಹೈಕೋರ್ಟು ಪೀಠ!

**- ಗೋಪಾಲಕೃಷ್ಣ ವಂ**

ಮಹಾನಗರದ ಗಣ್ಯರ, ಬುದ್ಧಿಜೀವಿಗಳ ಹಾಗೂ ಜನ-ಪ್ರತಿನಿಧಿಗಳ ಸಭೆ ಹುಬ್ಬಳ್ಳಿಯಲ್ಲಿ ಸಮಾವೇಶಗೊಂಡು ಶಾಸಕರ ರಾಜೀನಾಮೆ, ಪ್ರತ್ಯೇಕ ಉತ್ತರ ಕರ್ನಾಟಕ ರಾಜ್ಯ ರಚನೆಯ ಎಚ್ಚರಿಕೆಗಳಂಥ ಅಬ್ಬರದ ಘೋಷಣೆಗಳೊಡನೆ ಕೊನೆಗೊಂಡಿತು. ಕ್ರಿಯಾಸಮಿತಿಯ ನೇತೃತ್ವ ವಹಿಸಿದ್ದ ಹಿರಿಯ ಪತ್ರಕರ್ತ **ಡಾ. ಪಾಟೀಲ ಪುಟ್ಟಪ್ಪನವರು**, ಸಂಸದರು, ಶಾಸಕರು ಕಾರ್ಯ ನಿರ್ವಹಿಸದ ಪರಿಸ್ಥಿತಿ ನಿರ್ಮಿಸಲು ಕರೆಕೊಟ್ಟರು. ಹುಬ್ಬಳ್ಳಿ ನ್ಯಾಯವಾದಿಗಳ ಸಂಘದ ಅಧ್ಯಕ್ಷ **ಸಿ.ಆರ್. ಪಾಟೀಲರು** ಪ್ರತ್ಯೇಕ ರಾಜ್ಯ ರಚನೆ ಕೊನೆಯ ಅಸ್ತ್ರವೆಂದರು. ಭಾರತೀಯ ಜನತಾ ಪಕ್ಷದ ಸಂಸದ **ವಿಜಯ ಸಂಕೇಶ್ವರರು** ಪಕ್ಷಾತೀತ ಹೋರಾಟದ ಅವಶ್ಯಕತೆಯನ್ನು ಬಿಂಬಿಸಿದರು. ಕೇಂದ್ರ ಕನ್ನಡ ಕ್ರಿಯಾ ಸಮಿತಿಯ ಅಧ್ಯಕ್ಷ **ಡಾ.ದೇವೇಂದ್ರ ಕುಮಾರ್ ಹಕಾರಿಯವರು** ತಮ್ಮ ರಾಜಕೀಯ ಪುನರ್ಜನ್ಮಕ್ಕೆ ಕಾರಣವಾದ ಕರ್ನಾಟಕ ವಿಕಾಸ ವೇದಿಕೆಯನ್ನೇ

ದೇವೇಗೌಡರು ಕಡೆಗಣಿಸಿದ್ದಕ್ಕೆ ವ್ಯಥೆಪಟ್ಟರು. ನಾಗರಿಕ ವೇದಿಕೆಯ **ಡಾ. ಎ.ವಿ. ಹುಯಿಲಗೋಳ**ರು ಅಸಹಕಾರ ಚಳವಳಿ, ರಾಜ್ಯ ಸಚಿವರ ಬಹಿಷ್ಕಾರಕ್ಕೆ ಕರೆಕೊಟ್ಟರು.

ಸಮಸ್ಯೆಯ ಪರಿಹಾರಕ್ಕೆ ರಚನಾತ್ಮಕವಾಗಿ ಸ್ಪಂದಿಸಿದ ಸಂಸದ ವಿಜಯ ಸಂಕೇಶ್ವರರಂತೆಯೇ ವಸ್ತುನಿಷ್ಠ ದೃಷ್ಟಿಕೋನ ತಳೆದವರು ಹಲವರು. ಹಿಂದಿನ ಮಹಾಪೌರ **ಡಾ. ಪಾಂಡುರಂಗ ಪಾಟೀಲ**ರ ದೃಷ್ಟಿಯಲ್ಲಿ ಹುಬ್ಬಳ್ಳಿ-ಧಾರವಾಡವನ್ನು ಸಮಗ್ರ ಉತ್ತರ ಕರ್ನಾಟಕದೊಡನೆ ಸಮೀಕರಿಸುವದು ಅತಾರ್ಕಿಕ. ಹಾಗಾಗಿ ಈ ಪ್ರತ್ಯೇಕತೆ, ಪ್ರತ್ಯೇಕ ವೇದಿಕೆ ಬೇಡ. ಎಂಟೂ ಜಿಲ್ಲೆಗಳು ಒಂದಾಗಿ **ಹೋರಾಟ** ಮಾಡಲು ಮುಂದಾದರೆ ಸಂಬಂಧಿಸಿದವರ ಮನವೊಲಿಸಿ ಕೆಲಸ ಮಾಡಿಸುವ ಭರವಸೆ ನೀಡಿದವರು ಕಾಂಗ್ರೆಸ್ ಸಂಸದರ ವೇದಿಕೆಯ ಸಂಚಾಲಕ **ಪ್ರೊ.ಆಯ್.ಜಿ.ಸನದಿ.** ಸಾಂದರ್ಭಿಕ ಕಲಾಪಗಳಿಂದ ಉದ್ರೇಕಿತರಾದ ಬನಹಟ್ಟಿಯ **ರಾಮಲಿಂಗಪ್ಪ ಬಾಗಿಲಕೋಟೆ**ಯವರು ಈ ಸಂಯುಕ್ತ ಹೋರಾಟದಲ್ಲಿ ನನ್ನ ಹೆಣ ಮೊದಲು ಬೀಳಲಿ ಎಂದು ಘೋಷಿಸಿದರು.

ಭಾರತೀಯ ಜನತಾಪಕ್ಷದ ಹಿಂದಿನ ಕೇಂದ್ರ ಸಚಿವೆ **ಸುಷ್ಮಾ ಸ್ವರಾಜ್** ಈ ವಿಷಯವನ್ನು ಸಂಸತ್ತಿನಲ್ಲಿ ಪ್ರಸ್ತಾಪಿಸುವ ಆಶ್ವಾಸನೆ ನೀಡಿದರು. ಸಚಿವ ಸಂಪುಟ, ವಿಧಾನ ಮಂಡಲ, ಮುಖ್ಯ ನ್ಯಾಯಮೂರ್ತಿಗಳ ಸಮ್ಮತಿಯ ನಂತರವೂ ಹುಬ್ಬಳ್ಳಿಗೆ ಪೀಠ ಏಕೆ ದೊರೆಯಲಿಲ್ಲ ಎಂಬುದು ಅವರ ಪ್ರಶ್ನೆ. ಕರ್ನಾಟಕ ಪ್ರದೇಶ ಕಾಂಗ್ರೆಸ್ಸಿನ ಆಗಿನ ಅಧ್ಯಕ್ಷ ಡಿ.ಕೆ.ನಾಯ್ಕರ್ ಅವರು ಮುಖ್ಯ ನ್ಯಾಯಾಧೀಶರ ಸಮ್ಮತಿ, ಶಿಫಾರಸು ಸಿಕ್ಕ ನಂತರ ಪೀಠ ಸ್ಥಾಪಿಸುವ ಬಗ್ಗೆ ಮುಂದಿನ ಕ್ರಮ ಕೈಕೊಳ್ಳುವದು ಕೇಂದ್ರ ಸರಕಾರದ ಕರ್ತವ್ಯ ಎಂದು ಅಭಿಪ್ರಾಯ ಪಡುತ್ತಾರೆ. ಶಾಸಕ, ಹಿರಿಯ ನ್ಯಾಯವಾದಿ **ಹಾರನಹಳ್ಳಿ** ರಾಮಸ್ವಾಮಿಯವರದು ಇನ್ನೂ ಖಾರವಾದ ಪ್ರತಿಕ್ರಿಯೆ: ಜನರ ಮರ್ಜಿಗೆ ಅನುಗುಣವಾಗಿ ಪ್ರಧಾನ ಮಂತ್ರಿಗಳ ಮಟ್ಟದಲ್ಲಿ ಪೀಠದ ತೀರ್ಮಾನವಾಗಬೇಕೆ ವಿನಾ ನ್ಯಾಯಮೂರ್ತಿಗಳ ಮರ್ಜಿಯ ಮೇಲಲ್ಲ. ಅದೇ ಧಾಟಿಯಲ್ಲಿ ವಿಧಾನ ಪರಿಷತ್ ಪ್ರತಿಪಕ್ಷದ ನಾಯಕ ಕಾಂಗ್ರೆಸ್ಸಿಗ **ಎಚ್.ಕೆ.ಪಾಟೀಲ್** ಹೇಳುತ್ತಾರೆ:

''ಮುಖ್ಯ ನ್ಯಾಯಾಧೀಶರ ಅಭಿಪ್ರಾಯ ವೆಂದರೆ ಅವರ ಒಪ್ಪಿಗೆ ಪಡೆಯುವದಲ್ಲ; ಸಮಾಲೋಚಿಸುವದು ಎಂದರೆ ಅವರು ಹೇಳಿದಂತೆ ಕೇಳುವದಲ್ಲ''.

ಹುಬ್ಬಳ್ಳಿಯ ನ್ಯಾಯವಾದಿಗಳ ಸಂಘದ ನಿಲುವೂ ಇದೇ: ರಾಜ್ಯ ಪುನರ್‌ವಿಂಗಡನಾ ಕಾಯ್ದೆಯ ೫೧ನೆಯ ಕಲಮಿನ ೨ನೆಯ ಉಪಕಲಮಿನ ಪ್ರಕಾರ ಹೈಕೋರ್ಟ್‌ನೊಡನೆ ಸಮಾಲೋಚಿಸುವದು ಅಗತ್ಯ. ಹೈಕೋರ್ಟ್ ಒಪ್ಪಿಗೆ ಪಡೆಯಬೇಕೆನ್ನುವದು ಕಾಯ್ದೆಗೆ ವ್ಯತಿರಿಕ್ತ.

ಆದುದರಿಂದಲೇ **ಡಿ.ಕೆ.ನಾಯ್ಕರ್** ಅವರು ರಾಜ್ಯದ ಶಾಸಕರು ಸಂಸತ್ ಸದಸ್ಯರಿಗೆ ೧೯೯೫ರಲ್ಲಿಯೇ ಪೀಠ ಸ್ಥಾಪನೆಗಾಗಿ ಶಿಫಾರಸಿನೊಂದಿಗೆ ಕೇಂದ್ರಕ್ಕೆ ಹೋಗಿ ಅಲ್ಲಿ ಕೊಳೆಯುತ್ತಿರುವ ಈ ವಿಷಯದ ಪರವಾಗಿ ಧ್ವನಿ ಎತ್ತಲು ಪತ್ರ ಮುಖೇನ ಕರೆ ನೀಡಿದ್ದಾರೆ.

ಲೋಕಸಭೆಯಲ್ಲಿ ಪ್ರತಿಪಕ್ಷ ನಾಯಕರಾದ ಭಾರತೀಯ ಜನತಾ ಪಕ್ಷದ **ಅಟಲ್ ಬಿಹಾರಿ ವಾಜಪೇಯಿ**ಯವರು,

''ಸಧ್ಯದ ಕೇಂದ್ರ ಕಾನೂನು ಸಚಿವರಿಗೆ ಪತ್ರ ಬರೆದು ಹುಬ್ಬಳ್ಳಿಯಲ್ಲಿ ಪೀಠ ಸ್ಥಾಪನೆಗೆ ಯಾವ ಅಭ್ಯಂತರವೂ ಇಲ್ಲ ಎಂದು ಹಿಂದಿನ ಕಾನೂನು ಸಚಿವರು ಹೇಳಿದರು; ೧೯೯೧ರಲ್ಲಿ ಕರ್ನಾಟಕದ ಮುಖ್ಯಮಂತ್ರಿಗಳು ಸಂಪುಟದ ಸಮ್ಮತಿಯೊಂದಿಗೆ ಶಿಫಾರಸು ಕಳಿಸಿದ್ದಾರೆ. ಈಗ ನಿಮ್ಮ ಕೆಲಸವನ್ನು ತ್ವರಿತಗೊಳಿಸಿ'' ಎಂದಿದ್ದಾರೆ.

ಬೇಡಿಕೆ ಈಡೇರುವವರೆಗೂ ಹೋರಾಟ ವನ್ನು ಸ್ಥಗಿತಗೊಳಿಸಬಾರದು ಎಂಬುದು ಲೋಕಶಕ್ತಿಯ ಅಧ್ಯಕ್ಷ **ರಾಮಕೃಷ್ಣ ಹೆಗಡೆ**ಯವರ ಸಲಹೆ.

ಆದರೂ ಸಹಕಾರ ಸಚಿವ ಎಸ್.ಎಸ್.ಪಾಟೀಲರು ಸುದ್ದಿಗಾರರಿಗೆ ಬೆಳಗಾವಿಯಲ್ಲಿ ತಿಳಿಸಿದಂತೆ ಉತ್ತರ ಕರ್ನಾಟಕದವರೆಲ್ಲರೂ ಒಗ್ಗಟ್ಟಾಗಿ ಬೆಂಬಲಿಸಿದ್ದರೆ ಹುಬ್ಬಳ್ಳಿ-ಧಾರವಾಡದಲ್ಲಿ ಪೀಠ ಸ್ಥಾಪನೆ ಹೆಚ್ಚು ವಿಳಂಬ-ವಿವಾದಗಳಿಲ್ಲದೆ ಸಾಧ್ಯವಾಗಬಹುದಿತ್ತು. ಕಲಬುರ್ಗಿ, ಬೆಳಗಾವಿ, ಬಿಜಾಪುರದವರೂ ಸಹ ಪೀಠ ತಮಗೆ ಬೇಕು ಎನ್ನುತ್ತಿರುವಾಗ ಸದ್ಯಕ್ಕೆ ಅದು ಯಾರಿಗೂ ಬೇಡ ಎಂಬ ಅಭಿಪ್ರಾಯ ಎದುರಾಗಿರಬಹುದು.

ಅಂತೆಯೇ, ರಾಜಕೀಯ ಇಚ್ಛಾಶಕ್ತಿಯ ಕೊರತೆಯ ನಿದರ್ಶನ ಇದು ಎಂಬ ಎಚ್.ಕೆ. ಪಾಟೀಲರ ಅನಿಸಿಕೆಯೂ ಸೂಕ್ತವೆನ್ನಿಸುತ್ತದೆ.

ಹಾಗಾದರೆ ಪೀಠ ಸ್ಥಾಪಿಸಲು ಕರ್ನಾಟಕ ಸರಕಾರ ಆಸಕ್ತವಾಗಿಲ್ಲವೇ ಎಂಬ ಪ್ರಶ್ನೆ ಪ್ರಸ್ತುತವಾಗುತ್ತದೆ. ವರ್ಷಗಳ ಅಂತರದಲ್ಲಿ ತಿಂಗಳುಗಟ್ಟಲೆ ಆಂದೋಲನ ನಡೆಯುತ್ತಿದ್ದರೂ ರಾಜ್ಯ ಸರಕಾರ ಮೂಕಪ್ರೇಕ್ಷಕನಾಗಿತ್ತೇ ಎಂದು ಪ್ರಶ್ನಿಸಬೇಕಾಗುತ್ತದೆ. ಯಾವದೇ ರಾಜ್ಯದಲ್ಲಿಯ ಶ್ರೇಷ್ಠ ನ್ಯಾಯಾಲಯದ

## ಚೆಂಡು ಯಾರ ಅಂಗಳದಲ್ಲಿ ?

ಹಿಂದಿನ ಮುಖ್ಯ ನ್ಯಾಯಮೂರ್ತಿ ಡಿ.ಎಂ.ಚಂದ್ರಶೇಖರ್‌ರವರು ಧಾರವಾಡದಲ್ಲಿ ಪೀಠ ಸ್ಥಾಪನೆಗೆ ಶಿಫಾರಸು ಮಾಡಿದ್ದರು. ಆಗ ಅದು ಕೈಗೂಡಲಿಲ್ಲ. ದೇವೇಗೌಡರ ಆಡಳಿತದಲ್ಲಿ ಶಾಸಕಾಂಗದ ಸರ್ವಾನುಮತದ ಶಿಫಾರಸಿಗೆ ಶ್ರೇಷ್ಠ ನ್ಯಾಯಾಲಯದ ಪ್ರತಿಕ್ರಿಯೆ ಪ್ರತಿಕೂಲ. ಪೀಠದ ಅವಶ್ಯಕತೆ ಇಲ್ಲ; ಅಲ್ಲದೆ ಆಡಳಿತಾತ್ಮಕವಾಗಿಯೂ ಇದು ಸರಿಯಾದ ಕ್ರಮವಲ್ಲ ಎಂಬುದು ಅದರ ಅಭಿಪ್ರಾಯ. ನಂತರ ಸಾರ್ವಜನಿಕ ಒತ್ತಡದ ಹಿನ್ನೆಲೆಯಲ್ಲಿ ಆಗ ದೇವೇಗೌಡರೂ ಈಗ ಪಟೇಲರೂ ವಿಷಯವನ್ನು ಪುನರ್ ಪರಿಶೀಲಿಸಲು ಕೋರಿಕೆ ಸಲ್ಲಿಸುವ ಮೂಲಕ ಸರಕಾರದ ಕಾತರತೆಯ ಪ್ರದರ್ಶನ. ಹೈಕೋರ್ಟಿನಿಂದ ವಿವರ ಕೇಳಿ ಪುನಃ ಪತ್ರ. ಸಮಗ್ರ ಮಾಹಿತಿ ಪೂರೈಕೆಯೊಂದಿಗೆ ಹುಬ್ಬಳ್ಳಿ-ಧಾರವಾಡದಲ್ಲಿ ಪೀಠ ಸ್ಥಾಪಿಸಲು ಶ್ರೇಷ್ಠ ನ್ಯಾಯಾಮೂರ್ತಿಗಳಿಗೆ ರಾಜ್ಯ ಸರಕಾರದ ಶಿಫಾರಸು. ಈ ಮಧ್ಯೆ ಮಹಾನಗರದಲ್ಲಿ ಪೀಠ ಸ್ಥಾಪನೆಗಾಗಿ ಜಿಲ್ಲಾಡಳಿತ ಸಕಲ ಪೂರ್ವಭಾವಿ ಸಿದ್ಧತೆ ಮಾಡಿಕೊಂಡಿದೆಯೆಂದು ಧಾರವಾಡ ಜಿಲ್ಲಾಧಿಕಾರಿಗಳಿಂದ ಪ್ರಕಟಣೆ. ಚೆಂಡು ಈಗ ಶ್ರೇಷ್ಠ ನ್ಯಾಯಾಲಯದ ಅಂಗಳದಲ್ಲಿ. ತನ್ನ ಪಾಲಿನ ಕರ್ತವ್ಯ ಸರಕಾರ ಪೂರೈಸಿದೆಯೆಂದು ಸಂಬಂಧಿಸಿದವರು ಕೈತೊಳೆದುಕೊಂಡಿದ್ದಾರೆ.

## ವರದಕ್ಷಿಣೆ

ಹೆಣ್ಣು ಹೆತ್ತವರ
ಮಾರಾಟ ಮಳಿಗೆಯಲ್ಲಿ
ಖರೀದಿಯಾದ - ವರ
ಪಡೆದು ಕೊಳ್ಳುವ
ಶುಲ್ಕ.

- ಜಗದೀಶ ಶ. ದುಧ್ಗಿ

ಪೀಠವನ್ನು ಆ ರಾಜ್ಯದ ಬೇರೆಡೆಗೆ ಸ್ಥಾಪಿಸಲು ಕೈಕೊಳ್ಳಬೇಕಾದ ಆಡಳಿತಾತ್ಮಕ ಕ್ರಮಸರಣಿ ಯಾವದು ಎಂಬುದು ಅನೇಕರಿಗೆ ತಿಳಿದಿಲ್ಲದಿರುವದೂ ತಪ್ಪು ಕಲ್ಪನೆ, ಅಪನಂಬಿಕೆಗಳಿಗೆ ಎಡೆ ಮಾಡಿದೆ.

''ಯಾವುದೇ ಭಾಗದಲ್ಲಿ ಶ್ರೇಷ್ಠ ನ್ಯಾಯಾಲಯದ ಪೀಠ ಸ್ಥಾಪನೆಗಾಗಿ ಬಂದ ಬೇಡಿಕೆಯನ್ನು ಆಮೂಲಾಗ್ರವಾಗಿ ಪರಿಶೀಲಿಸಿ ಸಚಿವ ಸಂಪುಟ ನಿರ್ಣಯಿಸಬೇಕು. ಅಂಥ ನಿರ್ಣಯ ಶಾಸಕಾಂಗದಿಂದ ಅಂಗೀಕೃತವಾಗಬೇಕು. ತನ್ನ ಶಿಫಾರಸನ್ನು ರಾಜ್ಯ ಸರಕಾರ ಸಂಬಂಧಿಸಿದ ಶ್ರೇಷ್ಠ ನ್ಯಾಯಮೂರ್ತಿಗಳಿಗೆ ರವಾನಿಸಬೇಕು. ಅವರು ಪೀಠದ ಅವಶ್ಯಕತೆ, ಸ್ಥಳದ ಅರ್ಹತೆ, ಸ್ಥಳ ನಿರ್ಧಾರ ಕುರಿತು ತನಗೆ ಬೇಕಾದ ಮಾಹಿತಿಯನ್ನು ರಾಜ್ಯ ಸರಕಾರದಿಂದ ಪಡೆದು ಇತರ ಎಲ್ಲ ನ್ಯಾಯಾಧೀಶರೊಡನೆ ಸಮಾಲೋಚಿಸಿ ತನ್ನ ನಿರ್ಧಾರವನ್ನು ಬೇಡಿಕೆಯ ರೂಪದಲ್ಲಿ ಸರ್ವೋಚ್ಚ ನ್ಯಾಯಾಲಯಕ್ಕೆ ಸಲ್ಲಿಸಬೇಕು. ಸರ್ವೋಚ್ಚ ನ್ಯಾಯಾಲಯ ತನ್ನ ನಿರ್ಧಾರವನ್ನು ಕೇಂದ್ರ ಸರಕಾರಕ್ಕೆ ತಿಳಿಸಬೇಕು. ಈ ತೀರ್ಮಾನವನ್ನು ಅನುಷ್ಠಾನಗೊಳಿಸುವದು ಮಾತ್ರ ಕೇಂದ್ರದ ಕರ್ತವ್ಯ. ಮುಖ್ಯ ನ್ಯಾಯಮೂರ್ತಿಗಳ ಒಪ್ಪಿಗೆ ಪ್ರತಿಸಲದ ಪ್ರಸ್ತಾವನೆಗೂ ಅಗತ್ಯ. ಏಕೆಂದರೆ ಈ ಪೀಠಗಳಿಗೆ ನ್ಯಾಯಾಧೀಶರನ್ನು ನೇಮಕ ಮಾಡುವದು ಶ್ರೇಷ್ಠ ನ್ಯಾಯಾಲಯಕ್ಕೆ ಸೇರಿದ ವಿಚಾರ''

ಎಂಬ ವಿವರಣೆ ಮುಖ್ಯ ಮಂತ್ರಿಗಳಿಂದ ಬಂದಿದೆ.

ಕರ್ನಾಟಕ ಸರಕಾರ ಈ ವಿಷಯದಲ್ಲಿ ಇಲ್ಲಿಯವರೆಗೆ ಯಾವ ಪಾತ್ರ ನಿರ್ವಹಿಸಿದೆ?

ರಾಜ್ಯದ ಸಂಸತ್ ಸದಸ್ಯರ ಸಭೆಯಲ್ಲಿ, ಪೀಠ ಸ್ಥಾಪನೆಗೆ ತಮ್ಮ ವಿರೋಧವಿಲ್ಲವೆಂದು ಮುಖ್ಯಮಂತ್ರಿ ಸ್ಪಷ್ಟಪಡಿಸಿದ್ದಾರೆ. ಆದರೆ ರಾಜಧಾನಿಗೆ ಹೊರತಾಗಿ ಬೇರೆಡೆ ಪೀಠ ಸ್ಥಾಪಿಸಿದರೆ ಕಾರ್ಯನಿರ್ವಹಣೆಯ ಗುಣಮಟ್ಟ ಕಡಿಮೆ ಆಗುತ್ತದೆಯೆಂದು ಅವರಿಂದಲೇ ಅಪಸ್ವರ.

ಶ್ರೇಷ್ಠ ನ್ಯಾಯಾಲಯದ ಪೀಠ ಸ್ಥಾಪನಾ ದಿನವನ್ನು ಕರಗದಂತೆ ಆಚರಿಸಬೇಕೆಂದು ಉತ್ತರ ಕರ್ನಾಟಕೀಯರೆಲ್ಲರೂ ತುದಿಗಾಲ ಮೇಲೆ ನಿಂತಿದ್ದರು. ಆದರೆ ತಾಟಿಗೆ ಬಂದ ತುತ್ತು ತುಟಿಗೆ ತಲುಪಲಿಲ್ಲ! 'ಪೀಠ' ಎಂಬ ಕಿರಿಯ ಕರಗದಲ್ಲಿ ಎಲ್ಲಿ ಕರಗಿ ಹೋದ? ಕರಗ ಅಥವಾ ಜಾತ್ರೆಯೆಂದ ಮೇಲೆ ಅಲ್ಲಿ ತಿಂಡಿ-ಪೋತರು, ಅಸಭ್ಯರು, ಶ್ರೀಮಂತಿಕೆ ಪ್ರದರ್ಶನಕಾರರು, ವ್ಯವಹಾರಸ್ಥರು, ಜೇಬು ಕಳ್ಳರು, ಸದ್ದುಶೂರರು, ಭಾಷಣ ವೀರರು ಸದ್ಭಕ್ತರು, ಶ್ರದ್ಧಾಳುಗಳೊಡನೆ ಸೇರಿ ತಮ್ಮ ತಮ್ಮ ಬೇಳೆ ಬೇಯಿಸಿಕೊಳ್ಳುತ್ತಿರುತ್ತಾರೆ. 'ಪೀಠ'ಎಲ್ಲಿ ಕಾಣೆಯಾದನೋ ಎಂದು ದಿಗ್ಭ್ರಮೆಗೊಂಡಾಗಲೇ.....

''ಯಾವ ರಾಜ್ಯದಿಂದಲೂ ಈ ತನಕ ಕೇಂದ್ರಕ್ಕೆ, ಶ್ರೇಷ್ಠ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರೊಡನೆ ಚರ್ಚಿಸಿ ಅಖೈರು ಗೊಳಿಸಿದ ನಿರ್ದಿಷ್ಟ ಹಾಗೂ ಪರಿಪೂರ್ಣ ಪ್ರಸ್ತಾವನೆ ಬಂದಿಲ್ಲ''.

ಎಂದು ಕೇಂದ್ರ ಕಾನೂನು ಸಚಿವರು ಜನತಾದಳದ ಬಿ.ಎಲ್.ಶಂಕರ್‌ರವರಿಗೆ ಲೋಕಸಭೆಯಲ್ಲಿ ತಿಳಿಸಿದ್ದಾರೆ.

ಇದಕ್ಕೆ ವ್ಯಕ್ತಿ, ಸಂಘ-ಸಂಸ್ಥೆಗಳಿಂದ ಪುನಃ ಪ್ರತಿಕ್ರಿಯೆ ಪ್ರಾರಂಭ. ಉತ್ತರ ಕರ್ನಾಟಕ ಅಭಿವೃದ್ಧಿ ಪರ ಹೋರಾಟ ವೇದಿಕೆಯ ಆಶ್ರಯದಲ್ಲಿ ಬೆಳಗಾವಿಯ ಜಿಲ್ಲಾ ವಿಕಾಸ ವೇದಿಕೆಯ ಪಾಲುಗಾರಿಕೆಯಲ್ಲಿ ೨೮.೩.೯೭ ರಂದು ಬೆಳಗಾವಿಯಲ್ಲಿ ಏರ್ಪಟ್ಟ ಉತ್ತರ ಕರ್ನಾಟಕ ಸಮಾವೇಶದಲ್ಲಿ ಉತ್ತರ ಕರ್ನಾಟಕದಲ್ಲಿ ಪೀಠ ಸ್ಥಾಪನೆಯ ಬೇಡಿಕೆಯನ್ನೊಳಗೊಂಡು ೧೫ ಗೊತ್ತುವಳಿಗಳ ಸ್ವೀಕಾರ. ಅನ್ಯಾಯ ಸರಿಪಡಿಸಲು ಕ್ರಮಕೈಕೊಳ್ಳದಿದ್ದರೆ ೧೯೯೭ರ ರಾಜ್ಯೋತ್ಸವ ದಿನದಿಂದ ಉಗ್ರ ಹೋರಾಟ ಪ್ರಾರಂಭಿಸುವ ಎಚ್ಚರಿಕೆ. ಉತ್ತರ ಕರ್ನಾಟಕ ಜನತೆಯ ಮುಖವಾಣಿ **'ಸಂಯುಕ್ತ ಕರ್ನಾಟಕ'**ದಿಂದ ಬೇಡಿಕೆ ಸಮರ್ಥಿಸಿ ಅಗ್ರಲೇಖ.

ಈ ಬೆಳವಣಿಗೆಗಳಿಂದ ಒಂದು ಮಾತು ಖಚಿತ. ಉತ್ತರ ಕರ್ನಾಟಕದ ಬೇಡಿಕೆಗಳ ಬಗೆಗೆ ದಿವ್ಯ ನಿರ್ಲಕ್ಷ್ಯ, ಸರಕಾರದ ಜಾಣ ಕಿವುಡು, ಜನರ ಭಾವನೆಗಳೊಡನೆ ಉಪೇಕ್ಷೆ-ಚೆಲ್ಲಾಟ, ಜನಪ್ರತಿನಿಧಿಗಳ ನಿರಾಸಕ್ತಿ, ಪಕ್ಷಾತೀತ ಮನೋಭಾವದ ಅಭಾವ ಇವೆಲ್ಲ ವಿಷಯವನ್ನಾವರಿಸಿವೆ.

ಮಹಾನಗರದ ನ್ಯಾಯಾವಾದಿ **ವೆಂಕಟೇಶ ಅಥಣಿ**ಯವರ ಪ್ರಕಾರ ಪೀಠ ದೊರಕಿಸುವಲ್ಲಿ ವೈಫಲ್ಯಕ್ಕೆ ಕಾರಣಗಳು :

ಭಿನ್ನ ಭಿನ್ನ ಬೇಡಿಕೆ ಮಂಡಿಸಲು ಪ್ರಚೋದನೆ; ಶ್ರೇಷ್ಠ ನ್ಯಾಯಾಲಯದ ಸದ್ಯದ ನ್ಯಾಯವಾದಿಗಳ ವೃತ್ತಿ ಭದ್ರತೆಯ ಬಗೆಗೆ ಕಾಣದ ಕೈಗಳ ಕಾಳಜಿ; ಇಚ್ಛಾಶಕ್ತಿಯ ಕೊರತೆ; ಹೋರಾಟದ ಸ್ವರೂಪ ಸರಕಾರದ ಅಳಿವು-ಉಳಿವು ನಿರ್ಧರಿಸುವಂತಹದಲ್ಲದಿರುವುದು; ಇತ್ಯಾದಿ''.

ಪೀಠ ದಕ್ಕದಿದ್ದರೂ ತೊಂದರೆಯಿಲ್ಲ, ದೈನಂದಿನ ಜನಜೀವನಕ್ಕೆ ಹಾನಿಕಾರಕವಾದ ಆಸ್ತಿ-ಪಾಸ್ತಿ ನಾಶ, ಉಪವಾಸ ಸತ್ಯಾಗ್ರಹ, ಮುಷ್ಕರ-ಮೆರವಣಿಗೆ, ಬಂದ್-ಮುತ್ತಿಗೆಗಳು, ರಸ್ತೆ-ರೈಲು ತಡೆ, ಬಹಿಷ್ಕಾರ ನಮಗೆ ಬೇಡವೇ ಬೇಡ ಎಂದು ಸಾಮಾನ್ಯ ನಾಗರಿಕನ ಕಳಕಳಿಯ ಅನಿಸಿಕೆ. ಗುಡ್ಡತೋಡಿಯಾಯಿತು; ಆದರೆ ಇಲಿ ಮಾತ್ರ ಹೊರಗೆ ಬರಲಿಲ್ಲ ಎಂಬುದು ಅವನ ಗಮನಕ್ಕೆ ಬಂದಿದೆ.

ವಿಷಯವನ್ನು ಇಷ್ಟು ದೀರ್ಘವಾಗಿ ಮೆಲುಕು ಹಾಕಿದ ನಂತರ ನಿರಾಶೆಯ ಕತ್ತಲೆಯಲ್ಲಿ ತಡಕಾಡುತ್ತಿರುವ ಅಸಹಾಯಕ ಬಡ ಕಕ್ಷಿದಾರನ ಬಗ್ಗೆ ಚಿಂತಿಸುತ್ತಿರುವಾಗಲೇ, ಕಂಡಿತೊಂದು ಹೊಸ ಆಶಾಕಿರಣ;

ಹುಬ್ಬಳ್ಳಿಯಲ್ಲಿ ಕರ್ನಾಟಕ ಹೈಕೋರ್ಟಿನ ಪೀಠವನ್ನು ಸ್ಥಾಪಿಸಬೇಕೆಂದು ಆಗ್ರಹಿಸುವ ಖಾಸಗಿ ಸದಸ್ಯರ ವಿಧೇಯಕವನ್ನು ರಾಜ್ಯ ಸಭೆಯಲ್ಲಿ ಕಾಂಗ್ರೆಸ್ ಸಂಸದ ಎಸ್.ಎಂ. ಕೃಷ್ಣರವರು ಮಂಡಿಸಿದರು.

ತಾಳಿದವ ಬಾಳುತ್ತಾನೋ ಹಾಳಾಗುತ್ತಾನೋ ಕಾಲವೇ ಉತ್ತರಿಸಬೇಕಷ್ಟೇ!



ಮಧು ಬಗರೆ
ಮಧು ಫೋಟೋ ಸ್ಟುಡಿಯೋ
ಹರಪನಹಳ್ಳಿ

# ಬಿಜಾಪುರದ ಬೆಡಗಿನ ಕಟ್ಟಡಗಳು





ಬಾರಾ ಕಮಾನು : ಅಜ್ಜ ಇಮ್ಮಡಿ ಇಬ್ರಾಹಿಂ ಕಟ್ಟಿಸಿದ ಇಬ್ರಾಹಿಂ ರೋಜಾ ಹಾಗೂ ಅಪ್ಪ ಸುಲ್ತಾನ್ ಮಹ್ಮದ್ ಕಟ್ಟಿಸಿದ ಗೋಳಗುಮ್ಮಟ ಮೀರಿಸುವಂತಹ ಕಟ್ಟಡ ನಿರ್ಮಿಸುವ ಇರಾದೆ ಇಮ್ಮಡಿ ಆಲಿಯದಾಗಿತ್ತು. ಮೊಮ್ಮಗನ ನನಸಾಗದ ಕನಸು ಹೀಗೆ ಮೂಳೆಗಳ ಹಂದರವಾಗಿ ನಿಂತಿದೆ.





ಬಿಜಾಪುರದ ಆದಿಲ್‌ಶಾಹಿ ದೊರೆ ಸುಲ್ತಾನ್ ಮಹ್ಮದ್ ಕಟ್ಟಿಸಿದ ಇಬ್ರಾಹಿಂ ರೋಜಾ. ವಿವಿಧ ಕಮಾನುಗಳನ್ನೊಳಗೊಂಡ ಒಂದು ಗುಮ್ಮಟ ಹಾಗೂ ಇನ್ನೊಂದು ಬುರುಜಿನ ಕಟ್ಟಡ ಇಲ್ಲಿದೆ. ಇದರ ನಡುವಿರುವ ಪ್ರವೇಶದ್ವಾರ ಅತಿ ಚಿಕ್ಕದು; ನಯವಾಗಿ ತಾಗಿ ಬಾಗಿ ಒಳಬರಲು ಸೂಚಿಸುತ್ತದೆ.



ಜಾಮಿಯ ಮಸೀದೆ :
ಆದಿಲ್‌ಶಾಹಿ ಅರಸರು, ಅವರ
ಪರಿವಾರ-ಸಚಿವ ಬಳಗದವರು
ಇಲ್ಲಿ ಪ್ರಾರ್ಥನೆ ಹಾಗೂ ದೇವರ
ಕಾರ್ಯಗಳನ್ನು ನಡೆಸುತ್ತಿದ್ದರೆಂದು
ಹೇಳಲಾಗುತ್ತಿದೆ. ಈ ಮಸೀದೆಯ
ಪರ್ಷಿಯನ್ ಮಾದರಿಯನ್ನು
ಹೋಲುತ್ತದೆ. ಕಟ್ಟಡದ ಎದುರಿ
ಪುಟ್ಟ ತೋಟ, ಸಾಂಪ್ರದಾಯಿಕ
ಕಾರಂಜಿ ಹಾಗೂ ನೀರಿನ
ಸಂಗ್ರಹದ ಗುರ್ತುಗಳಿವೆ.





ಹಜರತ್ ಬಾಲ್ (ಆಸಾರ್ ಮಹಲ್ ) : ಅತ್ಯಂತ ಎತ್ತರದ ಸೀಲಿಂಗ್ ಇರುವ ಈ ಬೃಹತ್ ಕಟ್ಟಡವು ಅದ್ಭುತ ಕಲೆಗಾರಿಕೆಯನ್ನು ಕಣ್ಮುಂದೆ ತರುತ್ತದೆ.



ಭಂಗೀ ಮಹಲ್ : ಈ ಕಟ್ಟಡದ ಭಂಗಿ ಅನೇಕ ವೈಚಿತ್ರ್ಯಗಳಿಂದ ಕೂಡಿದೆ. ದೂ
ಬರು-ಹೋಗುಗಳನ್ನು ಗುರ್ತಿಸಲು ಈ ಕಟ್ಟಡದ ಮೇಲ್ಮಾಳಿಗೆಯಲ್ಲಿ ಸೌಲಭ್ಯ




## ಲವ್‌ಲವಿಕೆ

(ನೈಜ ಪ್ರೇಮ ಪತ್ರಗಳ ಅಪೂರ್ವ ಸಂಕಲನ)
ಸಂಪಾದಕರು:
**ದಮ್ಮೂರು ಮಲ್ಲಿಕಾರ್ಜುನ**
**ವೀರೇಂದ್ರ ರಾವಿಹಾಳ್**
ಪ್ರ: ಸ್ವಾತಿ ಪ್ರಕಾಶನ, ತೆಕ್ಕಲಕೋಟೆ, ಬಳ್ಳಾರಿ ಜಿಲ್ಲೆ. ಮುದ್ರಣ: ೧೯೯೭, ಪುಟ: ೧೧೬, ಬೆಲೆ: ರೂ.೪೦/-

**ಪ್ರೇ**ಮವೆಂಬುದು ಅಕ್ಷರದಲ್ಲಿ, ಸಂಜ್ಞೆಗಳಲ್ಲಿ, ಸಂಕೇತಗಳಲ್ಲಿ, ಹಾಡಿನಲ್ಲಿ, ಚಿತ್ರದಲ್ಲಿ ಅಪ್ಪುಗೆಯಲ್ಲಿ, ಮೈಥುನದಲ್ಲಿ, ವೀರ್ಯದಲ್ಲಿ ಹರಿದುಹೋಗಿ ಮುಗಿಯುವಂತಹ ಸರಕಲ್ಲವಾದ್ದರಿಂದ, ಎಲ್ಲ ಮುಗಿದ ಮೇಲೂ ಪ್ರೇಮಿಯಾದವನಲ್ಲಿ ಮತ್ತೇನೋ ಒಂದಿಷ್ಟು ಬರೆಯಲು ಉಳಿದಿರುತ್ತದೆ!

ಹೀಗಾಗಿಯೇ ಈ ಜಗತ್ತಿನಲ್ಲಿ ಕೋಟ್ಯಂತರ ಜನ ಬರೆದ ನಂತರವೂ ಬರಿದಾಗದೆ, ಹಳತಾಗದೆ, ಫ್ರೆಶ್ ಆಗಿ ಉಳಿದ ಏಕೈಕ ಸಾಹಿತ್ಯ-ಪ್ರೇಮ ಪತ್ರ. ಸಿರುಗುಪ್ಪೆಯ ಈ ಹುಡುಗರು ಅಲ್ಲಲ್ಲಿ ಕಲೆ ಹಾಕಿ ಪ್ರಕಟಿಸುತ್ತಿರುವ 'ಲವ್‌ಲವಿಕೆ' ಕೂಡ ಆ ನಿರಂತರ ಸಾಹಿತ್ಯದ ಒಂದು ಚಿಕ್ಕ ಬಿಂದುವೇ ಹೊರತು-ಅದೇ ಕೊನೆಯಲ್ಲ.

ಎಂಥ ಸಾಮಾನ್ಯನನ್ನು ಕವಿಯನ್ನಾಗಿಸುವ, ಕನಸುಗಾರನನ್ನಾಗಿಸುವ 'ಪ್ರೇಮ'ವೆಂಬ ದಿವ್ಯ ಚೇತನಕ್ಕೆ ಇಂತಹ ಸಂಕಲನಗಳು ನಾವು ಚೆಲ್ಲಬಹುದಾದ ಪ್ರೀತಿಯ ಸಲಾಮುಗಳಾಗುತ್ತವೆ. ದ್ವೇಷದ ಬಗ್ಗೆ, ಯುದ್ಧದ ಬಗ್ಗೆ, ರೋಗದ ಬಗ್ಗೆ, ದುಡ್ಡಿನ ಬಗ್ಗೆ ದಿನಕ್ಕೆಂಟು ಪುಸ್ತಕ ಹೊರಡುತ್ತಿರುವ ಈ ದರಿದ್ರ ಸಮಾಜದಲ್ಲಿ ಪ್ರೇಮದ ಬಗ್ಗೆ, ಪ್ರೇಮ ಪತ್ರದ ಬಗ್ಗೆ ಒಂದು ಸಂಕಲನ ಹೊರತರುತ್ತಿರುವ ಮಿತ್ರರು-ದೂರದಿಂದ ನೋಡಿದಾಗ ಹುಚ್ಚರಂತೆ ಕಂಡರೂ, ಅವರ ಈ ಹುಚ್ಚು, ಹಿರಿಯ ಹುಚ್ಚನಾದ ನನಗೆ ಆಪ್ಯಾಯಮಾನವಾಗಿ ಕಾಣುತ್ತಿದೆ. ಹಾಗೆ ನಿಮಗೂ ಕಂಡರೆ ಈ ಪುಸ್ತಕ ಸಾರ್ಥಕವಾದೀತು.

**- ರವಿ ಬೆಳಗೆರೆ**

## ಪ್ರತೀಕಗಳಾಗುವುದಿಲ್ಲ ಗೆಳೆಯ

(ಕವನ ಸಂಕಲನ)
ಲೇ: **ಡಿ.ಎಂ. ನದಾಫ**
ಪ್ರ: ಅಭಿವ್ಯಕ್ತಿ ಪ್ರಕಾಶನ, ಅಫಜಲಪೂರ-೧ ಕಲಬುರ್ಗಿ ಜಿಲ್ಲೆ ಮುದ್ರಣ : ೧೯೯೬ ಪುಟ: ೫೩ ಬೆಲೆ ರೂ.೨೦

**ಹ**ಕೀಕತ್ತುಗಳ ವಾಸ್ತವ ಸ್ಪರ್ಷದ ಬುನಾದಿಯಿಂದಲೇ ಪ್ರಾರಂಭವಾಗುವ ಗೆಳೆಯ ಡಿ.ಎಂ. ನದಾಫ ಅವರ ಈ ಕವನ ಸಂಕಲನದಲ್ಲಿ ಕನ್ನಡದ ಬಂಡಾಯ ಕಾವ್ಯ ಕೇವಲ ಆವೇಶ-ಆಕ್ರೋಶಗಳ ಹಂತವನ್ನು ಮೀರಿ ಪಡೆದ ಒಂದು ಬಗೆಯ ''ಮಾಗುವಿಕೆ''ಯನ್ನು ಸ್ಪಷ್ಟವಾಗಿ ಸೂಚಿಸುವ ಅನೇಕ ರಚನೆಗಳಿವೆ. ನದಾಫರ ಅಭಿವ್ಯಕ್ತಿಗಳು ಅವರ ಅನುಭವದ ಕಕ್ಷೆ ಮೀರಿ ಹೋಗುವದಿಲ್ಲವೆಂಬುದೇ ಈ ಸಂಕಲನದ ವೈಶಿಷ್ಟ್ಯ. ಬದುಕಿನ ವೈಷಮ್ಯಗಳ ಬಗ್ಗೆ ಆಳದ ನೋವು ಹತಾಶೆಗಳಿದ್ದರೂ, ಶೂನ್ಯಪಥದ ಗಾಣದೆತ್ತಿನ ಸುತ್ತುವಿಕೆ ನಿರರ್ಥಕ ಎಂದು ಗೊತ್ತಿದ್ದರೂ,

ಶಕ್ತಿ ತುಂಬಿ ಸಿಡಿದೆದ್ದೆಯಾದರೆ
ಉರುಳುವ ಉಲ್ಕೆಯಂತೆ......

ಎಂಬ ಆಶಾವಾದವೂ ಇದೆ.

ಬಹುತೇಕ ಕವನಗಳು ಏಕತಾನದಲ್ಲಿ, ವಾಚ್ಯದಲ್ಲಿ ಕೊರಗುತ್ತಿದ್ದರೂ ನಮ್ಮ ನೆಲದ ಸುಧಾರಣೆ, ಕಾಡು ಹುಡುಗಿಯ ಕವಿತೆ, ಕಾಗೆ ಕೋಗಿಲೆಯರ ಕತೆ, ಸಾಯದವನೊಬ್ಬ ಸತ್ತಾಗ, ಪ್ರತೀಕಗಳಾಗುವದಿಲ್ಲ ಗೆಳೆಯ-ಮುಂತಾದ ರಚನೆಗಳು ಗಟ್ಟಿ ಪಿಂಡಗಳು. ಮುಂದಿನ ಸಂಕಲನಗಳಲ್ಲಿ ನದಾಫರ ಈ ಬಗೆಯ ಕವನಗಳು ಹೆಚ್ಚಿನ ಸಂಖ್ಯೆಯಲ್ಲಿ ಇರಲಿ ಅಂತ ಹಾರೈಸುವೆ.

**- ಚಂದ್ರಶೇಖರ ಪಾಟೀಲ**

## ಸಗರನಾಡ ಸಿರಿ

(ಲೇಖನಗಳು)
ಲೇ: **ಡಿ.ಎನ್.ಅಕ್ಕಿ**
ಪ್ರ: ಕವಿಕುಂಚ ಪ್ರಕಾಶನ, ಗೋಗಿ-೯, ಶಹಾಪುರ ತಾಲೂಕು, ಕುಲಬುರ್ಗಿ ಜಿಲ್ಲೆ, ಮುದ್ರಣ : ೧೯೯೬, ಪುಟ : ೧೦೨ ಬೆಲೆ: ರೂ.೬೦/-

**ಪ್ರ**ಸ್ತುತ ಗ್ರಂಥವಾದ 'ಸಗರ ನಾಡ ಸಿರಿ'ಯು ಅಕ್ಕಿಯವರ ಶೋಧನ ವಿಧಾನದ ಒಂದು ಫಸಲು, ಮೊದಲ ಬೀಡು. ಇದರಲ್ಲಿ ಅವರ ಸ್ವಂತ ಕ್ಷೇತ್ರಕಾರ್ಯದ ಫಲವಾಗಿ ಸಿದ್ಧವಾದ ಶೋಧನ ಲೇಖನಗಳಿವೆ. ಸ್ವಗ್ರಾಮವಾದ ಗೋಗಿಯ ಗತಕಾಲದ ಇತಿಹಾಸ ಸಂಪುಟದಲ್ಲಿ ಸೇರಲರ್ಹವಾದ ಸ್ಥಳನಾಮ ನಿಷ್ಪತ್ತಿ, ಬಸದಿಯ ವಾಸ್ತು-ಶಿಲ್ಪ ಸ್ವರೂಪ, ಜಿನರ ಬಿಂಬಗಳ ಹಾಗೂ ಜಿನಶಾಸನ ದೇವತೆಗಳ ಶಿಲ್ಪದ ವಿಶಿಷ್ಟತೆ - ಇಷ್ಟನ್ನೂ ಎರಡು ಪುಟಗಳಲ್ಲಿ ತಿಳಿಸಲಾಗಿದೆ. ಊರೊಳಗಿನ ಜಿನಮಂದಿರವನ್ನು ಪರಿಚಯಿಸಿ, ಅದರ ಎರಡನೆಯ ಮೆಟ್ಟಿಲು ಹತ್ತಿದಹಾಗೆ, ಊರಿಂದ ನೈಋತ್ಯಕ್ಕಿರುವ ಕಿರುಬೆಟ್ಟ ಚಾರಣಗಿರಿಯ ನಿಸರ್ಗ ಪರಿಸರ, ಗುಹೆ, ತೀರ್ಥಂಕರನ ಉಬ್ಬುಶಿಲ್ಪ, ಚರಣ, ಕಮಂಡಲ,ಪಿಂಛ - ಇವುಗಳ ಶಿಲ್ಪವನ್ನು ಪರಿಚಯಿಸಲಾಗಿದೆ. ಮೂರನೆಯ ಟಿಪ್ಪಣದಲ್ಲಿ ಬಹುಮನಿ ಹಾಗೂ ಆದಿಲ್‌ಶಾಹಿ ಅರಸರ ಕಾಲದ ಅದ್ಭುತ ಕಟ್ಟಡಗಳ ಹಿನ್ನಲೆ ಮತ್ತು ಮಹತ್ವವನ್ನು ಕಣ್ಣಿಗೆ ಕಟ್ಟುವ ರೀತಿಯಲ್ಲಿ ನಿರೂಪಿಸಿದ್ದಾರೆ.

**- ಹಂಪ ನಾಗರಾಜಯ್ಯ**

## ಅನಾಥ ಪಕ್ಷಿಯ ಕಲರವ

(ಲೇಖಕರ ಈವರೆಗಿನ ಸಮಗ್ರ ಕಥೆಗಳು)
ಲೇ: **ವೀರಭದ್ರ**
ಪ್ರ: ಲೋಹಿಯಾ ಪ್ರಕಾಶನ, 'ಕ್ಷಿತಿಜ', ಕಪ್ಪಗಲ್ಲು ರಸ್ತೆ, ಗಾಂಧಿನಗರ, ಬಳ್ಳಾರಿ-೩. ಮುದ್ರಣ : ೧೯೯೭, ಪುಟ : ೩೭೪ ಬೆಲೆ: ರೂ. ೧೨೫

**ಕ**ನ್ನಡ ಸಣ್ಣಕತೆಯನ್ನು ಬೆಳೆಸಿದ ಮಾಸ್ತಿ, ಆನಂದ, ಕುವೆಂಪು, ಚದುರಂಗ, ಕಟ್ಟೀಮನಿ, ಲಂಕೇಶ್, ಅನಂತಮೂರ್ತಿ, ಯಶವಂತ ಚಿತ್ತಾಲ, ರಾಜಶೇಖರ ನೀರಮಾನ್ವಿ, ನಾಗವಾರ, ದೇವನೂರು ಮಹಾದೇವರಷ್ಟೇ ಮುಖ್ಯರಾದವರು 'ವೀರಭದ್ರ'. ಅರುವತ್ತರ ದಶಕದಲ್ಲಿ ನವ್ಯರು ಕನ್ನಡ ಸಣ್ಣಕಥೆಯ

ಅಂಗಳವನ್ನು ಆಕ್ರಮಿಸಿಕೊಂಡಿದ್ದಾಗ, ವೀರಭದ್ರರ ಕಥೆಗಳು ಕನ್ನಡ ಕಥನ ರೀತಿಯಲ್ಲಿ ಇನ್ನೂ ವಿಶಿಷ್ಟವಾದ ಕಥನ ವಿಧಾನವಿದೆ ಎಂಬುದನ್ನು ತೋರಿಸಿಕೊಟ್ಟವು. ಇವರ 'ಅನಾಥ ಪಕ್ಷಿಯ ಕೃಷ್ಣಪಕ್ಷ'ವಂತೂ, ಗ್ರಾಮೀಣ ಭಾರತದ ನನ್ನಂಥವರ ಹೃದಯಗಳನ್ನು ಸಂಪೂರ್ಣ ಸೂರೆ ಗೊಂಡಿತು. ಆಗಲೂ, ಈಗಲೂ; ಕಥೆಗಾರರ ಕಥೆಯಾಗಿ, ಹೃದಯವಂತ ಓದುಗರಿಗೆ ದಿವ್ಯ ಅಚ್ಚರಿಯಾಗಿ ಈ ಕಥೆ ನಿಂತಿದೆ.

ಬಹುಪಾಲು ಲೇಖಕರು ನಿರ್ಲಕ್ಷಿಸಿರುವ ಜನಸಾಮಾನ್ಯರಲ್ಲಿ ಕನಿಷ್ಠರಾದವರ ಬದುಕನ್ನು ತಮ್ಮ ಕ್ಷ-ಕಿರಣಗಳನ್ನೊಳಗೊಂಡ ಕಣ್ಣುಗಳ ಮೂಲಕ ಚಿತ್ರಿಸಿರುವ ವೀರಭದ್ರ; ಬದುಕಿನದಲ್ಲಿ ಬಹು ನೋವನ್ನುಂಡು, ಅಮೃತವನ್ನು ಲೋಕಕ್ಕೆ ನೀಡಿದವರು. ಇವರನ್ನು ಕಂಡರೆ ವಿಧಿ ತನ್ನ ನಾಗರ ಹೆಡೆಯನ್ನು ಇಳಿಸುತ್ತದೆ.

ವೀರಭದ್ರರ ಲೇಖನಿ ಕನ್ನಡ ಭಾಷೆಗೆ ಒಂದು ಹೊಸ ರೂಪವನ್ನೇ ನೀಡಿದೆ. ವೀರಭದ್ರತನ ಕನ್ನಡ ಕಥನಕಲೆ ಇರುವ ತನಕವೂ ಮೇಲ್ಪಂಕ್ತಿಯಲ್ಲಿ ಮೆರೆಯುತ್ತಿ ರುತ್ತದೆ.

ಈ ಸಮಗ್ರ ಸಂಕಲನವನ್ನು ಲೋಕ ಪ್ರೀತಿಯಿಂತ ಓದಿ ಚಿಂತಿಸಲಿ.

**- ಡಾ. ಬೆಸಗರಹಳ್ಳಿ ರಾಮಣ್ಣ**

## ತಮಂಧದ ಕೇಡು

(ಕಥಾ ಸಂಕಲನ)

ಲೇ: **ಅಮರೇಶ ನುಗಡೋಣಿ**

ಪ್ರ: ಕನ್ನಡ ಸಂಘ, ಕ್ರೈಸ್ತ ಕಾಲೇಜು, ಡಾ.ಎಂ.ಎಚ್.ಮರಿಗೌಡ ರಸ್ತೆ, ಬೆಂಗಳೂರು-೨೯, ಮುದ್ರಣ : ೧೯೯೭, ಪುಟ: ೨೧೪, ಬೆಲೆ: ರೂ ೬೦/-

**ಕ**ರ್ನಾಟಕದ ಮೂಲೆಮುಡುಕುಗಳಲ್ಲಿ ಅಜ್ಞಾತವಾಸ ಮಾಡುತ್ತಿರುವ ಸೃಜನ ಶೀಲತೆಯು ಇದೀಗ ಅಭಿವ್ಯಕ್ತಿಯ ಅವಕಾಶ, ಆತ್ಮವಿಶ್ವಾಸಗಳನ್ನು ಪಡೆಯುತ್ತಿದೆ. ರಾಯಚೂರು ಜಿಲ್ಲೆಯ, ಮಾನ್ವಿ ತಾಲೂಕಿನ ಚಿಕ್ಕಹಳ್ಳಿಯೊಂದು ಈ ಕಥೆಗಳಲ್ಲಿ ತನ್ನನ್ನು ತಾನೇ ಬರೆದುಕೊಳ್ಳುತ್ತಿದೆ. ಅಷ್ಟೇ ಅಲ್ಲ, ಸಾಮಾಜಿಕ ಪರಿವರ್ತನೆಯ ತಲ್ಲಣಗಳಲ್ಲಿ ಉರಿ-ಕಿಡಿಯಾಗುತ್ತಿರುವ, ಮಾಗುತ್ತಿರುವ

## ಲೇಖಕರ ಗಮನಕ್ಕೆ

*ಈ ಅಂಕಣದಲ್ಲಿ ಹೊಸ ಪ್ರಕಟಣೆಗಳ ವಿವರ ಪ್ರಕಟಿಸಲಾಗುವುದು. ಮಹತ್ವದ ಕೃತಿಗಳ ವಿಮರ್ಶೆಗೂ ಆಸ್ಪದವಿದೆ. ಇದಕ್ಕಾಗಿ ತಮ್ಮ ಇತ್ತೀಚಿನ ಪ್ರಕಟಣೆಗಳ ಎರಡು ಪ್ರತಿ ಕಳಿಸಿ.*

ಲಕ್ಷಾಂತರ ಹಳ್ಳಿಗಳಿಗೊಂದು ಮೂಲ ಮಾದರಿಯೇನೋ ಎನ್ನುವಷ್ಟು ದಿಟವಾಗಿ ಬರೆದುಕೊಳ್ಳುತ್ತಿದೆ. 'ತಂದೆ ತಾಯಿಗಳಿಗೆ ಕೊನೆಯ ಮಗುವಾಗಿ ಹುಟ್ಟಿದ ಕ್ಷಣದಿಂದ ಅಮ್ಮನ ಮೊಲೆಹಾಲು ಕುಡಿಯುತ್ತಲೆ' ತನ್ನೊಳಗೆ ತೆಗೆದುಕೊಂಡ ಗಂಡು-ಹೆಣ್ಣು ಗಳನ್ನು ಪ್ರೀತಿ, ಅನುಕಂಪಗಳ ಹೊಳೆಯಲ್ಲಿ ತೋಯಿಸಿ ಹೊರತರುವುದು ನುಗಡೋಣಿಯ ವರಿಗೆ ಸಾಧ್ಯವಾಗಿದೆ. ಮನುಷ್ಯನ ಒಳಗು-ಹೊರಗುಗಳ ಹಲವು ಮಗ್ಗುಲುಗಳನ್ನು ಅತ್ಯಂತ ನಿಷ್ಠುರವಾಗಿ ಶಿಲ್ಪಿಯಂತೆ ಕಟ್ಟಿಕೊಡು ವಾಗಲೂ, ಯಾವ ಪಾತ್ರವೂ ಅವರ ಪ್ರೀತಿಯಿಂದ ವಂಚಿತವಾಗುವುದಿಲ್ಲ. ಈ ಆರ್ದ್ರತೆ ಅವರ ಕಥೆಗಳ ಹೃದಯದಲ್ಲಿದೆ; ಅವರು ವಕೀಲರಾಗದಂತೆ ಕಾಪಾಡಿಕೊಂಡಿದೆ.

**- ಎಚ್.ಎಸ್.ರಾಘವೇಂದ್ರರಾವ್**

## ನಾಗರಖಂಡ-೨೦

(ಒಂದು ಅಧ್ಯಯನ)

ಲೇ: **ಡಾ. ಭೋಜರಾಜ ಬ. ಪಾಟೀಲ**

ಪ್ರ: ಮಲೆನಾಡು ವೀರಶೈವ ಅಧ್ಯಯನ ಸಂಸ್ಥೆ, ಶ್ರೀಜಗದ್ಗುರು ಮುರುಘರಾಜೇಂದ್ರ ಮಠ, ಆನಂದಪುರಂ-೧೨, ಮುದ್ರಣ : ೧೯೯೫, ಪುಟ: ೩೧೦, ಬೆಲೆ: ರೂ ೨೦೦/-

'**ನಾ**ಗರಖಂಡ' ಹೆಸರೇ ಸೂಚಿಸುವಂತೆ ನಾಗರ ಸಂಸ್ಕೃತಿಯ ಮುಖ್ಯ ಕೇಂದ್ರವಾಗಿದೆ. ಈಗಿರುವ ಹೆಸರಿನಿಂದ ಈ ಸಂಗತಿ ಖಚಿತವಾಗಿ ತಿಳಿಯುವುದರ ಜೊತೆಗೆ ಇಲ್ಲಿಯ ಶಾಸನಗಳು ಕೂಡ ನಾಗಧರ್ಮೀಯರು ಇಲ್ಲಿ ಪ್ರತ್ಯೇಕ ಅಸ್ತಿತ್ವ ಪಡೆದಿದ್ದರೆಂದು ತಿಳಿಸುತ್ತವೆ. ಮುಂದಿನವರು ಆ ಸಂಸ್ಕೃತಿಯ ನೆಲೆಗಳನ್ನು ನಾಶ ಮಾಡಿದರೆಂದು ಶಾಸನಗಳು ಕಂಠೋಕ್ತವಾಗಿ ಘೋಷಿಸುತ್ತವೆ. ಇಂತಹ ಧರ್ಮವೊಂದು ಇದ್ದ ಉಲ್ಲೇಖ ಭಾರತದ ಯಾವ ಶಾಸನದಲ್ಲಿಯೂ ಬಂದಿಲ್ಲ. ಸೌರರು, ಗಾಣ ಪತ್ಯರು, ಕೌಳರು ಮುಂತಾಗಿ ಹಲ ಮುಖ್ಯ ಮತಗಳವರು ಇದ್ದಂತೆಯೇ ನಾಗರೂ ಇದ್ದರೆಂಬ ಖಚಿತ ಪುರಾವೆ ಈ ನಾಡಿನಲ್ಲಿ ದೊರೆತಿರುವುದೊಂದು ಬಹುಮುಖ್ಯ ಸಂಗತಿ. ಇದರಂತೆ ಇಲ್ಲಿ ಸೂರ್ಯಾರಾಧನೆ, ಬಳರಿಯ ಆರಾಧನೆ, ಕೌಳಾರಾಧನೆ ಮುಂತಾದ ಅಪೂರ್ವ ಆರಾಧನಾ ಪಂಥಗಳ ಜೊತೆಗೆ ಜೈನ, ಶೈವ, ವೀರಶೈವ ಮತ್ತು ವೈಷ್ಣವ ಮೊದಲಾದ ಪ್ರಮುಖ ಮತಗಳೂ ಇಲ್ಲಿ ತಮ್ಮದೇ ಆದ ಪ್ರಭಾವ ಬೀರಿರುವುದು ಕಂಡುಬರುತ್ತದೆ. ಕುಬಟೂರು, ಬಂದಳಿಕೆ, ಕೋಣವತ್ತಿ, ಅಬ್ಬಲೂರು, ತಿಳಿವಳ್ಳಿ, ಚಿಕ್ಕಕೆರೆಯೂರು, ಅಗ್ರಹಾರ ಮುತ್ತಳ್ಳಿ ಮೊದಲಾದ ಎಡೆಗಳಲ್ಲಿ ನಮ್ಮ ಸಂಸ್ಕೃತಿಯ ವಿವಿಧ ಮುಖಗಳನ್ನು ಅಭಿವ್ಯಕ್ತಗೊಳಿಸುವ ಶಾಸನಗಳು, ದೇವಾಲಯ ಗಳು, ಶಿಲ್ಪಗಳು, ಮೂರ್ತಿಗಳು, ಪುರಾತನ ಕೆರೆಗಳು, ಹಾಳಾದ ಊರು ಕೋಟೆಗಳು ಮೊದಲಾದವು ಬಹು ಸಂಖ್ಯೆಯಲ್ಲಿ ಉಪಲಬ್ಧವಾಗಿವೆ. ಇಂತಹ ಹಲವಾರು ಅಪೂರ್ವ ಸಂಗತಿಗಳನ್ನು ಡಾ.ಭೋಜರಾಜ ಪಾಟೀಲ ಅವರು ಇದರಲ್ಲಿ ಕಳೆ ಹಾಕಿದ್ದಾರೆ. ಅವರು ಕ್ಷೇತ್ರಕಾರ್ಯದಲ್ಲಿ ಪತ್ತೆ ಮಾಡಿರುವ ಸುಮಾರು ೩೨ ಹೊಸ ಶಾಸನಗಳಿಂದ ಅನೇಕ ಐತಿಹಾಸಿಕ ಮಹತ್ವದ ಅಂಶಗಳು ಬೆಳಕಿಗೆ ಬಂದಿವೆ.

**- ಡಾ. ಎಂ.ಬಿ.ನೇಗಿನಹಾಳ**

# ಮದುವೆಯೋ? ಮಾರಣ ಹೋಮವೋ!

ಇಂದು ಮದುವೆ ಒಂದು ಪವಿತ್ರ ಬಂಧನವಲ್ಲ; ಅದೊಂದು ಬಗೆಯ ವ್ಯಾಪಾರಿ ಸಂಬಂಧ. ಹಣದ ದಾಹದಿಂದ ತಹತಹಿಸುವ ಗಂಡನ ಮನೆಯವರು ವರದಕ್ಷಿಣೆ ತಾರದ ಹೆಣ್ಣುಗಳನ್ನು ನಾನಾ ಹಾದಿಗಳ ಮೂಲಕ ಮಸಣಕ್ಕಟ್ಟುತ್ತಿರುವುದು ಕಣ್ಣೆದುರಿನ ಸತ್ಯ. ಗಂಡನಾಗಿ, ಅತ್ತೆಯಾಗಿ, ಮಾವನಾಗಿ, ಮೈದುನನಾಗಿ ತಮ್ಮ ಪ್ರೀತಿ ಪ್ರಕಟಿಸಬೇಕಾದವರೇ ರಾಕ್ಷಸರಾಗಿ ರಕ್ತ ಹೀರಲು ಕಾರಣವಾದರೂ ಏನು? ಅಂತಃಕರಣದ ಹೃದಯಗಳು ಮಾತನಾಡಬೇಕಾದ ಸಂದರ್ಭದಲ್ಲಿ ವ್ಯಾಪಾರಿ ಮಿದುಳುಗಳು ಮೂಗು ತೂರಿಸುತ್ತಿರುವುದೇ ಎಲ್ಲ ಅವಾಂತರಗಳ ಮೂಲ! ಜನಪ್ರಿಯ ಕಾದಂಬರಿಗಾರ್ತಿ ಉಷಾ ನವರತ್ನರಾಮ್ ಅವರು ''ಬಿಸಿಲ ಬದುಕು'' ಓದುಗರಿಗಾಗಿಯೇ ಸಿದ್ಧಪಡಿಸಿಕೊಟ್ಟ ವಿಶೇಷ ಲೇಖನ ಇಲ್ಲಿದೆ.

ಭಾರತಾದ್ಯಂತ ಪ್ರತಿ ವರ್ಷ ನೂರಾರು ತರುಣಿಯರು ವರದಕ್ಷಿಣೆಗೆ ಬಲಿಯಾಗುತ್ತಿದ್ದಾರೆ. ಬಹುಪಾಲು ಅಡುಗೆ ಮನೆಗಳಲ್ಲಿ ಸಂಭವಿಸುವ ಈ ಕೊಲೆಗಳಲ್ಲಿ ಸೀಮೆಎಣ್ಣೆ ಸ್ಟೋವ್ ಮತ್ತು ನೈಲಾನ್ ಸೀರೆಗಳು ಪ್ರಮುಖ ಪಾತ್ರ ವಹಿಸಿರುತ್ತವೆ. ಅವರನ್ನು ಚಮತ್ಕಾರವಾಗಿ ಉರಿಗೆ ತಳ್ಳಲಾಗುತ್ತದೆ. ಇಲ್ಲವೆ ಕಲ್ಪಿತ ಕಿಡಿ ಹಾರಿರುತ್ತದೆ. ಬೆಂಕಿಯ ಕೆನ್ನಾಲಿಗೆಗೆ ಸಿಲುಕಿ ನೋವಿನಿಂದ ಚೀರುತ್ತಲೇ ಸಾವಿಗೆ ತುತ್ತಾಗಿರುತ್ತಾರೆ. ಇಂಥ ಸಾವುಗಳನ್ನು ಆಕಸ್ಮಿಕಗಳೆಂದೋ ಆತ್ಮಹತ್ಯೆಗಳೆಂದೋ ತಳ್ಳಿ ಹಾಕಲಾಗುತ್ತದೆ. ಇಲ್ಲಿ ಕಾನೂನಿಗೆ ಅವಕಾಶವೇ ಇರುವುದಿಲ್ಲ. ಎಲ್ಲಾ ಸಾಕ್ಷಿಗಳೂ ತರುಣಿಯರೊಂದಿಗೆ ಸುಟ್ಟು ಹೋಗಿರುತ್ತವೆ.

ಸಾಮಾನ್ಯವಾಗಿ ಇಂಥ ಪ್ರಕರಣಗಳು ಮನೆಯಲ್ಲಿ ನಡೆಯುವುದರಿಂದ ಸಾಕ್ಷಿಗಳಾಗಲೀ ದೂರುಗಳಾಗಲೀ ಇರುವುದಿಲ್ಲ. ಹೀಗಾಗಿ ಆರೋಪಗಳು ಸಾಬೀತಾಗುವ ಸ್ಥಿತಿ ಬರುವುದಿಲ್ಲ. ಕೊಲೆಗಾರರು ಸುಲಭವಾಗಿ ಪಾರಾಗುತ್ತಾರೆ. ಒಂದು ವೇಳೆ ದೂರು ದಾಖಲಾಗಿದ್ದರೂ ಸರಿಯಾದ ಸಾಕ್ಷ್ಯಾಧಾರಗಳಿಲ್ಲದೆ ಬಿದ್ದು ಹೋಗುತ್ತದೆ. ಈ ವರದಕ್ಷಿಣೆಯ ಪಿಡುಗಿಗೆ ಸಂಬಂಧಿಸಿದಂತೆ ಶಾಸನ ರಚನೆಯಾಗಿದ್ದರೂ ಸಮಾಜದಲ್ಲಿ ವರದಕ್ಷಿಣೆ ಪದ್ಧತಿ ಇನ್ನೂ ಇದೆ. ಸಮಾಜದ ಈ ಅನಿಷ್ಟಕಾರಕ ಪೀಡೆ ತನ್ನ ಕರಾಳ ಬಾಹುಗಳಿಂದ ಹರೆಯದ ತರುಣಿಯರನ್ನು ಬಲಿಗೊಳ್ಳುತ್ತಲೇ ಇದೆ. ಸಮಾಜದ ಮೇಲುಸ್ತರದ ದುರಾಸೆಯ ಜನರಿಗೆ ಮನುಷ್ಯತ್ವದ ಬಗೆಗೆ ಕಿಂಚಿತ್ತೂ ಗೌರವವಿಲ್ಲದಿರುವ ಫಲವಾಗಿ ಇಂಥ ಕೊಲೆಗಳು ಹೆಚ್ಚುತ್ತಲಿವೆ. ಹಾಗೆಂದ ಮಾತ್ರಕ್ಕೆ ಕೆಳವರ್ಗದ ಜನರಲ್ಲಿ ಇಂಥ ಘಟನೆಗಳು ಇಲ್ಲವೇ ಇಲ್ಲವೆಂದು ಹೇಳಲಾಗದು. ದೆಹಲಿ, ಪಂಜಾಬ್, ಹರಿಯಾಣ, ಉತ್ತರ ಪ್ರದೇಶ ಮತ್ತು ಬಿಹಾರಗಳ ಶ್ರೀಮಂತ ಕುಟುಂಬಗಳಲ್ಲಿ ಇಂಥ ಪ್ರಕರಣಗಳು ಹೇರಳ.

ದೆಹಲಿಯೊಂದರಲ್ಲೇ ೧೯೮೭ರಲ್ಲಿ ಅಗ್ನಿಗಾಹುತಿಯಾದ ಸ್ತ್ರೀಯರ ೮೨ ಮೊಕದ್ದಮೆಗಳು ದಾಖಲಾಗಿವೆ. ಇದರ ಜೊತೆಗೆ ೩೪೩ ಅಸಹಜ ಸಾವಿನ ಮೊಕದ್ದಮೆಗಳು ದಾಖಲಾಗಿವೆ. ವರದಿಯಾಗದೆ ಹೋಗಿರಬಹುದಾದ ಪ್ರಕರಣಗಳು ಎಷ್ಟಿರಬಹುದೆಂದು ಯಾರೂ ಊಹಿಸಬಹುದು.

ತಮ್ಮ ಗಂಡಂದಿರ ಕುಟುಂಬವನ್ನು ತೃಪ್ತಿಪಡಿಸುವಷ್ಟು ವರದಕ್ಷಿಣೆಯನ್ನು ತಾರದ ವಧುಗಳ ಪಾಲಿಗೆ ಮದುವೆಯು ಸಾಕ್ಷಾತ್ ಸಾವಿನ ಕುಣಿಕೆಯಾಗಿ ಮಾರ್ಪಟ್ಟಿರುವುದಕ್ಕೆ ಮುಖ್ಯ ಕಾರಣಗಳೆಂದರೆ, ಸಾರ್ವಜನಿಕರ ಉದಾಸೀನತೆ ಮತ್ತು ನ್ಯೂನ ಶಾಸನ ರಚನೆ. ಎಲ್ಲಾ ಸಾಮಾಜಿಕ ಮತ್ತು ಸ್ವಯಂ ಸೇವಾ ಸಂಸ್ಥೆಗಳಿಗೆ ಕೆಟ್ಟ ಮೇಲೆ ಬುದ್ಧಿ ಬರುತ್ತದೆ. ಪರಿಸ್ಥಿತಿಗೆ ಸಿಲುಕಿ ನರಳುತ್ತಿರುವ ಮಹಿಳೆಯರಿಗೆ ತಮ್ಮ ಯಾತನೆಯಿಂದ ಪಾರಾಗಲು ಇರುವ ದಾರಿಯೊಂದೇ-ಸಾವು! ಸ್ವಇಚ್ಛೆಯಿಂದಾಗಬಹುದು ಅಥವಾ ಬಲಾತ್ಕಾರದಿಂದಾಗಬಹುದು.

ಒಬ್ಬಳನ್ನು ಸುಟ್ಟು ಮತ್ತೊಬ್ಬಳನ್ನು ಮದುವೆಯಾಗುವುದರಿಂದ ಮತ್ತಷ್ಟು ವರದಕ್ಷಿಣೆ ಬಂದೀತು. ಆದರೆ ಆ ಹೆಣ್ಣಿನ ಗತಿಯಾದರೂ ಅಷ್ಟೇ. ಆಕೆ ತರುವ ಗಂಟೂ ಸಾಲದಾಗುತ್ತದೆ. ಅದಕ್ಕೆ ಮತ್ತೊಂದು ಬಲಿ. ಹೀಗೇ ಮುಂದುವರಿಯುತ್ತದೆ. ಪಶ್ಚಿಮ ದೆಹಲಿಯ ಉದ್ದಿಮೆದಾರನೊಬ್ಬ ಈಚೆಗೆ ತನ್ನ ಇಬ್ಬರು ಹೆಂಡತಿಯರ ನಂತರ ಮೂರನೆಯ ಹೆಂಡತಿಯನ್ನೂ ಸುಟ್ಟ. ದೂರು ನೀಡಿದ ಹುಡುಗಿಯ ತಂದೆ ತಾಯಿಗಳು ಆತ ಮಗಳನ್ನು ಹೆಚ್ಚಿನ ವರದಕ್ಷಿಣೆಗಾಗಿ ಹಿಂಸೆ ಮತ್ತು ಕಿರುಕುಳ ನೀಡುತ್ತಿದ್ದನೆಂದು ತಿಳಿಸಿದ್ದಾರೆ. ಇಂದು ಮದುವೆ ಒಂದು ಪವಿತ್ರ ಬಂಧನವಲ್ಲ; ಹಣದ

○ ಉಷಾ ನವರತ್ನರಾಮ್

ವಿಷಯ!

ಈ ಕ್ರೌರ್ಯದ ಬೆಳವಣಿಗೆಯ ಮೂಲ ನಮ್ಮ ಶಿಕ್ಷಣ ಪದ್ಧತಿಯಲ್ಲಿ ಅಡಗಿದೆ. ಶಿಕ್ಷಣ ಸಂಸ್ಥೆಗಳಿಗೆ ಕ್ಯಾಪಿಟೇಶನ್ ಶುಲ್ಕ ಇತ್ಯಾದಿಯನ್ನು ಸುರಿದು ತಂದೆ ತನ್ನ ಮಗನಿಗೆ ಉತ್ತಮ ಪದವಿಯನ್ನು ಕೊಂಡಿರುತ್ತಾನೆ. ತಾನು ಉಳಿಸಬಹುದಾಗಿದ್ದ ಹಣವನ್ನು ಮಗನ ಮೇಲೆ ''ತೊಡಗಿಸಿರುತ್ತಾನೆ''. ಈ ಬಂಡವಾಳವನ್ನು ಮಗನು ವಧುವಿನಿಂದ ಬಡ್ಡಿಯ ಸಹಿತ ವಸೂಲು ಮಾಡುವುದು ತಮ್ಮ ''ಹಕ್ಕು'' ಎಂದು ಅವರು ತಿಳಿಸಿದ್ದಾರೆ. ಜೀವನ ವೆಚ್ಚ ಹೆಚ್ಚುತ್ತಿರುವ ಮತ್ತು ನವೀನ ಸಾಧನಗಳು ಮಾರುಕಟ್ಟೆಯನ್ನು ಪ್ರವೇಶಿಸುತ್ತಿರುವ ಈ ದಿನಗಳಲ್ಲಿ ಅತ್ತೆ ಮಾವಂದಿರು ಸೊಸೆಯನ್ನು ಇಂಥ ಪ್ರತಿಷ್ಠಿತ ವಸ್ತುಗಳಿಂದ ಮನೆ ಸಜ್ಜುಗೊಳಿಸುವಂತೆ ಕಾಡಿಸುತ್ತಾರೆ. ಹೆಣ್ಣು ಹತಾಶಳಾಗುವವರೆಗೆ ಈ ಹಿಂಸೆ ಮುಂದುವರೆಯುತ್ತದೆ.

**ತಮ್ಮ ಮಗಳನ್ನು ಸಾಗಹಾಕಿ ಕೈತೊಳೆದುಕೊಳ್ಳುವ ಕಾತರದಲ್ಲಿ ತಂದೆ ತಾಯಿಗಳು ಈ ಎಲ್ಲಕ್ಕೂ ಸಿದ್ಧವಾಗಿ ಈ ಅನಿಷ್ಟ ಪೀಡೆಯ ಮುಂದುವರಿಕೆಗೆ ಕಾರಣರಾಗಿದ್ದಾರೆ. ತಮ್ಮ ಹೆಣ್ಣುಮಕ್ಕಳ ಭವಿಷ್ಯದ ಸುಖ ಸಂತೋಷಗಳ ದೃಷ್ಟಿಯಿಂದ, ತಂದೆ ತಾಯಂದಿರು, ವರದಕ್ಷಿಣೆ ಮಾರುಕಟ್ಟೆಯಲ್ಲಿ ಗಂಡುಗಳಿಗೆ ಬೆಲೆತೆತ್ತು, ಹೆಣ್ಣು ಮಕ್ಕಳನ್ನು ದನಗಳಂತೆ ಮಾರಾಟ ಮಾಡುತ್ತಿದ್ದಾರೆ.**



ಈಗ ವರದಕ್ಷಿಣೆಯನ್ನು ಕಾನೂನು ಮೂಲಕ ರದ್ದುಪಡಿಸಲು ಸಾಧ್ಯವೇ ಇಲ್ಲವೇ? ಈಗಿನ ಕಾನೂನು ಎಷ್ಟರ ಮಟ್ಟಿಗೆ ಪರಿಣಾಮಕಾರಿ? ಎಂಬ ಪ್ರಶ್ನೆಗಳು ತಲೆದೋರಿವೆ. ೧೯೬೧ರಲ್ಲಿ ವರದಕ್ಷಿಣೆ ನಿಷೇಧ ಅಧಿನಿಯಮವನ್ನು ವ್ಯಾಪಕ ಚರ್ಚೆ ನಂತರ ಜಾಗರೂಕತೆಯಿಂದ ಜಾರಿಗೊಳಿಸಲಾಯಿತು. ೧೯೫೩ರಷ್ಟು ಮುಂಚೆಯೇ ಒಬ್ಬ ಖಾಸಗಿ ಸದಸ್ಯರು ವರದಕ್ಷಿಣೆಯನ್ನು ನಿಷೇಧಿಸುವ ಮಸೂದೆಯನ್ನು ಲೋಕಸಭೆಯಲ್ಲಿ ಮಂಡಿಸಿದ್ದರು. ಆಗ ಸಂಸತ್ತು ಅದನ್ನು ಕಡೆಗಣಿಸಿದ್ದಿತು. ೧೯೫೯ರಲ್ಲಿ ಸಂಸತ್ತಿನಲ್ಲಿ ವರದಕ್ಷಿಣೆ ನಿಷೇಧ ಮಸೂದೆಯನ್ನು ಮಂಡಿಸಿದ ಆಗಿನ ಕಾನೂನು ಮಂತ್ರಿಗಳು ಸಾರ್ವಜನಿಕಾಭಿಪ್ರಾಯವು ಇಂಥ ಸ್ವರೂಪದ ಮಸೂದೆ ಅಗತ್ಯವೆಂದು ಭಾವಿಸುತ್ತಿದೆ ಮತ್ತು ಜಾರಿಗೊಳಿಸಲಾಗುತ್ತಿದೆ ಎಂಬ ಉದಾಸೀನದ ಹೇಳಿಕೆಯನ್ನು ನೀಡಿದ್ದರು. ಅವರಿಗೆ ಹೆಣ್ಣು ಮಕ್ಕಳು ತಮ್ಮ ಜೀವನ ಸಂಗಾತಿಗಳನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯದ ಕಡೆಗೆ ಲಕ್ಷ್ಯವಿರಲಿಲ್ಲ. ತರುಣ ತರುಣಿಯರಿಗೆ ತಮ್ಮ ಸಂಗಾತಿಯ ಆಯ್ಕೆಗೆ ಕ್ರಿಯಾತ್ಮಕ ಪ್ರೋತ್ಸಾಹ ನೀಡಿದರೆ ವರದಕ್ಷಿಣೆ ತನ್ನಿಂದ ತಾನೇ ನಿಷೇಧಿತವಾಗುತ್ತದೆ. ಮಸೂದೆಯು ಶಾಸನವಾಗಿ ಹೊರಬೀಳಲು ಎರಡು ವರ್ಷವಾಯಿತು. ಆಗಿನ ಪ್ರಮುಖ ಆಡಳಿತ ಪಕ್ಷದ ಸದಸ್ಯರೊಬ್ಬರ ಈ ಕೆಳಗಿನ ಮಾತುಗಳನ್ನು ಗಮನಿಸಿದರೆ ಈ ಮಸೂದೆ ಅದೆಷ್ಟು ನಿರ್ಲಕ್ಷ್ಯಕ್ಕೆ ಗುರಿಯಾಗಿದ್ದಿತೆಂದು ತಿಳಿಯುತ್ತದೆ: ''ನಾವು ಸ್ತ್ರೀ-ಪೀಡಿತರಾಗಿರುವಂತಿದೆ. ನಾವು ಮಹಿಳೆಯರಿಗೆ ಎಷ್ಟು ಪ್ರಾಮುಖ್ಯ ನೀಡುತ್ತಿದ್ದೇವೆಂದರೆ ಅವರಿಂದ ಯಾವುದೇ ಬೇಡಿಕೆ ಬಂದರೂ, ಶರಣಾಗತರಾಗುತ್ತೇವೆ. ನಾವು ಇಂಥ ಸಣ್ಣ ವಿಷಯಗಳಲ್ಲಿ ಮುಳುಗತಕ್ಕದ್ದಲ್ಲ. ಸಮಾಜದ ಅಭಿವೃದ್ಧಿ ಮತ್ತು ಪ್ರಗತಿಗಾಗಿ ಗಂಭೀರ ವಿಷಯಗಳನ್ನು ಕೈಗೊಳ್ಳೋಣ''.

## ಉಷಾ ನವರತ್ನರಾಮ್ ಅವರೊಡನೆ

# ಆಪ್ತ ಸಮಾಲೋಚನೆ

ಬದುಕಿನ ಹಾದಿಯಲ್ಲಿ ಎದುರಾಗುವ ಸಮಸ್ಯೆಗಳು ಒಂದೆರಡಲ್ಲ. ಸಮಸ್ಯೆ ಎದುರು ನಿಂತು ಘರ್ಜಿಸಿದಾಗ ಹಣೆಗೆ ಕೈಹೊತ್ತು ಕೂತರೆ ಪರಿಹಾರ ತಂತಾನೇ ಹೊಳೆಯಲಾರದು. ಸಮಸ್ಯೆ ಖಾಸಗಿ ಬದುಕಿಗೆ ಸಂಬಂಧಿಸಿದ್ದರಂತೂ ನುಂಗಲೂ ಆಗದೆ ಉಗುಳಲೂ ಆಗದೆ ತೊಳಲಾಡುವವರೇ ಹೆಚ್ಚು. ಇಂತಹ ಸಂದರ್ಭದಲ್ಲಿ ಒಳಗಿನ ಗೋಳನ್ನೆಲ್ಲ ತೋಡಿಕೊಳ್ಳಲು ಒಬ್ಬ ಆಪ್ತ ವ್ಯಕ್ತಿ ಸಿಕ್ಕರೆ ಅರ್ಧ ದುಃಖ ಶಮನಗೊಳ್ಳುತ್ತದೆ. ನಿಮ್ಮ ತೀರಾ ಖಾಸಗಿ ಸಮಸ್ಯೆಗಳಿಗೆ ಪರಿಹಾರ ಸೂಚಿಸಲು ಈ ಅಂಕಣ ಪ್ರಾರಂಭಿಸುತ್ತಿದ್ದೇವೆ.

ನಿಮ್ಮ ಯಾವುದೇ ವೈಯಕ್ತಿಕ ಸಮಸ್ಯೆ, ಸಾಮಾಜಿಕ-ಕೌಟುಂಬಿಕ ಬಿಕ್ಕಟ್ಟು ಕುರಿತು ಚುಟುಕಾಗಿ, ನಿರ್ದಿಷ್ಟವಾಗಿ ಬರೆದು ಕಳಿಸಿ. ಇದು ಕೇವಲ ಹೆಂಗಸರಿಗೇ ಮೀಸಲಾದ ಅಂಕಣವಲ್ಲ. ಈ ವಿಭಾಗಕ್ಕೆ ಗಂಡಸರೂ ತಮ್ಮ ಸಮಸ್ಯೆಗಳನ್ನು ಬರೆದು ಕಳಿಸಬಹುದು. ಅನುಭವೀ ಬರಹಗಾರ್ತಿ **ಉಷಾ ನವರತ್ನರಾಮ್** ಅವರು ನಿಮ್ಮ ಪ್ರಶ್ನೆಗಳಿಗೆ, ಸಮಸ್ಯೆಗಳಿಗೆ ಪರಿಹಾರ ಸೂಚಿಸುತ್ತಾರೆ. ಪತ್ರದಲ್ಲಿ ನಿಮ್ಮ ಹೆಸರು, ವಿಳಾಸ ನಮೂದಿಸುವ ಅಗತ್ಯವಿಲ್ಲ.

ವಿಳಾಸ: **ಬಿಸಿಲ ಬದುಕು** ಮಾಸ ಪತ್ರಿಕೆ
**ಆಪ್ತ ಸಮಾಲೋಚನೆ** ವಿಭಾಗ, ಅಂಚೆ ಪೆಟ್ಟಿಗೆ ೭೯೫೧
ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯.

## 'ಬಿಜಾಪುರ' ಹೆಸರಿನ ಹಿಂದೇನಿದೆ?

*ಕರ್ನಾಟಕದಲ್ಲಿ ಅತ್ಯಂತ ದೊಡ್ಡ ಜಿಲ್ಲೆಯಾಗಿರುವ ಬಿಜಾಪುರವು ಹಲವಾರು ಜನರಿಂದ ವಿಜಾಪುರ, ವಿಜಾಪೂರ, ಬಿಜಾಪೂರ, ಬಿಜಪುರ ಹೀಗೆಲ್ಲ ಆಗಿದೆ. ಆದರೆ ಈ ಹೆಸರಿನ 'ಹಿನ್ನೆಲೆಯನ್ನು ಕೆದಕಿದಾಗ ಸುಮಾರು ೧೧ನೆಯ ಶತಮಾನದಲ್ಲಿ ಇದು 'ಬಿಜ್ಜಪುರ' ವಾಗಿತ್ತೆಂದು ತಿಳಿದುಬರುತ್ತದೆ.*

*ಇದು ಬಸವಣ್ಣನ ಕಾಲದ ಹೆಸರೆಂದು ಕೆಲವರು ಹೇಳುತ್ತಾರೆ. ಈ ಬಗ್ಗೆ ಜಿಲ್ಲೆಯ ಕೆಲವರು ಸಂಶೋಧನೆ ಕೂಡ ಮಾಡಿ ಡಾಕ್ಟರೇಟ್ ಪಡೆದುಕೊಂಡಿದ್ದಾರೆ.*

*ಈ ಬಿಜ್ಜಾಪುರವು ಈಗಿರುವ ನಗರ ಸ್ಥಳದಿಂದ ಮುಕ್ಕಾಲು ಕಿ.ಮೀ. ದೂರದಲ್ಲಿತ್ತೆಂದು ಇತಿಹಾಸವಿದೆ. ಆಗಿನ ಪಟ್ಟಣ ಬದುಕಿನ ಅವಶೇಷಗಳು ಇತ್ತೀಚೆಗೆ ದೊರಕಿದ್ದನ್ನು ಇಲ್ಲಿ ನೆನಪಿಸಬಹುದು.*

ಮಹಿಳೆಯರ ಸ್ಥಾನಮಾನಗಳು ಮತ್ತು ಅವರ ಜೀವನ್ಮರಣಗಳ ಪ್ರಶ್ನೆಗಳು ಇವರಿಗೆ ಸಣ್ಣ ವಿಷಯಗಳು. ಕಳೆದೆರಡು ದಶಕಗಳಿಂದ ಪರಿಸ್ಥಿತಿ ಒಂದಿಷ್ಟು ಉತ್ತಮವಾಗಿದೆಯಾದರೂ ಮೂಲ ಪ್ರವೃತ್ತಿ ಬದಲಾಗಿಲ್ಲ. ಈಗಲೂ ಸ್ತ್ರೀಯರ ಕ್ರಯ ವಿಕ್ರಯ ನಡೆಯುತ್ತದೆ: ಅವರನ್ನು ಬಳಸಿ, ನಿಂದಿಸಲಾಗುತ್ತದೆ: ಹಿಂಸಿಸಿ ಪೀಡಿಸಲಾಗುತ್ತದೆ ಮತ್ತು ಕೊನೆಗೆ ಬೆಂಕಿ ಹಚ್ಚಿ ಸಾಯಿಸಲಾಗುತ್ತದೆ.

ಕಾನೂನು ವರದಕ್ಷಿಣೆಯನ್ನು, ''(ಅ) ವಿವಾಹದ ಒಂದು ಪಕ್ಷದವರಿಂದ ಮತ್ತೊಂದು ಪಕ್ಷದವರಿಂದ ಮತ್ತೊಂದು ಪಕ್ಷದವರಿಗೆ ವಿವಾಹಕ್ಕಾಗಿ ಅಥವಾ (ಬ) ವಿವಾಹದ ಎರಡೂ ಪಕ್ಷದ ಪೋಷಕರಿಂದ ವಿವಾಹಕ್ಕಾಗಿ ಅಥವಾ ಯಾವುದೇ ಇತರ ವ್ಯಕ್ತಿಯು ಎರಡೂ ಪಕ್ಷದವರಿಗೆ ವಿವಾಹಕ್ಕಾಗಿ ಅಥವಾ ಯಾವುದೇ ವ್ಯಕ್ತಿಯು ವಿವಾಹಕ್ಕೆ ಮುನ್ನ ಅಥವಾ ವಿವಾಹದ ನಂತರ ಉಕ್ತ ಪಕ್ಷಗಳ ವಿವಾಹದ ಪ್ರತಿಫಲವಾಗಿ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಕೊಡಲಾದ ಅಥವಾ ಕೊಡಲಾಗುವುದೆಂದು ಒಪ್ಪಿಕೊಂಡ ಯಾವುದೇ ಆಸ್ತಿ ಅಥವಾ ಬೆಲೆ ಬಾಳುವ ಭದ್ರತೆ'' ಎಂದು ವ್ಯಾಖ್ಯಾನಿಸಿದೆ. ಇಲ್ಲಿಯವರೆಗೆ ಈ ವ್ಯಾಖ್ಯಾನ ಕಟ್ಟುನಿಟ್ಟಾಗಿದೆ. ಆದರೆ ಮುಂದೆ ''ವಿವಾಹದ ಸಮಯದಲ್ಲಿ ವಿವಾಹದ ಎರಡು ಪಕ್ಷದವರಿಗೆ ನಗದು, ಆಭರಣಗಳು, ವಸ್ತುಗಳು ಅಥವಾ ಇತರ ವಸ್ತುಗಳ ರೂಪದಲ್ಲಿ ನೀಡಲಾದ ಯಾವುದೇ ಕಾಣಿಕೆಗಳನ್ನು ಉಕ್ತ ಪಕ್ಷಗಳ ವಿವಾಹದ ಪ್ರತಿಫಲವಾಗಿ ಕೊಡಲಾಗದ ಹೊರತು, ಅವುಗಳನ್ನು ವರದಕ್ಷಿಣೆಯೆಂದು ಪರಿಗಣಿಸತಕ್ಕುದಲ್ಲ'', ಎಂದೂ ಸೇರಿಸಲಾಗಿದೆ. ಈ ಕಲಮಿನ ಮೇರೆಗೆ ಅಪರಾಧಿಗಳು ಎಲ್ಲ ಸೌಕರ್ಯಗಳನ್ನೂ ಪಡೆಯುವುದರ ಜೊತೆಗೆ ಕಾನೂನನ್ನು ವಂಚಿಸುತ್ತಿದ್ದಾರೆ. ''ಕಾಣಿಕೆಗಳ'' ವೇಷದಲ್ಲಿ ನಾಚಿಕೆ ಇಲ್ಲದೆ, ರೆಫ್ರಿಜಿರೇಟರ್, ಕಾರು, ಸ್ಕೂಟರ್, ಟೆಲಿವಿಷನ್, ವಿಡಿಯೋ ಮತ್ತಿತರ ಮನೆಬಳಕೆ ವಸ್ತುಗಳಿಗಾಗಿ ಒತ್ತಾಯಿಸುತ್ತಿದ್ದಾರೆ. ತಮ್ಮ ಮಗಳನ್ನು ಸಾಗಹಾಕಿ ಕೈತೊಳೆದುಕೊಳ್ಳುವ ಕಾತರದಲ್ಲಿ ತಂದೆ ತಾಯಿಗಳು ಈ ಎಲ್ಲಕ್ಕೂ ಸಿದ್ಧವಾಗಿ ಈ ಅನಿಷ್ಟ ಪೀಡೆಯ ಮುಂದುವರಿಕೆಗೆ ಕಾರಣರಾಗಿದ್ದಾರೆ. ತಮ್ಮ ಹೆಣ್ಣುಮಕ್ಕಳ ಭವಿಷ್ಯದ ಸುಖ ಸಂತೋಷಗಳ ದೃಷ್ಟಿಯಿಂದ, ತಂದೆ ತಾಯಂದಿರು, ವರದಕ್ಷಿಣೆ ಮಾರುಕಟ್ಟೆಯಲ್ಲಿ ಗಂಡುಗಳಿಗೆ ಬೆಲೆತೆತ್ತು, ಹೆಣ್ಣು ಮಕ್ಕಳನ್ನು ದನಗಳಂತೆ ಮಾರಾಟ ಮಾಡುತ್ತಿದ್ದಾರೆ.

ಕಾನೂನು ಜಾರಿಗೆ ಬಂದಾಗಿನಿಂದ ವರದಕ್ಷಿಣೆ ನಿಷೇಧ ಅಧಿನಿಯಮದ ಮೇರೆಗೆ ಗಮನಾರ್ಹ ಸಂಖ್ಯೆಯಲ್ಲಿ ಆರೋಪಗಳು ದಾಖಲಾಗಿಲ್ಲ; ಮದುವೆಗೆ ಮುಂಚಿತವಾಗಿ ವರದಕ್ಷಿಣೆ ಕೇಳಿದರೆಂಬ ಬಗೆಗೆ ಒಂದು ದೂರೂ ದಾಖಲಾಗಿಲ್ಲ. ಎಲ್ಲ ದೂರುಗಳೂ, ವಧುವಿಗೆ ಹಿಂಸೆ ಪ್ರಾರಂಭವಾದ ಮತ್ತು ಆಕೆಯು ಜೀವ ಭಯಕ್ಕೆ ಗುರಿಯಾದ ನಂತರವೇ. ವರದಕ್ಷಿಣೆಯ ಬಗೆಗೆ ತಕರಾರು ತೆಗೆದರೆ ತಮ್ಮ ಮಗಳನ್ನು ಮದುವೆಯಾಗಲು ಯಾರೂ ಮುಂದೆ ಬರಲಾರರೆಂದು ಎಲ್ಲ ತಂದೆ - ತಾಯಿಗಳಿಗೂ ಗೊತ್ತು. ಹುಡುಗಿಯರಿಗೆ ತಮ್ಮ ಗಂಡಂದಿರನ್ನು ತಾವೇ ಆಯ್ಕೆ ಮಾಡುವ ಸ್ವಾತಂತ್ರ್ಯ ಸಿಗುವವರೆಗೆ ಪರಿಸ್ಥಿತಿಯ ಬದಲಾವಣೆಯ ಬಗೆಗೆ ಯೋಚಿಸುವುದೂ ಅಸಾಧ್ಯ.

***ತರುಣ - ತರುಣಿಯರಿಗೆ ತಮ್ಮ ಸಂಗಾತಿಯ ಆಯ್ಕೆಗೆ ಕ್ರಿಯಾತ್ಮಕ ಪ್ರೋತ್ಸಾಹ ನೀಡಿದರೆ ವರದಕ್ಷಿಣೆ ತನಗೆ ತಾನೇ ನಿಷೇಧಿತವಾಗುತ್ತದೆ.***

ವರದಕ್ಷಿಣೆಯಿಂದಾಗುವ ತರುಣಿಯ ಸಾವಿನ ಪ್ರಕರಣಗಳು ಬಹುಪಾಲು ದಾಖಲಾಗುವುದೇ ಕಡಿಮೆ. ಆದರೂ ಸರಿಯಾದ ಸಾಕ್ಷ್ಯಾಧಾರಗಳಿಲ್ಲದೆ ನ್ಯಾಯ ಸಿಗುವುದಿಲ್ಲ. ತಂದೆ ತಾಯಿಗಳಂತೂ ನ್ಯಾಯಕ್ಕಾಗಿ ಆಶ್ರಯದಿಂದ ಆಶ್ರಯಕ್ಕೆ ಅಲೆಯುತ್ತಾರೆ. ಕಾರಣ ಸುಸ್ಪಷ್ಟ - ಕಾನೂನಿನ ಅಸಮರ್ಥತೆ. ಹೀಗಾಗಿ ಇಂಥ ಅಪರಾಧಗಳು ಹೆಚ್ಚುತ್ತಲೇ ಇವೆ. ಸಮಾಜ ಸೇವಾ ಸಂಸ್ಥೆಗಳು ಈ ದುಷ್ಕೃತ್ಯದ ಬಗೆಗೆ ಅರಿವನ್ನು ಮೂಡಿಸಲು ಪ್ರಾಮಾಣಿಕತೆಯಿಂದ ಪ್ರಯತ್ನಿಸುತ್ತಿವೆ. ಅವುಗಳ ಪ್ರತಿಭಟನೆ ಮತ್ತು ಚಳವಳಿಗಳು ಮೌಲಿಕ ಪರಿಣಾಮ ಬೀರಿವೆಯಾದರೂ, ಈ ಯಾವುದೇ ಸಂಸ್ಥೆಗಳು, ತೊಂದರೆಯಲ್ಲಿರುವ ತರುಣಿಯರನ್ನು ಬಿಡಿಸಿರುವ ಅಥವಾ ಅವರು ಬದುಕಿರುವಾಗಲೇ ಅವರನ್ನು ಸ್ವತಂತ್ರಗೊಳಿಸಿರುವ ಉದಾಹರಣೆಗಳಿಲ್ಲ. ಅಂದ ಮೇಲೆ ಇಂಥ ಸಂಘಟನೆ

ಗಳಿಂದಾಗುವ ಪ್ರಯೋಜನವಾದರೂ ಏನು? ಪೊಲೀಸ್ ಮತ್ತು ಸಾಮಾಜಿಕ ಸಂಸ್ಥೆಗಳು ಎಚ್ಚರವಹಿಸಿದರೆ ವಧು-ದಹನಗಳನ್ನು ತಪ್ಪಿಸಲು ಸಾಧ್ಯ. ರೇಡಿಯೋ, ಟೀವಿ ಮತ್ತು ಪತ್ರಿಕೆಗಳಲ್ಲಿ ಅಪರಾಧಿಗಳನ್ನು ಬಯಲಿಗೆಳೆದು ಜನತೆಯ ಗಮನಕ್ಕೆ ತಂದರೆ ತರುಣಿಯರನ್ನು ಹಿಂಸಿಸುವ ಮತ್ತು ದಹಿಸುವ ಮುಂಚೆ ಉಳಿದವರು ಯೋಚಿಸಬೇಕಾಗುತ್ತದೆ.

ತಡವಾಗಿಯಾದರೂ, ದೇಶದಲ್ಲಿ ವರದಕ್ಷಿಣೆ ವಿರೋಧಿ ಚಳವಳಿ ಆರಂಭಗೊಂಡಿದೆ. ಸ್ತ್ರೀಯರು ವರದಕ್ಷಿಣೆಯ ಸಂಬಂಧದಲ್ಲಿ ಅನುಭವಿಸುವ ಹಿಂಸೆಯಿಂದ ಅವರನ್ನು ರಕ್ಷಿಸುವ ಎಲ್ಲ ಕಾನೂನುಬದ್ಧ ಮತ್ತು ಆಡಳಿತಾತ್ಮಕ ಕ್ರಮಗಳನ್ನು ಕೈಗೊಳ್ಳುವುದಾಗಿ ಕೇಂದ್ರ ಸರ್ಕಾರವು ಆಶ್ವಾಸನೆ ನೀಡಿತ್ತು. ಕಾನೂನನ್ನು ಮತ್ತಷ್ಟು ಬಿಗಿಗೊಳಿಸುವುದಾಗಿಯೂ ಹೇಳಿತ್ತು. ಆದರೆ ಈವರೆಗೆ ಏನೂ ಆಗಿಲ್ಲ. ಈಗ ಮುಖ್ಯವಾಗಿ "ವರದಕ್ಷಿಣೆ"ಯನ್ನು ಮರು ವ್ಯಾಖ್ಯಾನಿಸಬೇಕಾಗಿದೆ. ಸ್ವಇಚ್ಛೆಯಿಂದಲೇ ನೀಡಲಾಗುವ ಕಾಣಿಕೆಗಳನ್ನು ಒಳಗೊಂಡಂತೆ 'ವರದಕ್ಷಿಣೆ'ಯ ವ್ಯಾಖ್ಯೆಯನ್ನು ಹೆಚ್ಚು ಸ್ಪಷ್ಟ ಮತ್ತು ಕಠಿಣಗೊಳಿಸಬೇಕು. ಪ್ರಾಚೀನ ಕಾಲದಲ್ಲಿ ವರದಕ್ಷಿಣೆ ಪಿತ್ರಾರ್ಜಿತ ಆಸ್ತಿಯ ಸ್ತ್ರೀಯ ಭಾಗವಾಗಿದ್ದಿತು. ಆದರೆ ಹಿಂದೂ ಸಂಪ್ರದಾಯದಲ್ಲಿ ಮಗನಿಗೆ ಮಾತ್ರ ಪಿತ್ರಾರ್ಜಿತ ಆಸ್ತಿಯ ಹಕ್ಕು. ೧೯೫೬ರ ಹಿಂದೂ ಉತ್ತರಾಧಿಕಾರ ಅಧಿನಿಯಮವು ಸ್ತ್ರೀಯರಿಗೆ ಪಿತ್ರಾರ್ಜಿತ ಆಸ್ತಿಯಲ್ಲಿ ಸಮಾನ ಹಕ್ಕನ್ನು ನೀಡುತ್ತದೆ. ಇದರಿಂದ ಸ್ತ್ರೀಯರಿಗೆ ಆಗಿರುವ ಪ್ರಯೋಜವಾದರೂ ಅಷ್ಟರಲ್ಲಿಯೇ ಇದೆ. ಹೀಗಾಗಿ ಈಗ 'ಸ್ತ್ರೀಧನ' ನೀಡುವ ಅಗತ್ಯವಿಲ್ಲ.

ಕಾನೂನುಕರ್ತರು ವರದಕ್ಷಿಣೆಯನ್ನು ಖಾಸಗಿ ಅಪರಾಧವನ್ನಾಗಿ ಪರಿಗಣಿಸಿದರೆ ಅಕ್ರಮ ಲಂಚಕ್ಕೆ ಸಮಾನವಾಗಿ ವರದಕ್ಷಿಣೆಯನ್ನು ಪರಿಗಣಿಸಿ ಶಾಸನ ರಚಿಸಿದರೆ ಪರಿಣಾಮ ಉತ್ತಮಗೊಳ್ಳುತ್ತದೆ. ಈಗಿನ ಕಾನೂನು ಮತ್ತಷ್ಟು ಬಿಗಿಗೊಂಡು, ಇಂಥ ಅಪರಾಧಗಳಲ್ಲಿ ಅಭಿಯೋಜನೆಯು ಸರಳಗೊಂಡರೆ, ನಿರಪರಾಧಿ ವ್ಯಕ್ತಿಗಳು ಶಿಕ್ಷೆ ಅನುಭವಿಸಬೇಕಾಗಿಯೂ ಬರಬಹುದೆಂದು ಕೆಲವು ವಲಯಗಳಲ್ಲಿ ಆಕ್ಷೇಪವಿದೆ. ಇದನ್ನು ನ್ಯಾಯಾಲಯವು ದೂರು ಸ್ವೀಕರಿಸುವುದಕ್ಕೆ ಮುನ್ನ, ವ್ಯಕ್ತಿಯು ಸರ್ಕಾರದ ಮುನ್ನಾನುಮೋದನೆ ಪಡೆಯುವುದನ್ನು ಕಡ್ಡಾಯಗೊಳಿಸುವುದರ ಮೂಲಕ ಪರಿಹರಿಸಿಕೊಳ್ಳಬಹುದು. ಅಗತ್ಯವಿದ್ದರೆ ಅನುಮೋದನಾ ಪ್ರಾಧಿಕಾರವು ಭಾವಿಸಿದರೆ ಮಾತ್ರ ಅಭಿಯೋಗ ವ್ಯವಹರಣೆಗೆ ಅವಕಾಶ ಕೊಡುವಂತಾಗಬೇಕು. ಈಚೆಗೆ ಪೊಲೀಸ್ ಇಲಾಖೆ ವಿವಾಹಿತ ತರುಣಿಯರ ಅಸಹಜ ಸಾವಿನ ಎಲ್ಲ ಪ್ರಸಂಗಗಳಿಗಾಗಿ ಒಂದು ವಿಶೇಷ ವರದಕ್ಷಿಣಾ ಘಟಕ ರಚಿಸುವ ಸನ್ನಾಹದಲ್ಲಿದೆ. ಜೊತೆಗೆ ಜಪಾನಿನ ಕುಟುಂಬ ನ್ಯಾಯಾಲಯ ರೀತಿಯ ವಿಶೇಷ ನ್ಯಾಯಾಲಯಗಳನ್ನು ರಚಿಸುವುದು ಅಗತ್ಯ. ಇಂಥ ಘೋರ ಅಪರಾಧವನ್ನು ಪ್ರತ್ಯೇಕವಾಗಿಯೇ ಎದುರಿಸಿದರೆ ಮಾತ್ರ ತಡೆಗಟ್ಟಲು ಸಾಧ್ಯ. ಕೇಂದ್ರ ಸರ್ಕಾರವು ವಿವಾಹಿತ ತರುಣಿಯರ ಸಂಶಯಿತ ಸಾವು ಮತ್ತು ಆತ್ಮಹತ್ಯಾ ಪ್ರಯತ್ನಗಳ ಎಲ್ಲ ಸಂದರ್ಭಗಳಲ್ಲಿ ಪೊಲೀಸ್ ಉಪ-ಅಧೀಕ್ಷಕರ ಮಟ್ಟದ ತನಿಖೆ ನಡೆಸುವಂತೆ ಎಲ್ಲ ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶಗಳಿಗೆ ಸಲಹೆ ಮಾಡಿದೆ. ಪೊಲೀಸರಿಂದ ನಿರಾಕ್ಷೇಪಣಾ ಪ್ರಮಾಣ ಪತ್ರ ಪಡೆಯದೆ, ಇಬ್ಬರು ವೈದ್ಯರಿಂದ ಮರಣೋತ್ತರ ಪರೀಕ್ಷೆಯಿಲ್ಲದೆ ದೇಹವನ್ನು ಸಂಸ್ಕಾರ ಮಾಡುವಂತಿಲ್ಲ. ವಧುವಿನ ತಂದೆ ತಾಯಿಗಳು ಅಥವಾ ನಿಕಟ ಬಂಧುಗಳು ಮೃತ ದೇಹವನ್ನು ನೋಡುವವರೆಗೆ ಪೊಲೀಸರು ನಿರಾಕ್ಷೇಪಣಾ ಪ್ರಮಾಣ ಪತ್ರವನ್ನು ನೀಡುವಂತಿಲ್ಲ. ಇಷ್ಟಾದರೂ ವರದಕ್ಷಿಣೆಯ ಒತ್ತಾಯಕ್ಕೆ ಗುರಿಯಾಗುವವರು ಆ ಬಗೆಗೆ ಪ್ರತಿಭಟಿಸುವ ಮತ್ತು ದೂರು ನೀಡುವ ತನಕ ಕಾನೂನು ಈ ಪದ್ಧತಿಯನ್ನು ತೊಡೆದುಹಾಕಲಾರದು. ವರದಕ್ಷಿಣೆ ಪದ್ಧತಿಯನ್ನು ಮೂಲೋತ್ಪಾಟನೆ ಮಾಡಲು ಸಾಮಾಜಿಕ ಕ್ರಾಂತಿ ಅಗತ್ಯ. ಇಂಥ ಕ್ರಾಂತಿಗೆ ನಮಗೆ ರಾಜಾರಾಂಮೋಹನ ರಾಯ್‌ರಂಥವರು ಬೇಕು. ಆದರೆ ಅಂತಿಮವಾಗಿ, ಮಹಿಳೆಯರು ತಮಗೆ ತಾವೇ ವಿಮೋಚಕರಾಗಬೇಕು. ಅವರು ಆಧುನಿಕ ಮದುವೆಗಳ ಶೈಲಿಯಾಗಿರುವ ಸಿರಿವಂತಿಕೆಯ ಅಸಹ್ಯ ಪ್ರದರ್ಶನವನ್ನು ತಿರಸ್ಕರಿಸಬೇಕು. ಬರೀ ಹೆಣ್ಣು ಮಕ್ಕಳಿರುವ ತಾಯಿ ತಂದೆಯರು ಈ ಪದ್ಧತಿಯ ಕೆಡುಕನ್ನು ಮೊದಲು ಮನಗಾಣಬೇಕು. ವರದಕ್ಷಿಣೆ ಬೇಡುವ ಸಂಬಂಧಗಳನ್ನು ಅವರು ನಿರಾಕರಿಸಬೇಕು.

ವಿವಾಹವೆಂಬುದು ಒಂದು ಪವಿತ್ರ ಬಂಧನ! ಹೆಣ್ಣು-ಗಂಡಿನ ಸಂಬಂಧದ ಒಂದು

## ಪ್ರಪಂಚದ 'ಪಾಪು'

*ಉತ್ತರ ಕರ್ನಾಟಕದ ಅಭಿವೃದ್ಧಿಗಾಗಿ ಹೋರಾಟ ರೂಪಿಸಲು ಬೆಳಗಾವಿಯಲ್ಲಿ ಸಮಾವೇಶವೊಂದು ಜರುಗಿತು. ತಮ್ಮ ಭಾಷಣದ ಸರದಿಗಾಗಿ ಕಾಯುತ್ತಿದ್ದ ಮಾಜಿ ಸಂಸದರೊಬ್ಬರು ನೇಪಥ್ಯದಲ್ಲಿ (Sidewing) ಪತ್ರಕರ್ತರೊಂದಿಗೆ ಲೋಕಾಭಿರಾಮವಾಗಿ ಹರಟುತ್ತ ಉದುರಿಸಿದ ಅಣಿ ಮುತ್ತು:*

*"ಈ ಹೋರಾಟ ಸಕ್ಸೆಸ್ ಆಗಂಗಿಲ್ಲ ಬಿಡ್ರಿ!" ಅವರ ಈ ಅಭಿಪ್ರಾಯ ಬರಿ ಹಗುರ ಮಾತಾಗಿರಲಿಲ್ಲ. ಆದರ ಹಿಂದೆ ಅನುಭವದ ಕಹಿ ತುಂಬಿತ್ತು.*

*"ಪಾಟೀಲ ಪುಟ್ಟಪ್ಪ ಕೈ ಹಾಕಿದ ಯಾವ ಹೋರಾಟವೂ ಯಶಸ್ವಿ ಆಗೋದಿಲ್ಲ" ಎಂಬುದು ಆ ರಾಜಕಾರಣಿಯ ವಿವರಣೆ. ಮಾತಿನ ಮಧ್ಯೆ ಅವರು ಪತ್ರಕರ್ತ ಮಿತ್ರರಿಗೆ ಮೂದಲಿಸಿದರು, "ಎಷ್ಟೆಂದರೂ ಅವರು ನಿಮ್ಮ ವೃತ್ತಿ ಬಾಂಧವರು" ಅವಮಾನಿತರಾದ ಪತ್ರಕರ್ತರು,*

*"ಇಲ್ಲ, ಪಾಟೀಲ ಪುಟ್ಟಪ್ಪನವರು ನಿಮ್ಮ ವೃತ್ತಿ ಬಾಂಧವರು" ಎಂದು ರಾಜಕಾರಣಿಗೆ ಚುಚ್ಚಿ ಸಮಾಜಾಯಿಷಿ ನೀಡಿದರು!*

*ಹಾಗಾದರೆ ಪತ್ರಕರ್ತರಿಗೆ ರಾಜಕಾರಣಿಯಂತೆಯೂ, ರಾಜಕಾರಣಿಗಳಿಗೆ ಪತ್ರಕರ್ತರಂತೆಯೂ ಕಾಣಿಸುವ 'ಪಾಪು' ನಿಜಕ್ಕೂ ಸಲ್ಲುವುದು ಎಲ್ಲಿ? •*

# ಕರ್ನಾಟಕದಲ್ಲಿ ವರದಕ್ಷಿಣೆ ಕೊಲೆ - ಸಾವು

**ಬೆಂ**ಗಳೂರು ಲಾಲ್‌ಬಾಗ್ ರಸ್ತೆಯ ನಿವಾಸಿ ಐ.ಟಿ.ಐ. ನೌಕರ ಶಿವನಂಜಮೂರ್ತಿಯವರು ತಮ್ಮ ಮಗಳು ಕೌಸಲ್ಯ (೧೯)ಳನ್ನು ನೆಲಮಂಗಲದಲ್ಲಿ ವಾಸಿಸುವ ಎಂ.ಎಸ್ಸಿ, ಪದವೀಧರ. ಶೇಷಾದ್ರಿಪುರ ಸಂಜೆ ಕಾಲೇಜಿನ ಲೆಕ್ಚರರ್ ಜಿ.ಎಸ್. ಜಯಪ್ರಕಾಶ ಎಂಬುವನೊಂದಿಗೆ ೧೩.೫.೧೯೮೧ರಂದು ವಿವಾಹ ಮಾಡಿ ಕೊಟ್ಟಿದ್ದರು. ವರನಿಗೆ ನಗದು ೯ ಸಾವಿರ, ಹೆಣ್ಣಿಗೆ ಹತ್ತು ಸವರನ್ ಬಂಗಾರ, ಇನ್ನಿತರ ಉಡುಗೊರೆ ಕೊಟ್ಟು ಬೀಗರ ಅಂತಸ್ತಿಗೆ ತಕ್ಕಂತೆ ಎಪ್ಪತ್ತೈದು ಸಾವಿರ ರೂ. ಖರ್ಚು ಮಾಡಿ ಅದ್ದೂರಿಯಿಂದ ಮದುವೆ ಮಾಡಿ ಇಪ್ಪತ್ತೈದು ಸಾವಿರ ಸಾಲ ತಲೆಯ ಮೇಲೆ ಹೊತ್ತಿದ್ದರು.

ಕೌಸಲ್ಯಳ ಮಾವ ಜಿ.ಸಿ.ಸಿದ್ಧಪ್ಪನವರು ಉಪ ಕೃಷಿ ಅಧಿಕಾರಿ. ಇವರ ಪತ್ನಿ ಲಕ್ಷ್ಮೀನರಸಮ್ಮ ಇಂದಿರಾಗಾಂಧಿಯವರ ೨೦ ಅಂಶಗಳನ್ನು ಮತ್ತು ಸಂಜಯ ಗಾಂಧಿಯ ೫ ಅಂಶಗಳಲ್ಲಿ ಒಂದು ಕಾರ್ಯಕ್ರಮವಾದ ವರದಕ್ಷಿಣೆ ನಿರ್ಮೂಲನೆಯನ್ನು ಬೋಧಿಸಿ, ಆಚರಣೆಗೆ ತರುವ ನಿಷ್ಠಾವಂತ ರಾಜಕಾರಣಿ: ಅಲ್ಲದೆ ತಾಲೂಕ್ ಬೋರ್ಡ್ ಉಪಾಧ್ಯಕ್ಷೆ; ಭೂ ಅಭಿವೃದ್ಧಿ ಬ್ಯಾಂಕ್‌ನ ಉಪಾಧ್ಯಕ್ಷೆ; ಭೂ ನ್ಯಾಯ ಮಂಡಳಿಯ ಸದಸ್ಯೆ. 'ಹೇಳುವುದು ಪುರಾಣ, ತಿನ್ನುವುದು ಬದನೆಕಾಯಿ' ಎಂಬಂತೆ ಪ್ರಭಾವೀ ಮನೆತನದ ಐಶ್ವರ್ಯ ಅಂತಸ್ತು ಕಡಿಮೆಯಿಲ್ಲದ, ಉನ್ನತ ವ್ಯಾಸಂಗ ಮಾಡಿ ಕೈ ತುಂಬ ಸಂಪಾದಿಸುತ್ತಿದ್ದ, ಸುಸಂಸ್ಕೃತ ಮನೆತನಕ್ಕೆ ಸೇರಿದವರು, ''ನಿಮ್ಮಪ್ಪನ ಮನೆಯಿಂದ ಸಾಕಷ್ಟು ಒಡವೆ ವಸ್ತು ನೀನು ತರಲಿಲ್ಲ, ಇನ್ನೂ ಹದಿನೈದು ಸವರನ್ ಬಂಗಾರ ತಾ. ಒಂದು ಬೀರು ತಾ'' ಎಂದು ಒತ್ತಾಯ ತರುತ್ತಿದ್ದುದಲ್ಲದೇ, ''ನೀನು ಸರಿಯಾಗಿ ಅಡಿಗೆ ಮಾಡುವುದಿಲ್ಲ'' ಎಂದು ಕಿರುಕುಳ ಕೊಡುತ್ತಿದ್ದರು. ನವೆಂಬರ್ ೯ರಂದು ವಿಷ ತಿನ್ನಿಸಿ ಬೆಂಗಳೂರು ಕೆ.ಸಿ. ಜನರಲ್ ಆಸ್ಪತ್ರೆಗೆ ಸೇರಿಸಿದರು. ೧೨.೧೧.೧೯೮೧ರಂದು ಕೌಸಲ್ಯಳ ತಂದೆ ಸ್ವಲ್ಪ ಗುಣಮುಖಳಾದ ಮಗಳನ್ನು ಮನೆಗೆ ಕರೆತಂದರು. ಅಂದು ರಾತ್ರಿ ಪರಿಸ್ಥಿತಿ ವಿಷಮಿಸಿದ್ದರಿಂದ ಮಾರನೆಯ ದಿನ ಮತ್ತೆ ಆಸ್ಪತ್ರೆಗೆ ಸೇರಿಸಿದರು. ಅಲ್ಲೇ ಅವಳು ಅಸುನೀಗಿದಳು. ಅತ್ತೆ, ಮಾವ, ಗಂಡ ಇವರುಗಳ ಮೇಲೆ ಕೇಸು ದಾಖಲಾಯಿತು. ಆದರೆ ಪ್ರಕರಣ ಎಲ್ಲಿಗೆ ಮುಟ್ಟಿತೆಂದು ತಿಳಿದುಬಂದಿಲ್ಲ.

೨೩-೫-೧೯೮೧ರಂದು ಬೆಂಗಳೂರಿನ ವಿಕ್ಟೋರಿಯ ಆಸ್ಪತ್ರೆಯಲ್ಲಿ ತೀವ್ರವಾಗಿ ಸುಟ್ಟ ಗಾಯಗಳಿಂದ ಪುಷ್ಪ (೨೧) ಎಂಬುವಳು ಮೃತಪಟ್ಟಳು. ೧೯೮೦ರಲ್ಲಿ ಸುಬ್ರಮಣ್ಯ ನಗರದ, ದರ್ಜಿ ವೃತ್ತಿಯಲ್ಲಿದ್ದ ನಾಗಭೂಷಣರಾವ್ ಎಂಬುವನೊಂದಿಗೆ ಅವಳ ವಿವಾಹವಾಗಿತ್ತು. ''ತವರಿನಿಂದ ಹತ್ತು ಸಾವಿರ ತಾ'', ಎಂದು ನಾಗಭೂಷಣ, ಅತ್ತೆ ಲಕ್ಷ್ಮಮ್ಮ ಮತ್ತು ಭಾವಮೈದುನ ಗೋಪಾಲರಾವ್ ದಿನವೂ ಹೊಡೆದು ಹಿಂಸಿಸುತ್ತಿದ್ದರು. ೧೫.೫.೧೯೮೧ರಂದು ಮೂವರು ಪುಷ್ಪಳ ಮೇಲೆ ಸೀಮೆಎಣ್ಣೆ ಹುಯ್ದು ಬೆಂಕಿ ಹಚ್ಚಿ, ಪ್ರಜ್ಞಾಹೀನ ಸ್ಥಿತಿಯಲ್ಲಿದ್ದ ಅವಳನ್ನು ಆಸ್ಪತ್ರೆಗೆ ಸೇರಿಸಿ, ಸ್ಟೌ ಸಿಡಿದು ಸುಟ್ಟು ಗಾಯಗಳಾಗಿವೆ ಎಂದು ಹೇಳಿದರು. ಮೈಸೂರಿನಲ್ಲಿದ್ದ ಅವಳ ಅಣ್ಣನಿಗೆ ವಿಷಯ ತಿಳಿದು ಬೆಂಗಳೂರಿಗೆ ಧಾವಿಸಿ ಬಂದು ಪೊಲೀಸರಿಗೆ ದೂರು ನೀಡಿದಾಗಲೇ ನಿಜ ವಿಷಯ ತಿಳಿದದ್ದು. ೧೭.೫.೧೯೮೧ರಂದು ಪ್ರಜ್ಞೆ ಮರಳಿದ ಪುಷ್ಪ ಮೂವರು ಆರೋಪಿಗಳು ಆಕೆಯ ಮೇಲೆಸಗಿದ ದೌರ್ಜನ್ಯವನ್ನು ಉತ್ತರ ತಾಲೂಕು ನ್ಯಾಯಾಧೀಶರಿಗೆ ತಿಳಿಸಿದಳು. ಕೂಡಲೇ ಆರೋಪಿಗಳ ಮನೆಯನ್ನು ಪೊಲೀಸ್ ಪಡೆ ಶೋಧಿಸಿದಾಗ ಸ್ಟೌ ಯಥಾಪ್ರಕಾರ ಇತ್ತು. ಸಾಕ್ಷಿ-ಪುರಾವೆಗಳು ಅವರು ಮಾಡಿದ ದುಷ್ಕೃತ್ಯ ಸಾರುತ್ತಿದ್ದವು. ಪೊಲೀಸರು ಕೇಸು ದಾಖಲು ಮಾಡಿಕೊಂಡು ಅವರನ್ನು ಬಂಧಿಸಿದರು.

೧೦.೧೦.೧೯೮೧ರಂದು ಕೇವಲ ಒಂದು ವರ್ಷದ ಹಿಂದೆ ವಿವಾಹಿತಳಾಗಿದ್ದ ನಂದಿನಿ ಲೇ-ಔಟ್‌ನ ನಿವಾಸಿ ಮುನಿಲಕ್ಷ್ಮಿ (೨೧)ಯನ್ನು ಆಕೆಯ ಗಂಡ ಮತ್ತು ಅತ್ತೆ ಸೇರಿಕೊಂಡು ಸಾಕಷ್ಟು ವರದಕ್ಷಿಣೆ ತರಲಿಲ್ಲವೆಂಬ ಕಾರಣಕ್ಕೆ ಬೆಂಕಿ ಹಚ್ಚಿ ಕೊಂದರು.

೧೨.೧೦.೧೯೮೧ರಂದು ಬೆಂಗಳೂರಿನ ಮಲ್ಲತ್ತಹಳ್ಳಿಯಲ್ಲಿ ವಾಸಿಸುವ ಪೊಲೀಸ್ ಅಧಿಕಾರಿಯೊಬ್ಬರ ಮಗಳಾದ ಗಿರಿಜಮ್ಮ (೨೬)ಳನ್ನು ಅದೇ ಹಳ್ಳಿಯ ಅವಳ ಗಂಡ ಪೋಸ್ಟ್ ಮಾಸ್ಟರ್ ನಾಗರಾಜು(೩೦), ಅತ್ತೆ ನಾದಿನಿ ಸೇರಿಸಿಕೊಂಡು ಹೊಡೆದುಕೊಂದು, ಸಮೀಪದಲ್ಲಿ ಇದ್ದ ಎರಡು ಅಡಿ ನೀರಿದ್ದ ಕೆರೆಗೆ ಅವಳ ಹೆಣ ಎಸೆದಿದ್ದರು. ಮೃತಳ ತಂದೆ ಪೊಲೀಸ್ ಠಾಣೆಗೆ ಈ ಬಗ್ಗೆ ದೂರು ನೀಡಿದರೂ ಕೇಸನ್ನು ತಮಗೆ ತೋಚಿದಂತೆ ಬರೆದುಕೊಂಡರೆಂದು ಗಲಾಟೆಯಾಗಿತ್ತು.

೧೩.೧೧.೧೯೮೨ರಂದು ರಾಣೆಬೆನ್ನೂರು ಬಳಿಯ ರೈಲುಹಳಿಗಳ ಮೇಲೆ ೨೫ ವರ್ಷದ ಮಹಿಳೆಯ ಬೆತ್ತಲೆ ಶವ ಪತ್ತೆಯಾಯಿತು. ಇವಳು ಹುಬ್ಬಳ್ಳಿಯ ಸಂತಗತ್ತಿಮಠ ಎಂಬುವರ ಮಗಳು ಚೆನ್ನಮ್ಮ ಎಂದು ತನಿಖೆಯ ನಂತರ ತಿಳಿಯಿತು. ಈಕೆಯನ್ನು ರಾಣೆಬೆನ್ನೂರಿನ ಪ್ರತಿಷ್ಠಿತ ಮನೆತನಕ್ಕೆ ಸೇರಿದ ಯುವಕನೊಂದಿಗೆ ಮದುವೆ ಮಾಡಿದ್ದರು. ಮದುವೆಯಾದ ಒಂದೆರಡು ವರ್ಷಕ್ಕೆಲ್ಲಾ ಚೆನ್ನಮ್ಮನ ಅತ್ತೆ ಅನ್ನಪೂರ್ಣಮ್ಮ ಹಾಗೂ ನಾದಿನಿ ಮಹಾದೇವಿ ಹಾಗೂ ಗಂಡ ಸಾಕಷ್ಟು ಹಣ ತರಲಿಲ್ಲವೆಂದು ದಿನವೂ ಹೊಡೆದೂ ಬಡಿದೂ ಚಿತ್ರಹಿಂಸೆ ಕೊಡತೊಡಗಿದ್ದರು. ತಾರೀಖು ೧೧.೧೧.೧೯೮೨ರ ರಾತ್ರಿ ಚೆನ್ನಮ್ಮನನ್ನು ಹೊಡೆದುಕೊಂದು ಸುಳಿವು ತಿಳಿಯಬಾರದೆಂದು ಹೆಣವನ್ನು ಬೆತ್ತಲೆಗೊಳಿಸಿ, ಗುರುತು ಸಿಗದಂತೆ ವಿರೂಪಗೊಳಿಸಿ, ರೈಲ್ವೆ ಹಳಿಗಳ ಮೇಲೆ ಎಸೆದು ಹೋದರು. ಅವರನ್ನು ಪೊಲೀಸರು ಬಂಧಿಸಿದರು.

( ನೆರವು - ಸಂಗ್ರಹಣೆ : ***ಗೋಪಾಲ ಕಲ್ಕಿ***)

ಅಮೂಲ್ಯ ಅವತರಣ. ಈ ಬಂಧನದಲ್ಲಿ ದೈಹಿಕ ಸಮತೋಲನಕ್ಕಿಂತ ಮಾನಸಿಕ ಸಮತೋಲನಕ್ಕೆ ಹೆಚ್ಚು ಆದ್ಯತೆ. ಪಶು, ಪತಿ, ಸುತ ಮತ್ತು ಮನೆ-ಇವುಗಳೆಲ್ಲ ಋಣಾನು ಬಂಧಕ್ಕೆ ಸಂಬಂಧಿಸಿದವು. ಇವೆಲ್ಲಕ್ಕೂ ಜನ್ಮ ಜನ್ಮದ ಅನುಬಂಧವಿರುವುದೆಂದೇ ಹಿರಿಯರ ನಂಬಿಕೆ.

ಆದರೆ ಈ ವಿವಾಹದ ಪವಿತ್ರ ಬಂಧನದಲ್ಲಿ ಕರಾಳ ಸ್ವರೂಪದ ವಿಷವರ್ತುಲದಂತೆ ಹಾಸು ಹೊಕ್ಕಾಗಿರುವ ವರದಕ್ಷಿಣೆ ಹೆಣ್ಣಿಗೊಂದು ಅಭಿಶಾಪ! ಒಂದು ದೇಶ ಸುಭಿಕ್ಷ, ಸಂತೃಪ್ತವಾಗಿದೆಯೇ ಎಂಬುದು ಅಲ್ಲಿನ ಮಹಿಳೆಯರನ್ನು ನಡೆಸಿಕೊಳ್ಳುವ ರೀತಿಯಿಂದ ಅಭಿವ್ಯಕ್ತವಾಗುವುದೆಂದು ಗಾಂಧೀಜಿ ಹೇಳುತ್ತಿದ್ದರು. ಮಾತಿನಲ್ಲಿ ಅವಳು ಪೂಜಿಸಲ್ಪಡಬೇಕು ಎನ್ನುತ್ತಲೇ ಅವಳನ್ನು ಸಮಾಜದ ಕಟ್ಟಳೆಯಲ್ಲಿ ಗುಲಾಮಳಿಗಿಂತಲೂ ಕಡೆಯಾಗಿ ನಡೆಸಿಕೊಳ್ಳುವುದು ನಮ್ಮಲ್ಲಿ ಸಾಮಾನ್ಯ. ಶಾಸ್ತ್ರಗ್ರಂಥ, ಕಾನೂನುಗಳನ್ನೆಲ್ಲಾ ಪಟ್ಟಭದ್ರ ಆಸಕ್ತಿಯಿಂದ ರಚಿಸಿದವನು ಪುರುಷನೇ. ಆದಕಾರಣ ಎಲ್ಲೂ ಹೆಣ್ಣಿಗೆ ಪೂರ್ಣ ಪ್ರಮಾಣದ ನ್ಯಾಯ, ನೆಲೆ ಸಿಕ್ಕಿಲ್ಲವೆನ್ನಬಹುದು. ಈಚೀಚೆಗೆ ಎಚ್ಚೆತ್ತ ಸಮಾಜ ವರದಕ್ಷಿಣೆಯ ವಿರುದ್ಧ ಹೋರಾಡಿ ಸಾಕಷ್ಟು ನಿಯಂತ್ರಣಗಳನ್ನು ರೂಪಿಸಿದ್ದರೂ ವರದಕ್ಷಿಣೆಯ ಭೂತವಿನ್ನೂ ನಾಶವಾಗಿಲ್ಲ. ವರದಕ್ಷಿಣೆ ವಿಧೇಯಕದ ಪ್ರಕಾರ ದೌರ್ಜನ್ಯವೆಸಗಿದವರು ವಾರಂಟಿಲ್ಲದೇ ಬಂಧಿಸಲ್ಪಡಬಹುದು. ಆದರೆ ಬಹಳಷ್ಟು ಸಂದರ್ಭಗಳಲ್ಲಿ ಆರೋಪಿಗಳು ಜಾಮೀನು ಪಡೆದು ಹೊರಬಂದ ಸಾಕ್ಷಿಪುರಾವೆಗಳಿವೆ. ಅಲ್ಲದೆ ವರದಕ್ಷಿಣೆ ದೌರ್ಜನ್ಯಗಳನ್ನು ಸಾಬೀತುಪಡಿಸುವುದು ಸುಲಭವಲ್ಲ. ಹೆಣ್ಣು ಹೆತ್ತ ತಂದೆ-ತಾಯಿ, ಹೆಣ್ಣು, ಗಂಡು, ಗಂಡಿನ ತಂದೆ-ತಾಯಿ ಎಲ್ಲರೂ ವಿಶಾಲ ಮನಸ್ಕರಾಗಿ ವರದಕ್ಷಿಣೆ ಪಿಡುಗಿಗೆದುರಾಗಿ ವೈಯಕ್ತಿಕ ಸಮರವನ್ನು ಮಾಡಬೇಕಾಗುತ್ತದೆ.

ಎಚ್ಚೆತ್ತ ಜನ ಸಮುದಾಯ ಏನೆಲ್ಲಾ ಸಾಧಿಸಬಹುದೆಂಬುದಕ್ಕೆ ತಿಪಟೂರಿನ 'ಶಶಿಕಲಾ'ಳ ಘಟನೆ ಕಣ್ಣೆದುರಿಗೆ ನಿಲ್ಲುತ್ತದೆ. ವರದಕ್ಷಿಣೆ ಕಿರುಕುಳ ತಾಳಲಾರದೇ ಸಣ್ಣ ಮಗುವನ್ನು ಬಿಟ್ಟು ಆತ್ಮಹತ್ಯೆ ಮಾಡಿಕೊಂಡ ಶಶಿಕಲಾಳಿಗೆ ತಿಪಟೂರಿನ ಜನರೆಲ್ಲಾ ಬೆಂಬಲವಾಗಿ ನಿಂತು ಅವಳ ಅತ್ತೆ-ಮಾವ ಮತ್ತು ಗಂಡನಿಗೆ ಸಾಮಾಜಿಕ ಬಹಿಷ್ಕಾರ ಹಾಕಿದರು. ಅಂತಹ ದಿಟ್ಟತನವನ್ನು ಪ್ರತಿ ಕಾಲೋನಿಯಲ್ಲಿ, ಸಮಾಜದಲ್ಲಿ, ವಠಾರದಲ್ಲಿ, ಮನೆಯಲ್ಲಿ, ಹಳ್ಳಿಯಲ್ಲಿ, ಸಮಾಜದಲ್ಲಿ ಅನುಸರಿಸಬೇಕು. ಪ್ರಬಲ ಜನಾಭಿಪ್ರಾಯಕ್ಕೆ ವಿರುದ್ಧವಾಗಿ ನಡೆಯಲು ಪ್ರತಿಯೊಬ್ಬ ವ್ಯಕ್ತಿಯೂ ಹೆದರುತ್ತಾನೆ. ಸಾವಿರ, ಲಕ್ಷಗಟ್ಟಲೆ ಹಣ ಸುರಿದಾದರೂ ತಮ್ಮ ಹೆಣ್ಣು ಮಕ್ಕಳನ್ನು ಸಿರಿವಂತನಾದ, ಉನ್ನತ ವ್ಯಾಸಂಗ ಮಾಡಿ ಭಾರೀ ಹುದ್ದೆಯಲ್ಲಿರುವವರಿಗೆ ಕೊಟ್ಟು ಮದುವೆ ಮಾಡಬೇಕೆಂಬ ಉತ್ಸಾಹ ತಗ್ಗಬೇಕು. ವರದಕ್ಷಿಣೆ ಕೊಡಲಾಗದಿದ್ದರೂ ತಮ್ಮಲ್ಲಿರುವ ಹಣದೊಂದಿಗೆ ಆಸ್ತಿಪಾಸ್ತಿ ಮಾರಿ, ಸಾಲ ಮಾಡಿ, ಕಂತಿನಲ್ಲಿ ತೀರಿಸುವೆವೆಂದು ಭಾಷೆ ಕೊಟ್ಟು, ಹೆಣ್ಣನ್ನು ಗಂಡನ ಮನೆಗೆ (ಕಸಾಯಿಯಂಗಡಿಗೆ ಕುರಿಯನ್ನು ಕಳಿಸಿದಂತೆ) ಅಟ್ಟುವುದನ್ನು ತಂದೆ ತಾಯಿಗಳು ತಡೆಯಬೇಕು.

ಈ ವರದಕ್ಷಿಣೆಯ ಪಿಡುಗು ಹೋಗಬೇಕಾದರೆ ಹೆಣ್ಣು ಮಕ್ಕಳ ಬಗ್ಗೆ ಇರುವ ನಿಲುವೇ ಬದಲಾಗಬೇಕು. ಹೆಣ್ಣೆಂದರೆ ಹೊರೆಯೆಂದು ಭ್ರೂಣಸ್ಥಿತಿಯಲ್ಲಿರುವಾಗಲೇ ಹೊಸಕಿ ಹಾಕುತ್ತಿರುವ ಸಮಾಜದಲ್ಲಿ ಹೆಣ್ಣಿಗೊಂದು ಆದ್ಯತೆ ಕಲ್ಪಿಸಬೇಕು. ಹೆಣ್ಣೆಂದರೆ ಮದುವೆಯಾಗಿ ಮಕ್ಕಳನ್ನು ಹೆರುವ ಯಂತ್ರ, ಮನೆಯ ಕೆಲಸಗಾತಿ ಎನ್ನುವ ನಿಲುವು ಹೋಗಬೇಕು. ಅವಳು ದೇಶದ ಸತ್ವಶಕ್ತಿ. ಪುರುಷನ ಅರ್ಧಾಂಗಿ, ದೇಶದ ಸಂಸ್ಕೃತಿ ಪರಂಪರೆಗೆ ಪೂರಕ, ದೇಶದ ಸ್ಥಿತಿಗತಿಯ ಕೈಗನ್ನಡಿ ಎನ್ನುವುದನ್ನು ಮರೆಯಬಾರದು.

ವಿವಾಹವನ್ನು ಸಾಮಾಜಿಕ ಅಂಗವಾಗಿ ಮಾಡಿ ವೈಭವೀಕರಿಸುವುದರಿಂದ ಅನೇಕ ದೋಷಗಳು ಉತ್ಪನ್ನವಾಗುವುವು. ವಿವಾಹವೇನಿದ್ದರೂ ಗಂಡು - ಹೆಣ್ಣಿನ ವೈಯಕ್ತಿಕ ವಿಷಯ. ಅವರಿಬ್ಬರೇ ಚರ್ಚಿಸಿ ನಿರ್ಧರಿಸಿಕೊಳ್ಳಬೇಕು. ಆಗ ವರದಕ್ಷಿಣೆಯ ಪಿಡುಗು ಮರೆಯಾಗುವುದರಲ್ಲಿ ಸಂದೇಹವಿಲ್ಲ.

**ಜೀವಾವಧಿ ಶಿಕ್ಷೆ**

೧೯೮೮ರ ಜೂನ್ ೭ರ ನವದೆಹಲಿಯ ಅತಿರಿಕ್ತ ಸೆಷನ್ಸ್ ನ್ಯಾಯಾಧೀಶೆ ಶ್ರೀಮತಿ ಸಂತೋಷ್ ದುಗ್ಗಾಲ್‌ರವರು, ಮದುವೆಯಾಗಿ ಒಂದೂವರೆ ವರ್ಷವಾಗಿದ್ದು ೧೦ ತಿಂಗಳ ಮಗುವಿನ ತಾಯಾಗಿದ್ದ ೨೦ ವರ್ಷದ ಸೊಸೆಯನ್ನು ಬೆಂಕಿಯಿಟ್ಟು ಕೊಂದದ್ದಕ್ಕಾಗಿ ವಯೋವೃದ್ಧ ಅತ್ತೆ ಹರ್ಬನ್ಸ್ ಕೌರ್ (೬೦ವರ್ಷ) ಮತ್ತು ಅವಳ ಮಾವ ಇಂದರ್‌ಕೌರ್ (೮೦ ವರ್ಷ) ಇಬ್ಬರಿಗೂ ಜೀವಾವಧಿ ಶಿಕ್ಷೆ ವಿಧಿಸಿದರು.

**ಮರಣ ದಂಡನೆ**

ದೆಹಲಿಯ ಅಡಿಷನಲ್ ಸೆಷನ್ಸ್ ನ್ಯಾಯಾಧೀಶರಾದ ಶ್ರೀ ಎಸ್.ಎಂ.ಅಗರವಾಲ್‌ರವರು ೨೭.೫.೧೯೮೩ರಂದು ಗರ್ಭಿಣಿ ಹೆಂಡತಿಯೊಬ್ಬಳನ್ನು ವರದಕ್ಷಿಣೆ ಸಾಕಷ್ಟು ತರಲಿಲ್ಲವೆಂದು ಕೊಂದ ಆಪಾದನೆಯ ಮೇಲೆ ಆಕೆಯ ಗಂಡ, ಗಂಡನ ಅಣ್ಣ ಮತ್ತು ಅತ್ತೆಗೆ ಮರಣ ದಂಡನೆ ವಿಧಿಸಿದರು.

ಕೇವಲ ೮ ತಿಂಗಳ ಹಿಂದೆ ಮದುವೆಯಾದ ಎಂಟು ತಿಂಗಳ ಗರ್ಭಿಣಿಯಾದ ಗೋಯಲ್ (೨೧ವರ್ಷ) ಎಂಬುವಳನ್ನು ಸಾಕಷ್ಟು ವರದಕ್ಷಿಣೆ ತರಲಿಲ್ಲವೆಂಬ ಕಾರಣಕ್ಕಾಗಿ ಆಕೆಯ ಗಂಡ ಲಕ್ಷ್ಮಣಕುಮಾರ್ (೨೫), ಭಾವ ಸುಭಾಷ್‌ಚಂದ್ರ(೨೮) ಮತ್ತು ಅತ್ತೆ ಶಕುಂತಲಾದೇವಿ(೫೩) ಮೂವರೂ ಸೇರಿ ೨೧.೧೨.೧೯೮೦ರಂದು ಸೀಮೆ ಎಣ್ಣೆ ಸುರಿದು ಬೆಂಕಿ ಹಚ್ಚಿ ಕೊಲೆ ಮಾಡಿದ್ದರು. "ಇವರು ಮಾಡಿರುವುದು ಚರಿತ್ರೆಯ ಅತ್ಯಂತ ಹೀನಕೃತ್ಯ. ಇವರನ್ನು ಯಾವ ಕರುಣೆಯೂ ತೋರದೇ ಸಾಯುವವರೆಗೆ ನೇಣಿಗೇರಿಸಬೇಕು" ಎಂದು ತೀರ್ಪಿತ್ತರು. ಸುಧಾಳಿಗೆ ಗಂಡು ಮಗು ಹುಟ್ಟಿದರೆ ಅವಳು ತೌರಿನಿಂದ ೧೦ ಸಾವಿರ ನಗದು, ಸ್ಕೂಟರ್, ರೆಫ್ರಿಜರೇಟರ್ ತರಬೇಕು ಎಂದು ಆರೋಪಿಗಳು ಆಜ್ಞೆ ಮಾಡಿದ್ದರು. ಸುಧಾ ಸ್ಪಷ್ಟ ಉತ್ತರ ನೀಡದಿದ್ದಾಗ ಅವಳ ಮೇಲೆ ಸೀಮೆಎಣ್ಣೆ ಸುರಿದು ಬೆಂಕಿಯಿಟ್ಟು ಕೊಲೆ ಮಾಡಿದ್ದರು.

**ಪರಿಣಾಮ**

ಸುಧಾಗೋಯಲ್‌ಳ ವರದಕ್ಷಿಣೆ ಕೊಲೆ ಪ್ರಕರಣದಲ್ಲಿ ಶ್ರೀ ಅಗರವಾಲರು ತೀರ್ಪಿತ್ತ ನಂತರ ಆಪಾದಿತರು ದೆಹಲಿಯ ಉಚ್ಚ ನ್ಯಾಯಾಲಯಕ್ಕೆ ಅಪೀಲು ಸಲ್ಲಿಸಿದಾಗ ಸಂಶಯ ಲಾಭದ ಮೇಲೆ ಆರೋಪಿಗಳನ್ನು ಬಿಡುಗಡೆ ಮಾಡಲಾಯಿತು. ಈ ಪ್ರಕರಣ ಉಚ್ಚನ್ಯಾಯಾಲಯದಲ್ಲಿ ವಿಚಾರಣೆಯಲ್ಲಿದ್ದಾಗ ಶ್ರೀ ಅಗರವಾಲರು ಈ ಪ್ರಕರಣದ ಬಗ್ಗೆ ಟಿ.ವಿ.ಯಲ್ಲಿ ಮಾತನಾಡಿದರೆಂದು ಅವರಿಗೂ ನೋಟೀಸ್ ಕೊಡಲಾಯಿತು. ಮಹಿಳೆಯರ ಮೇಲಿನ ದೌರ್ಜನ್ಯದ ಬಗ್ಗೆ ನ್ಯಾಯಾಲಯ ತೋರಿಸುವ ಧೋರಣೆ ಇಲ್ಲಿ ಕಂಡುಬರುತ್ತದೆ.



# ಬಸವ ಕೇಂದ್ರ

( ಕೇಂದ್ರ ಕಚೇರಿ : ಬಸವಕಲ್ಯಾಣ )

ಮುಖ್ಯ ಕಚೇರಿ : ಶ್ರೀ ಮುರುಘರಾಜೇಂದ್ರ ಬೃಹನ್ಮಠ, ಚಿತ್ರದುರ್ಗ - ೫೭೭ ೫೦೨

ಎಲ್ಲಾ ತಾಲೂಕು, ಎಲ್ಲಾ ಜನರಿಗೂ ಅಗತ್ಯವಾಗಿ ಬೇಕಾಗಿರುವ ಜಗತ್ತಿನ ಪ್ರಚಲಿತ ಸಮಸ್ಯೆಗಳಿಗೆ ಉತ್ತರವಾಗಿರುವ ಬಸವ ತತ್ವಗಳನ್ನು ಪ್ರಮಾಣಿಕವಾಗಿ ಪ್ರಸಾರ ಮಾಡುವ ಹಾಗೂ ಅನುಷ್ಠಾನಕ್ಕೆ ತರುವ ಉದ್ದೇಶದಿಂದ ಹುಟ್ಟಿರುವ ''ಬಸವ ಕೇಂದ್ರ'' ಸಂಸ್ಥೆಯು ಸಮರ್ಥವಾಗಿ ಕಾರ್ಯ ನಿರ್ವಹಿಸಲು ಹಾಗೂ ನಾಡಿನಾದ್ಯಂತ ತನ್ನ ಶಾಖೆಗಳನ್ನು ತೆರೆಯಲು ಎಲ್ಲರ ಸಲಹೆ, ಸಹಕಾರ, ಬೆಂಬಲ, ಪ್ರೋತ್ಸಾಹಗಳನ್ನು ಬಯಸುತ್ತೇವೆ.

ಅಧ್ಯಕ್ಷರು - ಸದಸ್ಯರು

**ಬಸವ ಕೇಂದ್ರ**

# ಕಿಲ ಕಿಲ

○ ಗೋಪಾಲಕೃಷ್ಣ ವಂಡ್ಸೆ


ಗಣೇಶ್ ಜೋಗಿ

ಚಿಣ್ಣರೆ,
ಈ ಕೆಳಗಿನ ಪುಟಾಣಿ ಪದ್ಯಗಳಲ್ಲಿ ಆರು ಪಕ್ಷಿಗಳ ಹೆಸರಿವೆ.
ಓದುತ್ತಿರುವಾಗಲೇ ಊಹಿಸಬಲ್ಲಿರಾ?

೧
ನೀರಲಿ ತೇಲುವ
ಪುಟ್ಟ ಹಡಗು
ದಡದಲಿ ತೋರ್ವದು
ನಡೆಯುವ ಬೆಡಗು
ಕೊಕ್ಕು ನೋಡಿದರೆ
ಚಪ್ಪಟೆ ತುಗಡು
ನೋಡೋಣ ಜಾಣ
ಉತ್ತರ ಮಡಗು

೨
ನಮ್ಮ ದೇಶದ
ರಾಷ್ಟ್ರ ಪಕ್ಷಿ
ರೆಕ್ಕೆ ಬಿಡಿಸಿರೆ
ನೂರಾರು ಅಕ್ಷಿ
ಗುಡುಗು ಸಿಡಿಲಿಗೆ
ಹೇಳ್ವುದು ಸಾಕ್ಷಿ
ಹೇಳಿರಿ ಚಿಣ್ಣರೆ
ಕುಡಿದ್ಹಾಗೆ ಪೆಪ್ಸಿ

೩
ಮನೆಯನು ಕಂಡು
ಕಟ್ಟುವುದು ಗೂಡು
ಚಿವ್ ಚಿವ್ ಎಂದು
ಹೇಳುವುದು ಹಾಡು
ಗುಟುಕಿಗಾಗಿಯೂ
ಸೇರದು ಕಾಡು
ಯಾವ ಹಕ್ಕಿ ಎಂದು
ಯೋಚನೆ ಮಾಡು

೪
ಬೆಕ್ಕಿನ ಮೋರೆ
ಹೋಲುವ ಹಕ್ಕಿ
ಮನುಷ್ಯರ ಹಾಗೆ
'ಹ್ಹೂಂ' ಗುಟ್ಟುವ ಹಕ್ಕಿ
ಇರುಳಲಿ ಬಹಳ
ಹಾರುವುದು ಸೊಕ್ಕಿ
ಕೂಡಲೆ ಇದರಲಿ
ಉತ್ತರ ಹೆಕ್ಕಿ

೫
ಉದ್ದನೆ ಕಾಲು
ಮೈಬಣ್ಣ ಹಾಲು
ಮೀನನು ತಿನ್ನಲು
ತಾ ತುಂಬ ಮೇಲು
ಆಗಸಕೆ ಏರಲು
ಬೇಕಿದಕೆ ಸಾಲು
ಏನೆಂದು ಬಾಲು
ಬೇಗನೆ ಹೇಳು

೬
ಕೆಲಸ ಮಾಡದ
ಸೋಮಾರಿ ಕೊಟ್ಟೆ
ಕಾಗೆ ಗೂಡಲಿ
ಇಡುವುದು ಮೊಟ್ಟೆ
ದನಿ ತೆಗೆದರೆ
ಕಂಚಿನ ತಟ್ಟೆ
ಇಗೋ ಜಾಣೆ
ಹೇಳು - ಬಿಟ್ಟೆ

**ಉತ್ತರ :**

೧. ಬಾತುಕೋಳಿ
೨. ನವಿಲು
೩. ಗುಬ್ಬಚ್ಚಿ
೪. ಗೂಬೆ
೫. ಕೊಕ್ಕರೆ
೬. ಕೋಗಿಲೆ

## ನಾನು ಮುಖ್ಯಮಂತ್ರಿಯಾದರೆ?

ಮಕ್ಕಳೇ,

ನೀವು ಮುಖ್ಯಮಂತ್ರಿಯಾದರೆ ನೀವು ಮೊದಲು ಮಾಡುವ ಕೆಲಸ ಯಾವುದು? ಈ ಬಗ್ಗೆ ಶಾಂತವಾಗಿ ಕುಳಿತು ಯೋಚನೆ ಮಾಡಿ. ಮುಖ್ಯ ಮಂತ್ರಿಯಾಗುವ ಅವಕಾಶ ಸಿಕ್ಕರೆ ನೀವು ಮಾಡುವ ಕೆಲಸದ ಬಗ್ಗೆ ಐದು ಅಥವಾ ಆರು ವಾಕ್ಯಗಳೊಳಗೆ ಬರೆದು ನಮಗೆ ಕಳಿಸಿಕೊಡಿ. ಮುಂದಿನ ಸಂಚಿಕೆಯಲ್ಲಿ ನಿಮ್ಮ ಬರಹಗಳು ಪ್ರಕಟಗೊಳ್ಳುತ್ತವೆ.

**ಗಮನಿಸಿ :**

- ನಿಮ್ಮ ವಯಸ್ಸು ೧೫ ವರ್ಷ ಮೀರಿರಬಾರದು.
- ನಿಮ್ಮ ಅನಿಸಿಕೆಯನ್ನು ಬಿಳಿ ಹಾಳೆಯಲ್ಲಿ ಬರೆದು ಪಕ್ಕದಲ್ಲಿರುವ ಕೂಪನ್-೧ನ್ನು ಲಗತ್ತಿಸಿ ಈ ಕೆಳಗಿನ ವಿಳಾಸಕ್ಕೆ ಅಂಚೆಯಲ್ಲಿ ಕಳಿಸಿ.
- ನಿಮ್ಮ ಬರಹ ನಮಗೆ ತಲುಪಲು ಕೊನೆಯ ದಿನಾಂಕ: ೦೬-೦೭-೧೯೯೭.

ಸಂಪಾದಕರು, ಬಿಸಿಲ ಬದುಕು
ಅಂಚೆ ಪೆಟ್ಟಿಗೆ ೭೯೫೧, ಬಸವೇಶ್ವರ ನಗರ, ಬೆಂಗಳೂರು-೭೯.

## ಕಿಲ ಕಿಲ ಕೂಪನ್ - ೧

ಹೆಸರು.......................................................

ತರಗತಿ.............................. ವಯಸ್ಸು....................

ತಂದೆ.......................................................

ತಾಯಿ.......................................................

ವಿಳಾಸ.......................................................

.......................................................

.......................................................

.......................................................

# ಕ್ಲಾಸ್ ರೂಂ

## ಮೆಟ್ಟು !

ಧಾರವಾಡ ಜಿಲ್ಲೆಯ ಶಿಕ್ಷಕರೊಬ್ಬರು ಪ್ರಾಥಮಿಕ ಶಾಲೆಯಲ್ಲಿ ಕಲಿಸುತ್ತಿದ್ದರು. ಅವರಿಗೆ ಬಿಜಾಪುರ ಜಿಲ್ಲೆಯ ಇಂಡಿ ತಾಲೂಕಿಗೆ ವರ್ಗವಾದ ನಿಮಿತ್ಯ ಅಲ್ಲಿ ಹೊಸದಾಗಿ 'ಕ್ಲಾಸ್‌ರೂಂ' ಪ್ರವೇಶ ಮಾಡಿದರು. ತರಗತಿಯ ಮಕ್ಕಳೆಲ್ಲಾ ಎದ್ದು ನಿಂತು ಗೌರವ ಸೂಚಿಸಿದರು. ಆಗ ಉಪಾಧ್ಯಾಯರು 'ಎಲ್ಲರೂ ಮೆಟ್ಟಿನ ಮೇಲೆ ಕೂಡ್ರಿ' ಎಂದು ಆಜ್ಞೆ ಮಾಡಿದರು. ಮಕ್ಕಳಿಗೆ ಆಶ್ಚರ್ಯವಾಗಿ ಹಾಗೇ ನಿಂತರು. ಮತ್ತೆ ಉಪಾಧ್ಯಾಯರು ಗದರಿಸಿ 'ಮೆಟ್ಟಿನ ಮೇಲೆ ಕೂಡ್ರಲು' ಹೇಳಿದರು. ಹುಡುಗರೆಲ್ಲಾ ಬಾಗಿಲ ಬಳಿ ಹೋಗಿ ಉಪಾಧ್ಯಾಯರ 'ಮೆಟ್ಟು' ಗಳ ಹತ್ತಿರ ಕುಳಿತರು! ಬಿಜಾಪುರ ಭಾಷೆಯಲ್ಲಿ ಮೆಟ್ಟು ಎಂದರೆ ಪಾದರಕ್ಷೆ. ಶಿಕ್ಷಕರಿಗೆ ಧಾರವಾಡದ ಮೆಟ್ಟು ಎಂದರೆ ಸ್ಥಳ (ಜಾಗೆ) ಎಂಬರ್ಥ ತಿಳಿದಿತ್ತು. ನಂತರ ಜಾಗೆಯ ಮೇಲೆ ಕುಳಿತುಕೊಳ್ಳಿರೆಂದು ಹೇಳಲು ಮರೆಯಲಿಲ್ಲ. ನಂತರ ತಪ್ಪಿಯೂ ಕೂಡಾ 'ಮೆಟ್ಟಿನ ಮೇಲೆ' ಎಂಬ ಪದ ಬಳಸಲಿಲ್ಲ.

## ಒಮ್ಮೆ ಹೀಗಾಯಿತು

ಬಿಜಾಪುರ ಜಿಲ್ಲೆಯ ಬಾಗಲಕೋಟೆ ವಿದ್ಯಾ ಕೇಂದ್ರವೆಂದು ಪ್ರಸಿದ್ಧ.

ಅನೇಕ ಜನ ಗ್ರಾಮೀಣ ಪ್ರದೇಶದ ಪಾಲಕರು ತಮ್ಮ ಮಕ್ಕಳನ್ನು ಮಾಧ್ಯಮಿಕ ಶಿಕ್ಷಣ ಪಡೆಯಲು ಕಳಿಸುತ್ತಿದ್ದರು. ಸಾವಿರಾರು ವಿದ್ಯಾರ್ಥಿಗಳು ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿದ್ದರು. ಗ್ರಾಮೀಣ ವಿದ್ಯಾರ್ಥಿಯೊಬ್ಬನಿಗೆ, ಶಹರದ ವಿದ್ಯಾರ್ಥಿಯೊಬ್ಬ ಕುಚೇಷ್ಟೆ ಮಾಡಲು ಇಂಗ್ಲಿಷ್ ಶಿಕ್ಷಕರಿಗೆ Canದ ಭೂತಕಾಲ ಏನು? ಎಂದು ಕೇಳಲು ಹೇಳಿದನು. ಗಂಭೀರ ಸ್ವಭಾವದ ಶಿಕ್ಷಕರು, ಮುಗ್ಧ ವಿದ್ಯಾರ್ಥಿಯೊಬ್ಬ ಹೀಗೆ ಕ್ಯಾನ್ (Can)ದ ಭೂತಕಾಲ ಏನಾಗುತ್ತದೆ ಸಾರ್! ಎಂದಾಗ ತಬ್ಬಿಬ್ಬಾಗಿ ಬೆಂಚಿನ ಮೇಲೆ ನಿಲ್ಲಿಸಿದರು. ನಿಜ ಹೇಳು, ಈ ಪ್ರಶ್ನೆ ಕೇಳಲು ಯಾರು ತಿಳಿಸಿದರು? ಆ ವಿದ್ಯಾರ್ಥಿ ತನ್ನ ಗೆಳೆಯನ ಹೆಸರನ್ನು ಹೇಳಿದನು. ಅವನನ್ನು ಎಬ್ಬಿಸಿ ಕೇನ (ಬೆತ್ತ)ದಿಂದ ಬಾರಿಸಿದರು. ಇಂಗ್ಲಿಷ್ ಶಿಕ್ಷಕರ ಒಂದು ಕಣ್ಣು ಕುರುಡಾಗಿತ್ತು. ವಿದ್ಯಾರ್ಥಿಯ ಉದ್ದೇಶ ಕ್ಯಾನ್ (Can)ದ ಭೂತ ಕಾಲ Couldಉ (ಕುಡ್ಡು-ಕರುಡು) ಎಂದು ಹೇಳಿಸುವದಾಗಿತ್ತು. ಆದರೂ ಆ ಶಿಕ್ಷಕರು ಮಕ್ಕಳಿಗೆ ಉತ್ತರವನ್ನು ಹೇಳಿಯೇ ಬಿಟ್ಟರು. ತಮ್ಮನ್ನು ಕುಚೇಷ್ಟೆ ಮಾಡಲು ಹೂಡಿದ ತಂತ್ರದ ಅರಿವನ್ನುಂಟು ಮಾಡಿದರು. ಈ ಘಟನೆ ಮರೆಯಲಾಗದ ಸಂಗತಿಯಾಗಿಯೇ ಉಳಿಯಿತು

○ ನಾಗರಾಜ ಹಳ್ಳಿ

# ಮಿದುಳಿನ ಶಕ್ತಿ ಬೆಳೆಸಿಕೊಳ್ಳುವ ಉಪಾಯ

**ಮಾ**ನವನ ಈ ದೇಹಕ್ಕೆ ವೈಜ್ಞಾನಿಕವಾಗಿ (ಕೆಮಿಕಲ್ ಬಾಡಿ) ಕೇವಲ ಮೂರು ರೂಪಾಯಿ ಬೆಲೆ! ಹೌದು ಇದರಲ್ಲಿ ಸಂದೇಹ ವಿಲ್ಲ. ಐಸಾಕ್ ನ್ಯೂಟನ್, ಎಡಿಸನ್ ಹಾಗೂ ಗ್ರಹಾಂಬೆಲ್ ನಂತಹ ಸಂಶೋಧಕರ ದೇಹದ ಬೆಲೆಯೂ ಮೂರೇ ರೂಪಾಯಿ! ಆದರೆ ಮಾನವನ ಶರೀರದಲ್ಲಿನ ಮೆದುಳನ್ನು ಕ್ರಿಯಾ ಶೀಲಗೊಳಿಸಿ ಅದರ ಅಂತಃಶಕ್ತಿಯನ್ನು ಬಳಸಿ ಕೊಂಡಾಗ ಅದಕ್ಕೆ ಬೆಲೆ ಕಟ್ಟಲಾಗುವದಿಲ್ಲ.

ಮಾನವನ ವ್ಯಕ್ತಿತ್ವ ವಿಕಾಸದಲ್ಲಿ ಬಹುಮುಖ್ಯ ಪಾತ್ರ ವಹಿಸುವುದು "ಬ್ರೇನ್". ಮಾನಸಿಕ ಹಾಗೂ ದೈಹಿಕ ಬೆಳೆವಣಿಗೆಗಳಲ್ಲಿ ಅಜಗಜಾಂತರವಿದೆ. ಅಂದರೆ ದೇಹವನ್ನು ಬೆಳಸಿದಾಗ ಅದರ ಜೀವಂತಿಕೆಯನ್ನು ಹೆಚ್ಚು ಮಾಡಬಹುದೇ ವಿನಾ ಅದನ್ನು ಯಾವಾಗಲೂ ಚುರುಕಾಗಿಡಲು ಸಾಧ್ಯವಿಲ್ಲವೆಂಬುದು ಸಂಶೋಧಕರ ಮಾತು.

ಈ ಮೆದುಳಿನ ಬೆಳವಣಿಗೆಗೆ ಅಂದರೆ ಕ್ರಿಯಾಶೀಲತೆಗೆ ಏನು ಮಾಡಬೇಕೆಂಬುದು ಬಹುಮುಖ್ಯ ಪ್ರಶ್ನೆ. ಕೇವಲ ಏಳೆಂಟು ಗಂಟೆಗಳ ಕಾಲ ಕೆಲಸವನ್ನೋ, ನೌಕರಿ ಯನ್ನೋ ಮಾಡಿ ಉಳಿದ ವೇಳೆಯಲ್ಲಿ ಮನಬಂದಂತೆ ಮಜಾ ಮಾಡುವುದರಿಂದ ಮಿದುಳನ್ನು ಚುರುಕುಗೊಳಿಸಲು ಸಾಧ್ಯ ವಿಲ್ಲ. ಕೆಲಸದ ನಂತರ ಉಳಿಯುವ ಸಮಯ ವನ್ನು ಅತ್ಯುಪಯುಕ್ತವಾಗಿ ಬಳಸಿಕೊಳ್ಳುವುದೇ ಮಿದುಳಿನ ಉತ್ತಮ ವ್ಯಾಯಾಮಕ್ಕೆ ಕಾರಣ ವಾಗುತ್ತದೆ.

**ಏನು ಮಾಡಬೇಕು?**

ಬದುಕನ್ನು ಉತ್ತಮಗೊಳಿಸಲು ಹಾಗೂ ಯಶಸ್ಸನ್ನು ಪಡೆಯಲು ನಮ್ಮ ನಿರ್ದಿಷ್ಟ ಉದ್ದೇಶಗಳು ಕಾರಣವಾಗುತ್ತವೆ. ನಮ್ಮ ಉದ್ದೇಶ ಯಾವುದು ಎಂಬ ಬಗ್ಗೆ ಪೂರ್ಣ ಲಕ್ಷ್ಯವಿರಬೇಕು - ಇಡಬೇಕು. ಅದು ಮೌಲ್ಯ ಯುಳ್ಳ ಉದ್ದೇಶವಾಗಿರಬೇಕಾದುದು ಅಗತ್ಯ.

ಶುಚಿಯಾಗಿ ಸ್ನಾನ ಮಾಡಿ, ಉತ್ತಮ ಬಟ್ಟೆ ಹಾಕಿಕೊಂಡು ನೀವು ಟಿಪ್-ಟಾಪ್ ಆಗಿ ನಿಂತು ಕೊಳ್ಳುತ್ತೀರೆನ್ನಿ. ಅದೂ ಅಲ್ಲದೆ ಹಲವಾರು ಬಾರಿ ಕನ್ನಡಿಯೊಳಗೆ ನಿಮ್ಮ ಮುಖವನ್ನು ಮೇಲಿಂದ ಮೇಲೆ ನೋಡಿ ತಿದ್ದಿ ತೀಡಿಕೊಳ್ಳುತ್ತೀರಿ. ಕಣ್ಣಿಗೆ ಹೊಡೆಯುವ, ಮಿಂಚುವ ಶೂ ಧರಿಸುತ್ತೀರಿ. ಆದರೆ ಇವೆಲ್ಲ ಆದ ನಂತರ ಹೋಗುವುದೆಲ್ಲಿಗೆ? ಎಂಬ ಪ್ರಶ್ನೆಗೆ ಸರಿಯಾದ ಉತ್ತರ ದೊರೆಯದಿದ್ದಲ್ಲಿ ನೀವೆಲ್ಲಿಗೆ ಹೋಗುತ್ತೀರಿ! ಹಾಗೇಯೇ ನಿಮ್ಮ ಸಿದ್ಧತೆಗಳು ಉದ್ದೇಶದ ಮೇಲಣವೇ ಅವಲಂಬಿಸಿದ್ದರೆ ಸರಿಯಾಗಿ ಅಲ್ಲಿ ತಲುಪುವ ಮಾರ್ಗವನ್ನು ಹಿಡಿಯುತ್ತೀರಿ.

ಅದಕ್ಕೆಂದೇ ನಿರ್ದಿಷ್ಟ ಹಾಗೂ ನಿಖರ

**ಮಾನವನ ದೇಹದ ರಾಸಾಯನಿಕ ಬೆಲೆ ಕೇವಲ ಮೂರು ರೂಪಾಯಿ! ಮಿದುಳಿನ ಅಂತಃಶಕ್ತಿ ಬಳಸಿಕೊಂಡಾಗ ಅದರ ಬೆಲೆ ಅಮೌಲ್ಯ.**

ಉದ್ದೇಶವು ನಿಮ್ಮನ್ನು ಯಶಸ್ಸಿನ ಹಾದಿಗೆ ತಂದು ನಿಲ್ಲಿಸುತ್ತದೆ.

ನಿಮ್ಮಲ್ಲಿರುವ 'ಸ್ಟ್ರಾಂಗ್ ಪಾಯಿಂಟ್'ನ್ನು ಹೊರತೆಗೆದು ಅದಕ್ಕೆ ಸರಿಯಾದ ಪಾಲನೆ-ಪೋಷಣೆ ಮಾಡಬೇಕು. ನಿಮ್ಮ ಉದ್ದೇಶವು ಈ ಪಾಯಿಂಟ್‌ನ ಮೇಲೆ ಸಂಪೂರ್ಣವಾಗಿ ಅವಲಂಬಿತವಾಗಿರುವಂತೆ ನಿಮ್ಮ ವಿಕಸನದ ರೆಕ್ಕೆಗಳನ್ನು ತೆರೆದುಕೊಳ್ಳಬೇಕು.

ಇದಕ್ಕಾಗಿ ನಿಮ್ಮ ಮೆದುಳು ಸರಿಯಾದ ಅಧ್ಯಯನ ಮಾಡುವ ಮೂಲಕ ತಿಳಿವಳಿಕೆ-ಜ್ಞಾನ ಪಡೆದುಕೊಳ್ಳಬೇಕು. ವ್ಯಕ್ತಿತ್ವ ವಿಕಾಸದ ಪುಸ್ತಕ-ಉಪನ್ಯಾಸಗಳಲ್ಲಿ ಆದಷ್ಟು ಸಮಯ ವ್ಯಯಿಸುವುದು ಉದ್ದೇಶ ಸಾಧನೆಗೆ ಮಾರ್ಗ.

ಬರೀ ಐಡಿಯಾ-ಆಸೆ-ಕನಸುಗಳಿಂದ ಪ್ರಯೋಜನವಾಗದು. ಅವುಗಳನ್ನು ಒರೆಗೆ ಹಚ್ಚಿ ಕ್ರಿಯಾತ್ಮಕವಾಗಿ ನೋಡುವ ಕುತೂಹಲ ನಿಮ್ಮಲ್ಲಿರಬೇಕು. ಉದಾಹರಣೆಗೆ ನೀವೊಂದು ಬಿಸಿನೆಸ್ ಮಾಡಬೇಕೆಂದಿದ್ದೀರಿ ಎಂದಿಟ್ಟು ಕೊಳ್ಳಿ, ಆ ಉದ್ದಿಮೆ-ಉದ್ಯೋಗದ ಕುರಿತಾದ 'ಐಡಿಯಾ'ಗಳೊಂದಿಗೆ ಅದರಲ್ಲಿ ಒಳಗೊಳ್ಳು ವಿಕೆ ಹೇಗೆ ಎಂಬುದನ್ನು ಮನದಟ್ಟು ಮಾಡಿ ಕೊಳ್ಳಬೇಕು. ಸಂಬಂಧಪಟ್ಟ ಫ್ಯಾಕ್ಟರಿ-ಉದ್ದಿಮೆ ಗಳಲ್ಲಿ 'ಉಚಿತ' ಸೇವೆಯಾದರೂ ಸರಿ ನೀವು ಅಲ್ಲಿ ಹೋಗಿ ಅನುಭವ ಪಡೆಯಬೇಕು.

ಕನಸು ಕಾಣುವುದು ತಪ್ಪಲ್ಲ. ಅದನ್ನು ಜಾರಿ ಗೊಳಿಸುವುದು ಬಹು ಶ್ರಮದ - ಕಠಿಣ ಕೆಲಸ. ತೊಂದರೆಗಳು, ತಾಪತ್ರಯಗಳು ಈ ಸಂದರ್ಭ ದಲ್ಲಿ ಗುಣಾಕಾರದಲ್ಲಿ ಬರುವ ಸಾಧ್ಯತೆಗಳಿವೆ. ಅದಕ್ಕೆ ಮಿದುಳು ಸರಿಯಾಗಿ ಪ್ರತಿಕ್ರಿಯೆ ನೀಡುವ ಸಾಮರ್ಥ್ಯವೇ ವ್ಯಕ್ತಿತ್ವ ವಿಕಾಸ.

ಮಿದುಳು ಸಂಗ್ರಹಾಲಯದ ಗೂಡಾಗ ಬಾರದು ಅದು ಚಲನಶೀಲ ಮಿದುಳಾಗಬೇಕು. ಮ್ಯೂಸಿಯಂನಲ್ಲಿ ಇಡುವ 'ಬ್ರೇನ್' ಆಗಿದ್ದಾದರೆ ಅದರಲ್ಲಿ ಯಾವುದೇ ವಿಕಾಸದ ಅಂಶ ಕಾಣಲಾರದು. ನಿಮ್ಮ ಉದ್ಯೋಗ, ವ್ಯವಹಾರ ಹಾಗೂ ವಹಿವಾಟುಗಳಲ್ಲಿ ನೀವು ಹೇಗೆ ಮಿದುಳನ್ನು ಬಳಸಿಕೊಂಡಿದ್ದೀರಿ, ಬೆಳೆಸಿಕೊಂಡಿದ್ದೀರಿ ಎಂಬುದರ ಮೇಲೆ ನಿಮ್ಮ ಸಾಮಾಜಿಕ ಗೌರವ-ನೆಮ್ಮದಿ ಅವಲಂಬಿಸಿದೆ.

ಆಧುನಿಕ ಯುಗದಲ್ಲಿ ನಿಮಗೆ ಮಾಹಿತಿ, ಜ್ಞಾನ, ಸಂಶೋಧನೆ ಬಗ್ಗೆ ತಿಳಿವಳಿಕೆಗಳಿಗೆ ಕಡಿಮೆ ಇಲ್ಲ. ಅದು ದಿನದಿಂದ ದಿನಕ್ಕೆ ಹೆಚ್ಚಾಗುತ್ತ ನಡೆದಿದೆ. ಅದನ್ನು ಸೂಕ್ತವಾಗಿ ವಿನಿಯೋಗಿಸಿಕೊಳ್ಳುವುದಲ್ಲದೇ ಅದೆಲ್ಲಿದೆ ಎಂಬುದನ್ನು ಹುಡುಕುವುದು ಸಹ ಪ್ರಮುಖವಾದುದು.

**ಮಿದುಳನ್ನು ಆಕ್ರಮಿಸುವ ಭಯ!**

ಹೌದು! ಭಯ, ಆತಂಕ, ಸಂಕೋಚಗಳು ನಿಮ್ಮ ಮಿದುಳಿನ ಕ್ರಿಯಾಶೀಲತೆಗೆ ಭಂಗ ತರಬಹುದು. ಇದು ವ್ಯಕ್ತಿತ್ವ ವಿಕಾಸದಲ್ಲಿ ಅಡೆತಡೆಯನ್ನುಂಟು ಮಾಡಬಹುದು. ಇವುಗಳಿಂದ ಮೊದಲು ಮುಕ್ತರಾಗಬೇಕು. ನಿಮ್ಮ ಕೆಲಸ-ಕಾರ್ಯಗಳಿಗೆ ಅಗತ್ಯವಿರುವ ಜನರು ವ್ಯಕ್ತಿಗಳ ಪರಿಚಯ ಹಾಗೂ ಸಹಕಾರ ಪಡೆಯುವತ್ತ ಗಮನವಿರ ಬೇಕು. ನಿಮಗೆ ಹೆಚ್ಚು ಜನಸಂಪರ್ಕ ಉಂಟಾಗುವುದರಿಂದ ಹೆಚ್ಚು ಮನೋಧೈರ್ಯ ಬರುತ್ತದೆ ಎಂಬುದನ್ನು ನೆನಪಿಡಬೇಕು.

ಆತ್ಮವಿಶ್ವಾಸ ಹಾಗೂ ಸಾಹಸ ಕೈಗೆತ್ತಿಕೊಳ್ಳುವ ಧೈರ್ಯಗಳು ನಿಮ್ಮ ಮಿದುಳು ಹಾಗೂ ಮನಸ್ಸನ್ನು ಚಲನಶೀಲಗೊಳಿಸುತ್ತವೆ. ಈ ಚಲನಶೀಲತೆಯಲ್ಲಿ ಕಾರ್ಯ ಸಾಮರ್ಥ್ಯ ಹಾಗೂ ಪರಿಪೂರ್ಣತೆ ಮೂಡಿರುತ್ತದೆ. ಬರಿ ಜ್ಞಾನ ಅಥವಾ ತಿಳಿವಳಿಕೆಗಳಿಗಿಂತ 'ಸ್ಕಿಲ್' ಅಥವಾ ಅನುಭವೀ ಕೆಲಸಗಾರ ಎಂಬ ಹೆಸರು ಪಡೆಯುವುದು ನಿಮ್ಮ ಮುಂದಿನ ಸಾಧನೆಗೆ ಮಾರ್ಗ.

( ೭೧ನೇ ಪುಟಕ್ಕೆ )

# ಉತ್ತರ ಕರ್ನಾಟಕ ನಿರ್ಲಕ್ಷ್ಯಕ್ಕೊಳಗಾಗಿದೆಯೇ? ಯಾರಿಂದ? ಏಕೆ? ಪರಿಹಾರವೇನು?

*ಅತ್ಯಂತ ಸೂಕ್ಷ್ಮವೂ ಗಂಭೀರವೂ ಆದ ಪ್ರಾದೇಶಿಕ ಅಸಮತೋಲನ ವಿಷಯದ ಬಗ್ಗೆ ರಚನಾತ್ಮಕ ಚರ್ಚೆ ನಡೆದು ನಾಡು ಆರೋಗ್ಯಕಾರಿ ನೀಲುವು ತಳೆಯಲು ಅನುವಾಗಲೆಂಬ ಉದ್ದೇಶದಿಂದ ನಮ್ಮ ಮೊದಲ ಸಂಚಿಕೆಯಲ್ಲೇ ವೇದಿಕೆಯೊಂದನ್ನು ಒದಗಿಸಿದ್ದೇವೆ. ಈ ಕುರಿತ ಅಭಿಪ್ರಾಯ ಸಂಗ್ರಹಣೆ ಕಾರ್ಯಕ್ಕೆ ನಾನಾ ಸ್ತರಗಳ ಹಲವಾರು ಜವಾಬ್ದಾರಿಯುತ ವ್ಯಕ್ತಿಗಳು ಸ್ಪಂದಿಸಿದ್ದಾರೆ; ವಿಷಯದ ಮಹತ್ವವನ್ನು ಮನಗಂಡು ತಮ್ಮ ಪ್ರಾಮಾಣಿಕ ಚಿಂತನೆಯನ್ನು ''ಬಿಸಿಲ ಬದುಕು'' ಓದುಗರೆದುರು ಸಿಂಚಿಸಿದ್ದಾರೆ.*

*ಹಾಗೆಯೇ ಕೆಲವರು ನಮ್ಮ ಪ್ರಶ್ನಾವಳಿಗೆ ಉತ್ತರಿಸುವ ಗೊಡವೆಗೆ ಹೋಗದೆ ತಮ್ಮ ಹೊಣೆಗೇಡಿತನವನ್ನೋ, ಜಾಣತನವನ್ನೋ ಮೆರೆದು ನುಣುಚಿಕೊಂಡಿದ್ದಾರೆ. ಈ ಸಾಲಿಗೆ ಸೇರಿದ ಪ್ರಮುಖರೆಂದರೆ ಬಾಪು ಹೆದ್ದೂರಶೆಟ್ಟಿ, ಜೀವರಾಜ ಆಳ್ವ, ಲಲಿತಾ ನಾಯಕ್, ಎಂ.ಡಿ.ನಂಜುಂಡಸ್ವಾಮಿ, ವೀರಪ್ಪ ಮೊಯ್ಲಿ, ಅನಂತನಾಗ್, ಎಂ.ಪಿ.ಪ್ರಕಾಶ್, ಶ್ರೀನಿವಾಸ ಹಾವನೂರ, ತೋಂಟದ ಸಿದ್ಧಲಿಂಗ ಸ್ವಾಮೀಜಿ, ದೇವನೂರ ಮಹಾದೇವ.*

*ಇಲ್ಲಿ ಅಭಿವ್ಯಕ್ತಿ ಪಡೆದಿರುವ ಅಭಿಪ್ರಾಯಗಳ ಬಗ್ಗೆ ನಿಮಗೇನನ್ನಿಸುತ್ತೇ? ಇವುಗಳಿಗೆ ಹೊರತಾದ ಚಿಂತನೆಯನ್ನು, ಪರಿಹಾರವನ್ನು ನೀವು ಹೊಂದಿದ್ದೀರಾ? ಹಾಗಿದ್ದರೆ ನಿಮ್ಮ ಅನ್ನಿಸಿಕೆಗಳನ್ನು ಚುಟುಕಾಗಿ ಚುರುಕಾಗಿ ಬರೆದು ಕಳಿಸಿ. ಮುಂದಿನ ಸಂಚಿಕೆಯಲ್ಲಿ ನಿಮ್ಮ ಬರಹಗಳು ಪ್ರಕಟಗೊಳ್ಳುತ್ತವೆ.*

## ಪ್ರಶ್ನಾವಳಿ

- ಉತ್ತರ ಕರ್ನಾಟಕ ನಿರ್ಲಕ್ಷ್ಯಕ್ಕೊಳಗಾಗಿದೆಯೇ?
- ಆಗಿದ್ದರೆ ಯಾರಿಂದ? ಹೇಗೆ?
- ಉತ್ತರ ಕರ್ನಾಟಕದ ಅಭಿವೃದ್ಧಿಗೆ ಯಾರಾದರೂ ಅಡ್ಡಗಾಲು ಹಾಕಿದ್ದಾರೆಂದು ನೀವು ಭಾವಿಸುವಿರಾ?
- ಪ್ರಾದೇಶಿಕ ಅಸಮತೋಲನ ಉಂಟಾಗುವಲ್ಲಿ ಜನರ ಪಾತ್ರ ವಿದೆಯೇ? ಅಥವಾ ರಾಜಕಾರಣಿಗಳೇ ಸಂಪೂರ್ಣ ಹೊಣೆಗಾರರೇ?
- ಉತ್ತರ ಕರ್ನಾಟಕದ ಹಲವು ಮುಖ್ಯಮಂತ್ರಿಗಳು ನಮ್ಮ ರಾಜ್ಯ ಆಳಿದ್ದಾರೆ. ಈ ಪ್ರದೇಶದ ಅಭಿವೃದ್ಧಿಗೆ ಅವರ ಕೊಡುಗೆಯನ್ನು ಹೇಗೆ ಗುರುತಿಸುವಿರಿ? ಅವರು ತಮ್ಮ ಕರ್ತವ್ಯದಲ್ಲಿ ಎಲ್ಲಿಯಾದರೂ ಎಡವಿದ್ದಾರೆಂದು ನಿಮಗನ್ನಿಸುತ್ತದೆಯೇ ?
- ಪ್ರಾದೇಶಿಕ ಅಸಮತೋಲನ ತೊಲಗಿಸಲು ಇತ್ತೀಚೆಗೆ ಎದ್ದಿರುವ ಕೂಗಿನ ಬಗ್ಗೆ ಹೆಚ್.ಡಿ.ದೇವೇಗೌಡ, ಮುಖ್ಯಮಂತ್ರಿ ಜೆ.ಎಚ್. ಪಟೇಲ ಹಾಗೂ ಪಾಟೀಲ ಪುಟ್ಟಪ್ಪ ಇವರ ನಿಲುವುಗಳನ್ನು ನೀವು ಹೇಗೆ ಅರ್ಥೈಸುವಿರಿ?
- ಪ್ರಾದೇಶಿಕ ಅಸಮತೋಲನ ನೀಗಿಸಲು ಪ್ರತ್ಯೇಕ ರಾಜ್ಯ ರಚನೆಯ ಅಗತ್ಯವಿದೆಯೇ? ಈ ನಿಟ್ಟಿನಲ್ಲಿ ನೀವು ಸೂಚಿಸುವ ಪರಿಹಾರಗಳೇನು ?

# ಸುಲಭದಲ್ಲಿ ಸರಿ ಮಾಡಬಹುದಾದ ಸಮಸ್ಯೆ

ನನ್ನ ದೃಷ್ಟಿಯಲ್ಲಿ ಉತ್ತರ ಕರ್ನಾಟಕ-ದಕ್ಷಿಣ ಕರ್ನಾಟಕ ಎಂದು ಬೇರೆ ಬೇರೆ ಭಾಗವಾಗಿ ವಿಚಾರ ಮಾಡುವುದು ಸರಿ ಎಂದು ಕಾಣುವುದಿಲ್ಲ.

ಕರ್ನಾಟಕ ರಾಜ್ಯವಾಗಿ ರೂಪುಗೊಂಡಾಗ ಕರ್ನಾಟಕದ ಕೆಲವು ಭಾಗಗಳು ಕೆಲವು ದೃಷ್ಟಿಯಿಂದ ಹಿಂದೆ ಇದ್ದುದು ನಿಜ. ಅಂದಿನ ತಾರತಮ್ಯದ ಪ್ರಕಾರ ವಿದ್ಯಾವಂತರ ಸಂಖ್ಯೆಯನ್ನೇ ಗಣನೆಗೆ ತೆಗೆದುಕೊಂಡರೆ ಹಳೇ ಮೈಸೂರಿನ ವಿದ್ಯಾವಂತರ ಸಂಖ್ಯೆ ಶೇಕಡಾ ೨೦. ಮುಂಬಯಿ ಕರ್ನಾಟಕದ ನಾಲ್ಕು ಜಿಲ್ಲೆಗಳ ಸಂಖ್ಯೆ ಶೇಕಡಾ ೨೨, ಹೈದ್ರಾಬಾದ್ ಕರ್ನಾಟಕದ ಮೂರು ಜಿಲ್ಲೆಗಳ ಸಂಖ್ಯೆ ಶೇಕಡಾ ೩೫ರಷ್ಟು ಇದ್ದಿತು. ಹಾಗೆಯೇ ಬಳ್ಳಾರಿ ತೀರಾ ಹಿಂದುಳಿದಿತ್ತು. ಸಣ್ಣ ಪುಟ್ಟ ಸಂಸ್ಥಾನಗಳ ವಿಚಾರ ತಿಳಿಯದು. ನೀರಾವರಿ ದೃಷ್ಟಿಯಿಂದ ಮೈಸೂರು ಸಾಕಷ್ಟು ಮಟ್ಟಿಗೆ ಚೆನ್ನಾಗಿತ್ತು. ಹೈದ್ರಾಬಾದ್ ಮತ್ತು ಮುಂಬಯಿ ಕರ್ನಾಟಕದ ಜಿಲ್ಲೆಗಳು ಬಹಳ ಹಿಂದುಳಿದಿದ್ದವು. ಮಂಗಳೂರು ಮಲೆನಾಡು ಕೈಗಾರಿಕೆಯಿಂದ ಹಿಂದುಳಿದಿದ್ದವು. ಹೈದ್ರಾಬಾದ್ ಕರ್ನಾಟಕವೂ ಕೈಗಾರಿಕೆಯಿಂದ ಹಿಂದುಳಿದಿತ್ತು. ಇದು ಅಂದಿನ ಸ್ಥೂಲ ಸ್ಥಿತಿ. ವ್ಯವಸಾಯದ ದೃಷ್ಟಿಯಿಂದ ಮಂಡ್ಯ ಜಿಲ್ಲೆ ಹೊರತುಪಡಿಸಿ ಉಳಿದ ಜಿಲ್ಲೆಗಳು ಅಭಿವೃದ್ಧಿಯಾಗಿರಲಿಲ್ಲ. ಅಲ್ಪ ಸ್ವಲ್ಪ ಮಲೆನಾಡು ಪ್ರದೇಶ ಪ್ರಗತಿಯಾಗಿತ್ತು. ಮುಂಬಯಿ ಪ್ರಾಂತದ ಮೂರು ಜಿಲ್ಲೆಗಳು ನೀರಾವರಿಯಲ್ಲಿ ಅಭಿವೃದ್ಧಿ ಹೊಂದಿದ್ದವು. ಈಗ ಮುಂಬಯಿ, ಹೈದ್ರಾಬಾದ್ ಕರ್ನಾಟಕ ಮತ್ತು ಬಳ್ಳಾರಿ ನೀರಾವರಿಯಲ್ಲಿ ಬಹಳ ಮಟ್ಟಿಗೆ ಮುಂದೆ ಬರುವ ನಿರೀಕ್ಷೆ ಇದೆ. ವಿದ್ಯಾಭ್ಯಾಸ ದೃಷ್ಟಿಯಿಂದ ಈ ಜಿಲ್ಲೆಗಳಲ್ಲಿ ಸಾಕಷ್ಟು ಕಾಲೇಜುಗಳು, ವಿಶ್ವವಿದ್ಯಾಲಯಗಳಾಗಿವೆ. ಅವೆಲ್ಲಾ ಈಚೆಗೆ ಆದವು.

ಚಿತ್ರದುರ್ಗ ಬಳ್ಳಾರಿ ಇವು ಹೆಚ್ಚು ಅಭಿವೃದ್ಧಿ ಆಗಿವೆಯೆಂದು ಹೇಳೋಕೆ ಆಗುವುದಿಲ್ಲ. ಹೆಚ್ಚು ಕೈಗಾರಿಕೆಗಳು ಬೆಂಗಳೂರಲ್ಲಿ ಕೇಂದ್ರೀಕೃತವಾಗಿವೆ. ಅದಕ್ಕೆ ಬೆಂಗಳೂರಿನ ಸ್ಥಿತಿಯೇ ಕಾರಣ. ಬೆಂಗಳೂರು ಎಲ್ಲಿದ್ದರು ಇದೇ ರೀತಿ ಇರುತ್ತಿತ್ತು.

ಆದರೆ, ಅಧಿಕಾರಿಗಳು, ಅದಕ್ಕಿಂತಲೂ ಹೆಚ್ಚಾಗಿ ವಿಶ್ವವಿದ್ಯಾಲಯದ ಉಪಕುಲಪತಿಗಳು, ನ್ಯಾಯಾಧೀಶರ ನೇಮಕದಲ್ಲಿ ಉತ್ತರ ಕರ್ನಾಟಕಕ್ಕೆ ಅನ್ಯಾಯವಾಗಿದೆಯೆಂದು ನನ್ನ ಅಭಿಪ್ರಾಯ. ಇದನ್ನು ಸುಲಭವಾಗಿ ಸರಿಮಾಡಿಕೊಳ್ಳಬಹುದು. ಅದಕ್ಕಾಗಿ ನಾನು ಈಗಾಗಲೇ ಸರಕಾರಕ್ಕೆ ಕಾಗದ ಬರೆದಿರುವೆ. ಇದನ್ನು ರಾಜಕಾರಣಕ್ಕೆ ತಿರುಗಿಸಿ ಏನೋ ಸಾಧಿಸುತ್ತೇವೆಂದು ಹೊರಡುವುದು ಸರಿ ಅಲ್ಲ. ನನ್ನ ದೃಷ್ಟಿಯಲ್ಲಿ ೧೫-೨೦ ವರ್ಷಗಳಲ್ಲಿ ಈ ತಾರತಮ್ಯ ಸರಿಪಡಿಸಬಹುದು.

ಅಸಮತೋಲನ ಹಾಗೂ ಅಭಿವೃದ್ಧಿ ಹಿನ್ನೆಡೆಗೆ ರಾಜಕಾರಣಿಗಳೇ ಕಾರಣವೆ?

ರಾಜಕಾರಣಿಗಳೆಂದರೆ ಸಂಪೂರ್ಣ ಸರಕಾರ ಕಾರಣ. ಇದರಲ್ಲಿ ಜನಗಳದೇನು ತಪ್ಪಿಲ್ಲ. ಜನರು ಏನು ಮಾಡುತ್ತಾರೆ? ಅವರ ಬದುಕೇ ಅವರಿಗೆ ಭಾರ. ಸರಕಾರ ಏನು ಮಾಡುತ್ತದೆ? ಪ್ರತಿನಿಧಿಗಳು ಸರಕಾರದ ಮೇಲೆ ಒತ್ತಾಯ ಹೇರಿ ಕೆಲಸ ಮಾಡಿಸಬೇಕು. ಇವರು ಬೆಂಗಳೂರಲ್ಲಿ ಕುಳಿತುಕೊಂಡು ಏನು ಮಾಡುತ್ತಾರೆ? ಪ್ರತಿದಿನ ಜನರ ಹಣದಲ್ಲಿ ಪ್ರವಾಸ ಮಾಡುತ್ತಾರಲ್ಲಾ ಗೊತ್ತಾಗುವುದಿಲ್ಲವೆ? ಕೃಷ್ಣಾ ಮೇಲ್ದಂಡೆ ಯೋಜನೆ, ಮಲಪ್ರಭಾ ಯೋಜನೆ ಆರಂಭಿಸಲು ಯಾರಾದರು ಕೇಳಿದ್ದರಾ? ನಾವು ಅಂದರೆ ಸರಕಾರ ಅದನ್ನು ಗುರುತಿಸಿ ಯೋಜನೆ ಆರಂಭಿಸಲು ಅಡಿಗಲ್ಲು ಹಾಕುವುದರೊಂದಿಗೆ ಕ್ರಿಯೆ ಪ್ರಾರಂಭಿಸಿದೆವು. ಈ ಯೋಜನೆ ಪೂರ್ಣಗೊಳಿಸುವುದು ಜನಪ್ರತಿನಿಧಿಗಳ ಹೊಣೆ. ಸರಕಾರದ ಕರ್ತವ್ಯ.

ಹೊಸದಾಗಿ ಮಂಜೂರು ಆದ ರೈಲ್ವೆ ವಲಯ ಸ್ಥಾಪನೆಗೆ ಸೂಕ್ತವಾದ ಸ್ಥಳ ಹುಬ್ಬಳ್ಳಿ. ಇದರ ಬಗ್ಗೆ ನಾನು ಮೊದಲೇ ನನ್ನ ಸ್ಪಷ್ಟ ಅಭಿಪ್ರಾಯ ತಿಳಿಸಿದ್ದೇನೆ. ಯಾರೋ ತಜ್ಞ ಅಧಿಕಾರಿಗಳು ಹೇಳಿದರೆಂದು ಬೆಂಗಳೂರಲ್ಲಿ ಮಾಡುವುದು ವಿವೇಚನಾಹೀನ ಕೆಲಸ. ಮೂರ್ಖತನವೆಂದೇ ನನ್ನ ಖಚಿತ ಅಭಿಪ್ರಾಯ.

ಒಟ್ಟು ನನ್ನ ಅಭಿಪ್ರಾಯದಲ್ಲಿ ಕರ್ನಾಟಕ ಒಂದೇ. ಕನ್ನಡ ಭಾಷೆ ಒಂದೇ. ಕನ್ನಡಿಗರೆಲ್ಲರು ಒಂದೇ.

**ಎಸ್. ನಿಜಲಿಂಗಪ್ಪ**

ಮಾಜಿ ಮುಖ್ಯಮಂತ್ರಿಗಳು, ಚಿತ್ರದುರ್ಗ

# ಸಮತೋಲನ ದೃಷ್ಟಿಯ ಅಭಾವ

೧. ಹೌದು.

೨. ಸೇವಾ ಮನೋವೃತ್ತಿ ಇಲ್ಲದ ರಾಜಕಾರಣಿಗಳಿಂದ ಹಾಗೂ ಪ್ರಜಾಸತ್ತಾತ್ಮಕ ನಿಲುವಿನ ಬಗ್ಗೆ ಮೂಲ ಯೋಜನೆ ಮಾಡದ ಬುದ್ಧಿಜೀವಿಗಳಿಂದ ನಿರ್ಲಕ್ಷಿತವಾಗಿದೆ. ಅರ್ಥಾತ್ ಈ ಎರಡು ಬಗೆಯ ಜನರು ಸ್ವಾರ್ಥ ಕೇಂದ್ರಿತರಾಗಿದ್ದಾರೆ ಹಾಗೂ ಪರಿಸರದ ಬಗ್ಗೆ, ನಾಡಿನ ಬಗ್ಗೆ, ದೇಶದ ಬಗ್ಗೆ, ಸ್ವಾಭಾವಿಕವಾಗಿ ವಿಚಾರ ಮಾಡಬೇಕೆಂದು ಮನಸ್ಸಿದ್ದರೂ ಆ ಬಗ್ಗೆ ಕಿಂಚಿತ್ತು ವ್ಯವಧಾನವನ್ನು ನೀಡದವರಾಗಿದ್ದಾರೆ. ಸಾಕ್ಷರತೆಯ ಬಗ್ಗೆ ಸಂಬಂಧಪಟ್ಟ ಜನ ಮನ್ನಸ್ಸು ಕೊಟ್ಟು ಕೆಲಸ ಮಾಡಬೇಕಾಗಿರುವುದು ಕೂಡ ಒಂದು ಅವಶ್ಯ ಕಾರಣ.

೩. ಬೇರೆಯವರಿಗಿಂತ ನಮ್ಮ ಪ್ರತಿನಿಧಿಗಳ ನಿಷ್ಕ್ರಿಯ ಪ್ರವೃತ್ತಿಯೇ ಕಾರಣ. ಅದೇ ಅಡ್ಡಗಾಲು.

೪. ರಾಜಕಾರಣಿಗಳ ಹೊಣೆಗಾರಿಕೆಯು ಮೂರು ನಾಲ್ಕಾಂಶವಾದರೆ ಜನರ ಪಾತ್ರವು ಒಂದು ನಾಲ್ಕಾಂಶವಾಗಿದೆ.

೫. ಅವರೆಲ್ಲ ಮನೆ ಗೆದ್ದು ಮಾರು ಗೆದೆಯಬೇಕಾಗಿತ್ತು!.

೬. ಅಧಿಕಾರಸ್ಥರು ಸಮತೋಲನ ದೃಷ್ಟಿಯಿಂದ ತಾಯಿಯ ಮಮತೆಯಿಂದ ನಡೆದುಕೊಂಡರೆ ಅಸಮತೋಲನ ತೊಲಗುತ್ತದೆ.

೭. ಪ್ರಾದೇಶಿಕ ಅಸಮತೋಲನಗಳನ್ನು ನೀಗಿಸಲ್ಲು ಪ್ರತ್ಯೇಕ ರಾಜ್ಯ ರಚನೆಯ ಅವಶ್ಯಕತೆ ಇಲ್ಲ. ಅಧಿಕಾರದಲ್ಲಿ ಇರುವವರು ಸಮತೋಲನ ದೃಷ್ಟಿಯವರು ಇರಬೇಕು ಮತ್ತು ಅಂತಹ ಜನರನ್ನೇ ಅಧಿಕಾರಕ್ಕೆ ತರಲು ಜನರು ಮುಂದಾಗಬೇಕು. ಹೀಗಾದಲ್ಲಿ ಮಾತ್ರ ಪ್ರತ್ಯೇಕ ಪ್ರಾದೇಶಿಕ ರಾಜ್ಯಗಳು ಬೇಕೆನ್ನುವ ಕೂಗುಗಳು ನಿಲ್ಲುತ್ತವೆ. ಹಾಗೂ ಅಖಿಲ ಕರ್ನಾಟಕದ ಏಕೀಕರಣಕ್ಕೆ ಹೋರಾಡಿ ಒಂದಾದ ಕನ್ನಡ ಹಿಗ್ಗುತ್ತದೆ.

**ಪ್ರೊ. ವಸಂತ ಕುಷ್ಟಗಿ**

ಕಲಬುರ್ಗಿ

# ಒಡೆಯುವ ಮಾತುಗಳ ಹಿಂದೆ ಬ್ಲ್ಯಾಕ್‌ಮೇಲ್ ತಂತ್ರ

**ರಾ**ಷ್ಟ್ರ ಮಟ್ಟದಲ್ಲಿಯಾಗಲಿ, ರಾಜ್ಯ ಮಟ್ಟದಲ್ಲಿಯಾಗಲಿ ಶಕ್ತಿ-ಕೇಂದ್ರೀಕರಣದಿಂದಾಗಿ ಅಭಿವೃದ್ಧಿಯ ಒಂದು ಹಂತದಲ್ಲಿ 'ಅಸಮತೋಲನ' ಒಡೆದು ಕಾಣುವಂತಾಗುವುದು ಸಹಜ. ಏಕೀಕೃತ ಕರ್ನಾಟಕದ ನಾಲ್ಕು ದಶಕಗಳ ಅವಧಿಯಲ್ಲಿ ರಾಜ್ಯದ ಅನೇಕ ಕಡೆಗಳಿಂದ ಇಂಥ ಕೂಗು ಕೇಳಿ ಬರುತ್ತಿದೆ. ಒಮ್ಮೆ ಹಾಗೆಯೇ ಸುತ್ತಾಡಿ ಬಂದರೆ ಸಾಕು, ಉತ್ತರ ಕರ್ನಾಟಕ ಮತ್ತು ದಕ್ಷಿಣ ಕರ್ನಾಟಕಗಳ ನಡುವಿನ ಅಂತರ ಕಣ್ಣಿಗೆ ಹೊಡೆಯುತ್ತದೆ.



ಇದು ಯಾರಿಂದ ಆಯಿತು ಅಂತ ಕೂದಲು ಸೀಳುವ ಪ್ರಶ್ನೆಗಳಿಗಿಂತ, ಇಂಥ ಬೆಳವಣಿಗೆಯಲ್ಲಿ ಜನರ ನಿರ್ಲಿಪ್ತತೆ, ಅವರ ಪ್ರತಿನಿಧಿಗಳಾದ ಶಾಸಕರ ಕ್ರಿಯಾಹೀನತೆ, ಯೋಜನಾ ತಯಾರಕರಲ್ಲಿ ಸಮಗ್ರ ದೃಷ್ಟಿಯ ಅಭಾವ, ಸರಕಾರಿ ಯಂತ್ರದ ಜಡತ್ವ-ಇವೆಲ್ಲ ಅಂಶಗಳೂ ಒಳಗೊಂಡಿವೆ ಎಂಬ ವಾಸ್ತವವನ್ನು ನಾವು ಅರಿಯಬೇಕು. ಉತ್ತರ ಕರ್ನಾಟಕದಿಂದ ಈವರೆಗೆ ಐವರು ಮುಖ್ಯಮಂತ್ರಿಗಳಾಗಿದ್ದಾರೆ ; ಮುಂದೆ ಇನ್ನೂ ಹತ್ತು ಜನ ಆಗಬಹುದು. ಆದರೆ ನಮ್ಮ ಸರಕಾರಗಳು ಮೂಲದಲ್ಲಿ ಅನುಸರಿಸುತ್ತಿರುವ ವಿಕೇಂದ್ರೀಕರಣ-ವಿಮುಖವಾದ ನೀತಿಗಳನ್ನು ಪರಾಮರ್ಶಿಸುವುದು ಈಗಿನ ಅಗತ್ಯವಾಗಿದೆ.

ಉತ್ತರ ಕರ್ನಾಟಕಕ್ಕೆ ಆಗಿರುವ ಅನ್ಯಾಯದ ವಿರುದ್ಧ ಎದ್ದಿರುವ ಕೂಗಿನ ಹಿಂದೆ ಒಂದು ಸಹಜವಾದ ನೋವಿದೆ. ಅದು ಜನತೆಯ ಇಳಿದನಿಯ ಗೊಣಗಾಟವಾಗಿರಬಹುದು, ವೇದಿಕೆಯ ಆರ್ಭಟದ ಆಕ್ರೋಶವಾಗಬಹುದು. ಆದರೆ ಇಂಥ ಪ್ರಾದೇಶಿಕ ಅಸಮತೋಲನ ನೀಗಿಸಲು, ಕೆಲವರು ಹೇಳುತ್ತಿರುವಂತೆ, ಪ್ರತ್ಯೇಕ ರಾಜ್ಯ ರಚನೆ ಎಂಬುದು ಪರಿಹಾರವಾಗಲಾರದು. ಹಲವಾರು ದಶಕಗಳ ಹೋರಾಟದ ಫಲವಾಗಿ ಒಂದು ನಾಡಾಗಿರುವ ಕರ್ನಾಟಕವನ್ನು ''ಒಡೆಯುವ'' ಮಾತುಗಳ ಹಿಂದೆ ಬ್ಲ್ಯಾಕ್‌ಮೇಲ್ ತಂತ್ರವಿರುವಂತೆ ಕೆಲವರಿಗಾದರೂ ಅನಿಸಿದರೆ ಅಚ್ಚರಿಪಡಬೇಕಾಗಿಲ್ಲ.

ಈ ತಂತ್ರ ಅಳವಡಿಸಿಕೊಂಡ ಕೆಲ 'ನಾಯಕ'ರ ಚಹರೆ-ಪಟ್ಟಿ ನೋಡಿದರೆ ಹೀಗೆ ಅನಿಸುತ್ತದೆ! ಆದರೆ, ನನಗೆ ಅನಿಸುವಂತೆ, 'ಪ್ರತ್ಯೇಕ ರಾಜ್ಯ' ರಚನೆಗೆ ಜನತೆಯ ಬೆಂಬಲವಿಲ್ಲ. ಅವರಿಗೆ ಬೇಕಾಗಿರುವುದು ನಾಡಿನ ಒಟ್ಟು ಅಭಿವೃದ್ಧಿಯಲ್ಲಿ ತಮಗೆ ನ್ಯಾಯಬದ್ಧವಾಗಿ ಸಿಗಬೇಕಾದ ಪಾಲು ಮಾತ್ರ.

ಯಾವುದೇ ಮತಕ್ಷೇತ್ರದ ಶಾಸಕರು ತಮ್ಮ ಕ್ಷೇತ್ರದ ಸಮಸ್ಯೆಗಳಿಗೆ ಪಕ್ಷಾತೀತವಾಗಿ ಸ್ಪಂದಿಸಿ, ಸದನಗಳಲ್ಲಿ ಗಟ್ಟಿಯಾಗಿ ಮಾತನಾಡಿ, ಕೆಲಸ ಮಾಡಿಸಿಕೊಳ್ಳಬೇಕು. ಜೊತೆಗೆ ಆಳುವವರು ಇಡೀ ರಾಜ್ಯದ ಬೆಳವಣಿಗೆ ಬಗ್ಗೆ ಸಮಗ್ರವಾದ ದೃಷ್ಟಿಯನ್ನಿಟ್ಟುಕೊಂಡು ಪ್ರಾಮಾಣಿಕ ಚಿಂತನೆಯೊಂದಿಗೆ ಪ್ರಾಮಾಣಿಕವಾಗಿ ಕೆಲಸ ಮಾಡಬೇಕು. ಇದೇ ಸಮಸ್ಯೆಗೆ ನಿಜವಾದ ಪರಿಹಾರ.

**ಚಂದ್ರಶೇಖರ ಪಾಟೀಲ**
ಅಧ್ಯಕ್ಷರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ,
ಬೆಂಗಳೂರು.

# ಕುಣಿಯಲು ಬಾರದಿದ್ದರೆ.....!

**ಹೊ**ಟ್ಟೆ ಕಡಿದವನು ಅಜಿವಾನ ತಿನ್ನಬೇಕು ಎಂಬ ಗಾದೆಯೊಂದು ರೂಢಿಯಲ್ಲಿದೆ. ಹಾಗೆ ಯಾರದೋ ತಲೆಯ ಮೇಲೆ ಭಾರಹಾಕಿ ಉತ್ತರ ಕರ್ನಾಟಕ ನಿರ್ಲಕ್ಷ್ಯಕ್ಕೆ ಒಳಗಾಗಿದೆ ಎನ್ನುವುದು ಸರಿಯಲ್ಲ. ಸ್ವಾತಂತ್ರ್ಯ ದೊರೆತ ಅನಂತರ ಕೆಲವರು ತಮ್ಮ ಪ್ರದೇಶಗಳ ಅಭಿವೃದ್ಧಿಗಾಗಿಯೇ ಪ್ರಭಾವವನ್ನು ಬಳಸಿಕೊಂಡರು. ಆದರಿಂದಾಗಿ ಅವರ ಪ್ರದೇಶಗಳು ಅಭಿವೃದ್ಧಿ ಹೊಂದಿದವು. ಇದಕ್ಕೆ ಕರ್ನಾಟಕದಲ್ಲಿಯ ರಾಜಕಾರಣಿಗಳಲ್ಲಿ ದಿವಂಗತ ವೀರೇಂದ್ರ ಪಾಟೀಲರು ಹಾಗೂ ದೇವೇಗೌಡರನ್ನು ಅಭಿನಂದಿಸಲೇ ಬೇಕು. ನಿಜಾಮನ ಆಳ್ವಿಕೆಯಿಂದ ಮುಕ್ತವಾದ ಅನಂತರ ಅಭಿವೃದ್ಧಿಗೊಂಡ ಹೈದರಾಬಾದ ಕರ್ನಾಟಕದ ಬಹುಪಾಲು ಶ್ರೇಯಸ್ಸು ಪಾಟೀಲರದು. ಅದರಂತೆ ಹಾಸನ ಜಿಲ್ಲೆಯ ಸರ್ವಾಂಗೀಣ ಅಭಿವೃದ್ಧಿಗೆ ಗೌಡರು ಹಾಗೂ ಅವರ ಕಟ್ಟಾ ವೈರಿಗಳೆಂದೇ ಎಣಿಸುವ ಹಾಸನ ಜಿಲ್ಲೆಯ ನಾಯಕರು ಕಾರಣರು. ತಮ್ಮ ಜಿಲ್ಲೆಯ ಅಭಿವೃದ್ಧಿಯ ಪ್ರಶ್ನೆ ಬಂದಾಗ ಇವರು ತಮ್ಮ ರಾಜಕೀಯ ವೈರತ್ವವನ್ನು ಮರೆತು ಶ್ರಮಿಸಿದರು ಎಂಬುದನ್ನು ಎಲ್ಲರೂ ಬಲ್ಲರು.

ಆದರೆ ದುರ್ದೈವದಿಂದ ಉತ್ತರ ಕರ್ನಾಟಕದ ರಾಜಕಾರಣಿಗಳಲ್ಲಿ ಈ ಬುದ್ಧಿ ಅಂದೂ ಬರಲಿಲ್ಲ ಇಂದೂ ಬಂದಿಲ್ಲ. ಅದುವೇ ಇಂದು ಅತಿ ಹಿಂದುಳಿದ ಪ್ರದೇಶವಾಗಿರಲು ಕಾರಣವಾಗಿದೆ. ಪಾಪ ಜನರು ಏನು ಮಾಡಿಯಾರು. ಅವರಿಂದ ಮತ ಪಡೆದು ಬೆಂಗಳೂರಿಗೋ ದಿಲ್ಲಿಗೋ ಹೋಗಿ ಈ ಮಹಾಶಯರು ಮನೆ ಕಟ್ಟಿಸಿಕೊಂಡು ಮೆರೆದರು. ಅವಕಾಶ ಸಿಕ್ಕಾಗ ಕುರ್ಚಿ ಉಳಿಸಿಕೊಳ್ಳಲು ಹೆಣಗಾಡಿದರು. ದಮ್ಮಯ್ಯ ಎಂ[illegible] ಬಾಲ ಬಡಿದರು. ಆದ್ದರಿಂದ ಉತ್ತರ ಕರ್ನಾಟ[illegible] ಅಭಿವೃದ್ಧಿಗೆ ಯಾರಾದರೂ ಅಡ್ಡಗಾಲು ಹಾಕಿದ್ದಾರೆ ಎಂದರೆ, ತನಗೆ ಕುಣಿಯಲು ಬರದಿದ್ದರೆ ಅಂಗಳ ಡೊಂಕು ಎಂದಂತೆ. ನಮ್ಮಲ್ಲಿಯ ಹಲವಾರು ನಾಯಕರಿಗೆ ಕುಣಿಯಲು ಚೆನ್ನಾಗಿ ಬರುತ್ತಿತ್ತು ಅವರು ಎಲ್ಲಿ ತಮ್ಮ ಕುರ್ಚಿಗೆ ಅಡ್ಡಿ ಬರುತ್ತದೆಯೇ ಎಂದು ಸಾಧ್ಯವಿದ್ದಷ್ಟು ಬೆಂಗಳೂರು-ಮೈಸೂರುಗಳಲ್ಲೇ ಕುಣಿದರು. ಕೊನೆಗೆ ಚುನಾವಣೆಗೂ ಅಲ್ಲಿಂದಲೇ ನಿಂತು ಆರಿಸಿ ಬಂದರು. ಅಲ್ಲಿಯವರು ಮುಖದ ಮೇಲೆ ಕೈಯಾಡಿಸಿ ಇಲ್ಲಿ ಬಂದು ಆರಿಸಿ ಹೋಗಿ ಅಲ್ಲಿಯ ಅಭಿವೃದ್ಧಿಗೆ ದುಡಿದರು. ಎಲ್ಲಿಯವರೆಗೆ ಉತ್ತರ ಕರ್ನಾಟಕದ ಜನರಿಗೆ ಮಾನಸಿಕ ಸ್ಥೈರ್ಯ, ಇಚ್ಛಾಶಕ್ತಿ, ಛಲಗಳು ಬರುವುದಿಲ್ಲವೋ ಅಲ್ಲಿಯವರೆಗೆ ಅವರ ಉದ್ಧಾರ ಆಗದು. ಪ್ರತ್ಯೇಕ ರಾಜ್ಯ ರಚನೆಯಾದರೂ ಈ ಜನ ಮತ್ತೆ ತಮ್ಮ ಮಾನಸಿಕ ದೌರ್ಬಲ್ಯ, ಕೀಳರಿಮೆಗಳಲ್ಲಿ ಈ ಜನರನ್ನು ಹಿಂದಕ್ಕೆಯೇ ಇಡುತ್ತಾರೆ. ಪ್ರಾದೇಶಿಕ ಅಭಿಮಾನದ ನಾಯಕತ್ವಕ್ಕಾಗಿ ಇಲ್ಲಿಯ ಜನ ಕಾಯುತ್ತಿದೆ.

**ಕೃಷ್ಣ ಕೊಲ್ಹಾರ ಕುಲಕರ್ಣಿ**
ಬಿಜಾಪುರ

# ಮಾಜಿಗಳಾದ ನಂತರ ಕಂಡುಕೊಂಡ ಅನ್ಯಾಯ !

**ಕ**ರ್ನಾಟಕ ಏಕೀಕರಣ ಆಗಿ ನಾಲ್ಕು ದಶಕಗಳು ಉರುಳೋದ್ರಾಗ ಬೇಕೀಕರಣ ಅಂದ್ರ ರಾಜ್ಯ ಹೋಳು ಮಾಡುವ ಊಳು ಕೇಳಿ ಬರ್ಲಾಕ ಹತ್ಯಾವ. ಕೊಡಗಿನವ್ರು ಬ್ಯಾರೆ ಆಗ್ತೀವಿ ಅಂತ ಬಡಿದುಕೊಳ್ಳಾಕ ಹತ್ಯಾರ, ಇತ್ತ ಉತ್ತರ ಕರ್ನಾಟಕದಾವ್ರು ಅನ್ಯಾಯ ಆಗೇತಿ ಅಂತ ಹುಯಿಲೆಬ್ಬಿಸಿ ಬ್ಯಾರೆ ಒಲೀ ಹೂಡ್ಲಾಕ ಸಜ್ಜ ಆಗ್ಯಾರ. ಮಾಜಿ ಮಂತ್ರಿಗಳು ಮಾಜಿ ಕಾವಲು ಸಮಿತಿ ಅಧ್ಯಕ್ಷರು, ಮಾಜಿ ಮುಖ್ಯಮಂತ್ರಿಗಳು ಈ ಗೌಜುಗದ್ದಲದಾಗ ಫೌಜುದಾರಿಕೆಗೆ ಸನ್ನದ್ಧ ಆಗ್ಯಾರ. ಅವರೆಲ್ಲ ಅಧಿಕಾರಸ್ಥರಾಗಿದ್ದಾಗ ಈ ತಥಾಕಥಿತ ಅನ್ಯಾಯ, ಪಕ್ಷಪಾತತನ ಕಂಡಿರಲಿಲ್ಲ. ಈಗ ಮಾಜಿಗಳಾದ ಮ್ಯಾಲ ಕಂಡುಕೊಂಡ ತಥಾಕಥಿಕ ಅನ್ಯಾಯದ ವಿರುದ್ಧ ಶೆಡ್ಡು ಹೊಡ್ಯಾಕ ಹತ್ಯಾರ.

ನಾಲ್ಕು ದಶಕದ ಹಿಂದ ಕಲಬುರ್ಗಿ ಜಿಲ್ಲಾದಾಗ ಒಂದಽಒಂದು ಮಾಧ್ಯಮಿಕ ಶಾಲೆ ಇತ್ತು; ಈಗ ಅಲ್ಲಿ ವಿಶ್ವವಿದ್ಯಾಲಯನಽ ಅರಳೇದ. ನಾಲ್ಕು ದಶಕಗಳ ಹಿಂದೆ ಬೆಳಗಾವಿಯೊಳಗ ವರ್ಷದಾಗ ನಾಲ್ಕು ತಿಂಗಳು ನೀರಿಗಾಗಿ ಹಾಹಾಕಾರ ಇರ್ತಿತ್ತು; ಈಗ ನಾಲ್ಕೆಂಟು ಪಟ್ಟು ಬೆಳೆದ ಈ ಊರಾಗ ನೀರು ಸರಬರಾಜು ಕಂಡಾಗ, ಅಲಽಽಲಽ ಇದಽ ಬೆಳಗಾವಿಯಾಗ ಹಗ್ಗ, ಕೊಡ ಹಿಡ್ಕೊಂಡ ಓಣಿ ಓಣಿ ಅಡ್ಡಾಡಿದ್ದೀವಲ್ಲ ನೀರಿಗಾಗಿ! ಅಂತ ನೆಪ್ಪ ಮಾಡಿಕೋಬೇಕಾಗ್ತದ ಅಂತಂದ ಮ್ಯಾಗ ಇತ್ತ ಕಡೆಗೆ ಏನೂ ಆಗಿಲ್ಲ ಅಂತ ಕೂಗಿದ್ರ ನಂಬಾಣರ್ಯಾ?

ಅಲ್ಲಾ ಶಾಸನಸಭೆಯೊಳಗ ನಮ್ಮ ಶಾಸಕರು ಇದ್ದಽ ಇರ್ತಾರು. ನಮ್ಮ ಕಡ್ಯಾವ್ರು ಮಂತ್ರಿಗೋಳ ಭೀ ಆಗಿರ್ತಾರು. ಹಲಕೆಲವು ಆಗಿ ಹೋದ ಮುಖ್ಯಮಂತ್ರಿಗಳು ಸೈತ ಈ ಕಡೆಯಾವ್ರಽ. ಅಂತಂದ ಮ್ಯಾಗ ಈಗ "ಹಮಾರೇ ಚಡ್ಡಿಮೇಲ ಕೌನ್ ಹಗ್ಯಾ?" ಅಂತ ಹುಯಿಲೆಬ್ಬಿಸೋದು ಮತ್ತ "ನಮ್ಮ ಪಾಲಾ ನಮ್‌ಗ ಕೊಟ್ಟ ಬಿಡ್ರಿ, ಬ್ಯಾರೆ ಆಗ್ತೀವಿ" ಅಂತ ಅಂಬೂದು ಛಲೋ ಏನ್ರಪಾ?

ಅಂಕಿ ಸಂಖ್ಯಾದ ಚಮತ್ಕಾರದಿಂದ ಏನು ಬೇಕಾದ್ದು ಸಾಧಿಸ್ಲಾಕ ಬರ್ತದ. ಈಗ ನೋಡಿರೆಲ್ಲಾ ಅಂಕಿ ಸಂಖ್ಯೆಯ ಚಿತ್ತಾರ ಬಿಡಿಸಿ ಎಂ.ಈ.ಎಸ್.ದಾವ್ರು ಬೆಳಗಾವಿ ಕೇಳ್ತಾರು. ಅದಽ ಅಂಕಿಸಂಖ್ಯೇನ ಮತ್ತೊಂದು ಬಗೆಯಲ್ಲಿ ಬಿತ್ತರಿಸಿ ಕನ್ನಡಿಗರು ಬೆಳಗಾವಿಯನ್ನು ಕರ್ನಾಟಕದ ಮೂಗು ಅಂತ ಸಿದ್ಧ ಮಾಡಿ ತೋರಿಸ್ತಾರ. ಅಂಕಿ ಸಂಖ್ಯೆಯ ಚಮತ್ಕಾರನಽ ಹೀಂಗಽ. ನನ್ನ ಗೆಳೆಯ ಗುಂಡಣ್ಣ ಅಂಕಿ ಸಂಖ್ಯೆಯ ಚಮತ್ಕಾರ ತೋರಿಸಿ ಒಂದು ರೂಪಾಯಿ ಇಜ್ ಇಕ್ವಲ್ ಟು ಒಂದು ಪೈಸಾ ಅಂತ ಸಿದ್ಧ ಮಾಡ್ತಾನು. ಹ್ಯಾಂಗಂದ್ರಽ,

ಒಂದು ರೂಪಾಯಿ = ೧೦೦ ಪೈಸೆ

ಒಂದು ರೂಪಾಯಿ = ೧೦ ಪೈಸೆ x ೧೦ ಪೈಸೆ

$$'' \quad = \frac{೧}{೧೦} \text{ ರೂ} \times \frac{೧}{೧೦} \text{ ರೂ}$$

$$'' \quad = \frac{೧}{೧೦೦} \text{ ರೂ}$$

ಅಂತಂದರೆ ಒಂದು ರೂಪಾಯಿ = ಒಂದು ಪೈಸೆ

ಹ್ಯಾಂಗಯ್ತಿ ಲೆಕ್ಕಾಚಾರ; ಅಂಕಿ ಸಂಖ್ಯೆಯ ಚಮತ್ಕಾರ!

"ನಮ್ಮ ವಾದ ತರ್ಕಬದ್ಧ ಆಗೇತಿ" ಅಂತ ವಿತಂಡವಾದಿಗಳದು ಪ್ರಚಂಡ ಆತ್ಮವಿಶ್ವಾಸ. ನನ್ನ ಗೆಳೆಯ ಗುಂಡಣ್ಣನೂ ಹೀಂಗ ತರ್ಕಬದ್ಧವಾಗಿ ವಾದ ಮಂಡಿಸ್ತಾನು.

"ನೀರಿನ ಮ್ಯಾಲ ಎಣ್ಣಿ ತೇಲ್ತೈತಿ ಅಂತಂದ್ರ ಎಣ್ಣಿ ನೀರಿಗಿಂತ ಹಗುರ. ಎಣ್ಣಿಯೊಳಗ ಬೋಂಡಾ ತೇಲತ್ತೈತಿ ಅಂತಂದ ಮ್ಯಾಲ ಬೋಂಡಾ ಮತ್ತಷ್ಟೂ ಹಗುರ. ಆಮಶಂಕೆ ಹತ್ತಿದಾಗ ಹಗುರ ಆಹಾರ ಅಂತ ಬೋಂಡಾ ತಿನ್ನೋದಽವಾಸಿ" ಗುಂಡಣ್ಣನ ತರ್ಕಬದ್ಧ ವಾದ ಇದು.

ಅಲ್ಲಾ ಏಕೀಕರಣ ಆಗಬೇಕಂತ ನಮ್ಮ ಹಿರ್ಯಾರು ಎಂಥಾಪರಿ ಕಷ್ಟಪಟ್ಟಾರ. ಅವರೇನೂ ಮಾಜೀ ಮಂತ್ರಿ ಆಗಿರಲಿಲ್ಲ, ಮಾಜೀ ಕನ್ನಡ ಕಾವಲುಗಾರ ಸಮಿತಿ ಅಧ್ಯಕ್ಷರೂ ಆಗಿರಲಿಲ್ಲ. ಏಕೀಕರಣ ಆದ ಮ್ಯಾಗ ಅಧಿಕಾರದ ಗದ್ದಿಗಿ ಹತ್ತಿ ಕೆಂಪುದೀಪ, ಗೂಟದ ವಾಹನದಾಗ ಮೆರೀಬೇಕು ಅಂತ ಹಂಬಲಿಸಿರಲಿಲ್ಲ. ಏಕೀಕರಣ ಆದಾಗ ನಮ್ಮ ಕುಲ ಪುರೋಹಿತರು ಬೆಂಗಳೂರಿನ ಅಧಿಕಾರ ಸ್ಥಾನಕ್ಕ ದೌಡಾಯಿಸಲಿಲ್ಲ, ಹಾಳು ಹಂಪಿಗೆ ಹೋಗಿ ತುಂಗಭದ್ರೆಯ ತಿಳಿನೀರಿನಾಗ ಮುಳುಗೆದ್ದು ಕೃತಜ್ಞತೆಯ, ಕೃತಾರ್ಥತೆಯ ಅರ್ಘ್ಯ ಬಿಟ್ಟು ಮಾರಿ ಒರೆಸಿಕೊಂಡರು.

ಅಧಿಕಾರ ಸ್ಥಾನದಾಗ ಇದ್ದಾಗ ಬಾಯ್ತುಂಬ ಕೊಂಡಾಡಿಕೋತ ಕುಂಡ್ರೋದು. ಮತ್ತ ಮಾಜೀ ಆದಮ್ಯಾಗ "ಅನ್ಯಾಯ, ಅನ್ಯಾಯ" ಅಂತ ಅಮಾಯಕ ಪ್ರಜೆಗಳ ತಲ್ಯಾಗ ಹುಳಾ ಹಾಕಿ ಹುಡದಿ ಹರಡೋದು ರಾಜಕೀಯ ಆಗ್ತದ ಹೊರತು ನಾಡು ಕಟ್ಟುವ ಮುತ್ಸದ್ದಿತನ ಆಗಾಣ್ಯ?

ಅಲ್ಯಾ ಉತ್ತರ ಕರ್ನಾಟಕ ಅಂತ ಇತ್ತ ಕಡೆಯ ಎಂಟು ಜಿಲ್ಲಾಗೋಳ ಬ್ಯಾರೆ ಒಲೀ ಹೂಡಿದ್ರರೇ ಸಮಾಧಾನ ಆಕ್ಕೈತೇನು? ಬೆಂಗಳೂರಾಗ ಉಚ್ಚ ನ್ಯಾಯಾಲಯ ಅದಽ, ನಮಗ ನ್ಯಾಯಪೀಠ ಬೇಕು ಅಂತ ಹುಬ್ಬಳ್ಳಿಯಾವ್ರು, ಬೆಳಗಾವಿಯಾವ್ರು, ವಿಜಾಪುರದಾವ್ರು, ಕಲಬುರ್ಗಿಯಾವ್ರು ಬಡ್ಕೋತಾರು. ಎಂಟು ಜಿಲ್ಲೆಗಳು ಬ್ಯಾರೆಯಾಗಿ ಮತ್ತೊಂದು ರಾಜ್ಯ ಆದರೂ ಈ ವ್ಯಾಜ್ಯ ಬಗೀ ಹರಿಯೂದಿಲ್ಲವಲ್ಲ. "ಪಾಲಾಗ್ತೀವಿ, ಪಾಲಾಗ್ತೀವಿ" ಅಂತ ಧಮಕೀ ಕೊಟ್ಟ ಮಾತ್ರಕ್ಕ ಎಲ್ಲಾ ಪ್ರಶ್ನೆಗಳಿಂದ ಪಾರಾಗೋದೇನು ಸಾಧ್ಯ ಇಲ್ಲ ಬಿಡ್ರಿ. ಅನ್ಯಾಯ, ಅಸಮತೆ, ಪಕ್ಷಪಾತತನಕ್ಕ ಪಾಲಾಗಿ ಬ್ಯಾರೆ ಬಿಡಾರ ಹೂಡೋದು ಪರಿಮಾರ್ಜನ ಅಲ್ಲಾ; ಆಯಾ ಭಾಗದ ಶಾಸಕ, ಸಂಸದರು ಜಾಗೃತರಾಗಿ ನಿಷ್ಠರಾಗಿ ದುಡಿಯೋದು ಅಗತ್ಯ. ಬಸ್ಸಿಗೆ ಕಲ್ಲು ಒಗೆದು, ಕಟ್ಟಡಕ್ಕೆ ಬೆಂಕಿ ಇಕ್ಕಿ ಗೋಳಿಬಾರು, ಲಾಠೀಚಾರ್ಜುಗಳಿಗೆ ಕಾರಣೀಭೂತ ಆಗುವ ಹೋರಾಟಗಳಿಂದ ನಾಡಿನ ಸಂಪತ್ತು ಹಾನಿ ಆಗ್ತದ, ನಾಡವರ ಮನಸ್ಸು ಹೊಲಸೆದ್ದು ಹೋಗ್ತದ.

ಈ ಪಾಲಾಗುವಿಕೆಯ ಅಭೀಪ್ಸೆಯೊಳಗ ಜಾತೀಯ ಪ್ರೇರಣೆ ಅಯಿತ್ಯೋ ಅಥವಾ ಅಧಿಕಾರ ಕಳ್ಕೊಂಡ ಹತಾಶೆ ಐತ್ಯೋ ಅಂಬೂದನ್ನ ಆತ್ಮಾವಲೋಕನ ಮಾಡಿಕೊಳ್ಳುವುದು ವಿಹಿತ ಅಲ್ಲ? ತಾವು ಅಧಿಕಾರದ ಗದ್ದುಗೆಯಲ್ಲಿ ವಿರಾಜಮಾನರಾದಾಗ ಈ ತಥಾಕಥಿತ ಅನ್ಯಾಯಗೋಳು ಯಾಕೆ ನಜರಿಗೆ ಬಂದಿರಲಿಲ್ಲ? ಚಿಂತಾಮಣರಾವ್ ದೇಶಮುಖ್ ಅನ್ಯಾಯ ಆಗೇತಿ ನನ್ನ ಮಹಾರಾಷ್ಟ್ರದ ಮ್ಯಾಗ ಅಂತ ನೆಹ್ರುನ ಮಾರೀ ಮ್ಯಾಲ ರಾಜಿನಾಮೆ ಭಿರಕಾಯಿಸಿದ್ದರು. ಅಂಥ ಧಾರ್ಷ್ಟ್ಯ, ಅಂಥ ನಿಷ್ಠೆಯನ್ನು ನಮ್ಮ ಈ ಮಾಜೀಗಳು ಯಾಕ ತೋರಲಿಲ್ಲ?

ಪಾಲಾಗೋದಕ್ಕಿಂತ ಪಾಲ್ (ಹಾಲು) ಆಗಿ ನಾಡಿನ ಏಕತೆಯನ್ನು ಕಾಪಾಡಿ ಅಸಮಾನತೆಯನ್ನು ನಿವಾರಿಸುವುದರಲ್ಲಿ ಸಮದೃಷ್ಟಿಯ ಸಮ್ಯಾಕ ಯತ್ನ ಮಾಡಿದ್ರ ಹೌದೌದೆಂದು ಸೈಗುಟ್ಟಬಹುದು ಇಲ್ಲವಾದಲ್ಲಿ ಇದೂ ಒಂದು ಪಟ್ಟಭದ್ರ ಹಿತಾಸಕ್ತಿಯ ಹೂಟ ಅಂತ ನಿಟ್ಟುಸಿರು ಬಿಟ್ಟು ನಮ್ಮ ನುಡಿಯ ಪುಣ್ಣೇವು ಮುಗೀತೇನೋ ಅಂತ ಕುಂಡ್ರಬಹುದು, ಅಷ್ಟ!

**ಅನಂತ ಕಲ್ಲೋಳ**

ರಮಾರಮಣ, ೫೦೬, ಕುಲಕರ್ಣಿ ಬೀದಿ, ಬೆಳಗಾವಿ - ೫೯೦ ೦೦೧

# ಆಡಳಿತ ವಿಕೇಂದ್ರೀಕರಣವೇ ಮದ್ದು

೧. ಉತ್ತರ-ಕರ್ನಾಟಕ ಖಂಡಿತಾ ನಿರ್ಲಕ್ಷ್ಯಕ್ಕೊಳಗಾಗಿದೆ.

೨. ಆ ಭಾಗದ ಜನರು ಜನರಿಂದಾರಿಸಲ್ಪಟ್ಟಿರುವ ಶಾಸಕರು; ಸಂಸದರು ಕಾರಣ.

೩. ಉತ್ತರ ಕರ್ನಾಟಕದ ಅಭಿವೃದ್ಧಿಗೆ ಯಾರಾದರೂ ಅಡ್ಡಗಾಲಿಕ್ಕಿದ್ದಾರೆನ್ನುವುದು ಅಷ್ಟು ಸಮಂಜಸವಾಗಲಾರದು.

೪. ಪ್ರಾದೇಶಿಕ ಅಸಮತೋಲನೆ ಉಂಟಾಗುವುದೇ ಜನರಿಂದ. ಜನರ ಈ ಮನೋಭಾವವನ್ನು ಪ್ರಶ್ನಿಸಬೇಕಾಗಿರುವ ರಾಜಕಾರಣಿಗಳು ಇದನ್ನು ಹೆಚ್ಚು ಮಾಡುವ ಮೂಲಕ ಹೊಣೆಗೇಡಿಗಳಾಗುತ್ತಿರುವುದು ಆತಂಕಕಾರಿ.

೫. ಉತ್ತರ ಕರ್ನಾಟಕದ ಹಲವು ರಾಜಕಾರಣಿಗಳು ಮುಖ್ಯಮಂತ್ರಿಗಳಾಗಿದ್ದರು, ಮಂತ್ರಿಗಳಾಗಿದ್ದರು. ಇವರ ಕೊಡುಗೆ ಸೊನ್ನೆ. ಸಾರ್ವಜನಿಕ ಹಿತಾಸಕ್ತಿಯೇ ಇವರಲ್ಲಿ ಇಲ್ಲ. ಇಲ್ಲೇ ಇವರು ಎಡವುತ್ತಿರುವುದು.

೬. ಕೇವಲ ಹೈಕೋರ್ಟ್ ಪೀಠವನ್ನು ಹುಬ್ಬಳ್ಳಿಯಲ್ಲಿ ಸ್ಥಾಪಿಸುವುದರಿಂದ, ನೈಋತ್ಯ ರೇಲ್ವೆ ವಲಯ ಕಛೇರಿಯನ್ನು ಹುಬ್ಬಳ್ಳಿಯಲ್ಲಿ ಮಾಡುವುದರಿಂದ ಪ್ರಾದೇಶಿಕ ಅಸಮತೋಲನ ನಿವಾರಿಸಬಹುದು ಎಂದು ಹಲಬುತ್ತಿರುವ ಎಚ್.ಕೆ.ಪಾಟೀಲ್, ಪಾಟೀಲ ಪುಟ್ಟಪ್ಪನವರ ನಿಲುವುಗಳ ಬಗೆಗೆ ಮಾತಾಡುವುದೇ ನಾಚಿಕೆಗೇಡು!

೭. ಉತ್ತರ ಕರ್ನಾಟಕ ಪ್ರತ್ಯೇಕ ರಾಜ್ಯ ಮಾಡುವುದರಲ್ಲಿ 'ಭಾಷೆ' ಎಂಬ ಒಂದು ಅಂಶ ತೊಡಕಾಗುತ್ತದೆ ಎಂದೆನಿಸುತ್ತದೆ.

ಈ ನಿಟ್ಟಿನಲ್ಲಿ-ನಾವು ಅಂದರೆ ಉತ್ತರ ಕರ್ನಾಟಕದ ಜನತೆ ಎಚ್ಚೆತ್ತು ಕೊಳ್ಳಬೇಕಾಗಿದೆ. ಸರ್ಕಾರದ ಯೋಜನೆಗಳು ನಮ್ಮ ಹಳ್ಳಿಗಳತ್ತ ಬರುತ್ತದೆಯೇ ಎಂದು ನೋಡಿಕೊಳ್ಳಬೇಕಾಗಿದೆ. ಬರದಿದ್ದರೆ ಯಾಕೆ? ಎಂದು ಜನಪ್ರತಿನಿಧಿಗಳನ್ನು ನಾವು ಗಟ್ಟಿಯಾಗಿ ಕೇಳಬೇಕು. ನಾವೇ ಕೇಳದಿದ್ದ ಮೇಲೆ - ಅವರು ನಿರಾಯಾಸವಾಗಿ ಶಾಸನ ಸಭೆಗಳಲ್ಲಿ ನಿದ್ದೆ ಮಾಡುತ್ತಾರೆ ಅಷ್ಟೇ.

ಮೊದಲು ಧಾರವಾಡ, ಬೆಳಗಾವಿ, ಬಿಜಾಪುರ, ಮುಂಬೈ ಅಧಿಪತ್ಯಕ್ಕೊಳಗಾದಾಗ ಬಿ.ಡಿ.ಜತ್ತಿ, ಕೆ.ಎಫ್. ಪಾಟೀಲ್ ಇತ್ಯಾದಿ ಮುಖಂಡರು ಆಗಿನ ಮುಖ್ಯಮಂತ್ರಿ ಮೊರಾರ್ಜಿ ದೇಸಾಯಿಯವರ ಹತ್ತಿರ ಕಾಡಿ-ಬೇಡಿ ಕರ್ನಾಟಕ ವಿಶ್ವವಿದ್ಯಾಲಯ ಮತ್ತು ಕರ್ನಾಟಕ ಮೆಡಿಕಲ್ ಕಾಲೇಜು ಸ್ಥಾಪನೆಯಾಗುವಂತೆ ಮಾಡಿದರು ಆದರೆ ಕರ್ನಾಟಕ ಏಕೀಕರಣ ನಂತರ ಇವು ದಿನೇ ದಿನೇ ರೋಗಗ್ರಸ್ತವಾಗುತ್ತಿವೆ. ಕಾರಣ ಈಗಿನ ಜನರಿಗೇ ಆಗಲಿ ಜನ ಪ್ರತಿನಿಧಿಗಳಿಗೇ ಆಗಲಿ ಯಾರಿಗೂ ಕಾಳಜಿ ಇಲ್ಲ.

ದೇವರಾಜ ಅರಸು ಮುಖ್ಯಮಂತ್ರಿ ಆಗಿದ್ದಾಗ ಅವರು ಕಾವೇರಿ ಕೊಳ್ಳದ ಕಬಿನಿ, ಹಾರಂಗಿ, ಹೇಮಾವತಿ ಇತ್ಯಾದಿಗಳ ಬಗ್ಗೆ ಗಮನಹರಿಸಿ ಆ ಯೋಜನೆಗಳನ್ನು ಪೂರೈಸಿದರೇ ಹೊರತು ಕೃಷ್ಣಾ ಯೋಜನೆಯ ಎಂಜನಿಯರ್‌ಗಳಿಗೆ ಬರೀ ಸಂಬಳ ಕೊಟ್ಟು ಕೊಬ್ಬಿಸಿದರೇ ಹೊರತು ೨೦-೩೦ ಕೋಟಿಯಲ್ಲಿ ಮುಗಿಯಬಹುದಾಗಿದ್ದ ಆ ಯೋಜನೆ ಪೂರ್ತಿಗೊಳಿಸಲಿಲ್ಲ. ಕಾರಣ ಉತ್ತರ ಕರ್ನಾಟಕದ ಜನಪ್ರತಿನಿಧಿಗಳು ಶಾಸನ ಸಭೆಯಲ್ಲಿ ಈ ಬಗ್ಗೆ ಸೊಲ್ಲೆತ್ತಲಿಲ್ಲ.

ಬೆಳಗಾವಿ ಭಾಗದ ಮರಾಠಿ ಶಾಸಕರಂತೂ ಮರಾಠಿಗಾಗಿ ಹೋರಾಡುತ್ತಿದ್ದಾರೆ. ಜನ 'ಕನ್ನಡ' ಉಳಿಸಲು ಹೆಣಗಾಡುತ್ತಿದ್ದಾರೆ. ಇನ್ನು ಅಭಿವೃದ್ಧಿಯ ಮಾತಂತೂ ಕನಸು.

ಶ್ರೇಷ್ಠ ಕಬ್ಬಿಣದ ಅದಿರನ್ನು ಹೊಂದಿರುವ ಬಳ್ಳಾರಿ ಜಿಲ್ಲೆ ಇಡೀ ಕರ್ನಾಟಕದ ಮನೆ ಮಾತಾಗಬೇಕಿತ್ತು. ಆದರೆ ಪರಿಸರ ಪೂರ್ತಿ ದೋಚಿರುವ ಇಲ್ಲಿಯ ಗಣಿ ಮಾಲೀಕರು ಬಳ್ಳಾರಿ ಜಿಲ್ಲೆಯ ಮೂಲೆಯ ಯಾವುದಾದರೂ ಪುಟ್ಟ ಹಳ್ಳಿಯನ್ನು ದತ್ತು ತೆಗೆದುಕೊಂಡು ಅಭಿವೃದ್ಧಿ ಮಾಡಿದ್ದಾರೆಯೇ ಎಂದು ಹುಡುಕಿದರೂ ಸಿಗುವುದಿಲ್ಲ. ಹಾಗೆಯೇ ಈ ಜಿಲ್ಲೆಯ ಜನತೆ ಅಮೂಲ್ಯ ಖನಿಜ ದೋಚುವವರ ಮುಂದೆ ನಿಂತು 'ಇಂತದ್ದು' ಜಿಲ್ಲೆಗಾಗಿ ಮಾಡಿ ಎಂದು ಕೇಳಿದ ಉದಾಹರಣೆ ಇಲ್ಲ.

ಉತ್ತರ ಕರ್ನಾಟಕ ಅಭಿವೃದ್ಧಿಯಾಗಬೇಕೆಂದರೆ ಉತ್ತರ ಕರ್ನಾಟಕದಲ್ಲಿ ಉದ್ಯೋಗಾವಕಾಶಗಳು ಹೆಚ್ಚಬೇಕು. ಇಲ್ಲಿ ಒಳ್ಳೆಯ 'ನಾಯಕತ್ವ' ರೂಪುಗೊಳ್ಳಬೇಕು. ಉದಾಹರಣೆಗೆ ಹಡಗಲಿಯ ಮಂತ್ರಿ ಎಂ.ಪಿ.ಪ್ರಕಾಶ್ (ಇವರ ರಾಜಕೀಯ ಮೌಲ್ಯಗಳೇನೇ ಇರಲಿ) ತರಹದವರು ಪ್ರತಿ ಜಿಲ್ಲೆಯಲ್ಲೂ ಬೆಳೆಯಬೇಕು; ಜನರೇ ಬೆಳೆಸಬೇಕು. ಶಾಸನಸಭೆಯಲ್ಲಿ ಸದಾ ಕ್ರಿಯಾಶೀಲವಾಗಿರುವ ಎಂ.ಪಿ.ಪ್ರಕಾಶ್ ಸರ್ಕಾರದ ಎಲ್ಲಾ ಯೋಜನೆಗಳು ತನ್ನ ಕ್ಷೇತ್ರಕ್ಕೆ ಲಭಿಸುತ್ತಿರುವುದರ ಬಗ್ಗೆ ಸದಾ ಕಾಳಜಿ ವಹಿಸುತ್ತಾರೆ. ಮೊನ್ನೆ ತಾನೇ ಬಜೆಟ್‌ನಲ್ಲಿ ಸ್ಯಾಂಕ್ಷನ್ ಆದ ೬-ವಸ್ತು ಸಂಗ್ರಹಾಲಯಗಳಲ್ಲಿ ಒಂದನ್ನು ಹಡಗಲಿಗೆಂದು ಆಡಳಿತಾತ್ಮಕ ಮಂಜೂರಾತಿ ದೊರಕಿಸಿಕೊಂಡರು.

ಬಹು ಮುಖ್ಯವಾಗಿ ಆಡಳಿತ ವಿಕೇಂದ್ರಿಕರಣವಾಗಬೇಕು. ರಾಜ್ಯದುದ್ದಕ್ಕೂ ಇರುವ ಕೆ.ಎಸ್.ಆರ್.ಟಿ.ಸಿ. ಯನ್ನು ವಿಭಜಿಸಬೇಕು. (ದೂರದ ಬೀದರ್‌ನವರ ಸಾರಿಗೆ ಸಮಸ್ಯೆ ಬಗ್ಗೆ ಬೆಂಗಳೂರಿನ ಜನರಲ್ ಮೇನೇಜರ್‌ಗೆ ಏನು ಗೊತ್ತಿರುತ್ತದೆ). ಹೈಕೋರ್ಟ್ ಪೀಠ ಉತ್ತರ ಕರ್ನಾಟಕದಲ್ಲಿ ಸ್ಥಾಪಿಸಬೇಕು. ನೈಋತ್ಯ ರೇಲ್ವೆ ವಲಯ ಕಛೇರಿ ಕೂಡಾ ಉತ್ತರ ಕರ್ನಾಟಕದಲ್ಲಿ ಸ್ಥಾಪಿತವಾಗಬೇಕು. ರಾಯಚೂರು ಥರ್ಮಲ್ ವಿದ್ಯುತ್ ಕೇಂದ್ರದಲ್ಲಿ ಕಚ್ಚಾ ವಸ್ತು ಕಲ್ಲಿದ್ದಲು ಕೊರತೆ ಇದೆ. ಈ ಬಗ್ಗೆ ಈ ಭಾಗದ ಜನಪ್ರತಿನಿಧಿಗಳು ಮುಖ್ಯಮಂತ್ರಿಗಳ ಮೇಲೆ ಒತ್ತಡ ತರುವ ವಾಂಛಲ್ಯ ಬೆಳೆಸಿಕೊಳ್ಳಬೇಕು. ಜನರು ಪ್ರತಿಯೊಂದನ್ನೂ ಸರ್ಕಾರಕ್ಕೆ ಕೇಳಿ ಪಡೆಯುವ ಗುಣ ಬೆಳೆಸಿಕೊಳ್ಳಬೇಕು. ಹಾಗೆಯೇ ಪರಿಪಕ್ವ ನಾಯಕತ್ವ ಬೆಳೆಯಬೇಕಾಗಿದೆ. ಆಡಳಿತಾತ್ಮಕ ಅನುಕೂಲತೆಗಾಗಿ ಉ.ಕ.ದ ಜಿಲ್ಲೆಗಳನ್ನು ವಿಭಜಿಸಬೇಕು.

**ಬಿ.ಲಕ್ಷ್ಮೀಕಾಂತ ಸಾ**
ಹಗರಿಬೊಮ್ಮನಹಳ್ಳಿ.

# ನಿಚ್ಚಣಿಕೆ ಒದ್ದ ಜನಪ್ರತಿನಿಧಿಗಳು

೧. ಉತ್ತರ ಕರ್ನಾಟಕವು ಪೇಶ್ವೆಗಳಿಂದ ತಾತ್ಸಾರಿಸಲ್ಪಟ್ಟಿದೆ; ಬ್ರಿಟಿಷರಿಂದ ಅಲಕ್ಷಿಸಲ್ಪಟ್ಟಿದೆ; ಮುಂಬೈ ಸರಕಾರ ಬಂದಾಗಲೂ ಅದು ಗಡಿಪ್ರದೇಶವಾಗಿ, ದೂರಾಗಿ ಉಳಿದಿದೆ.

೨. ಕರ್ನಾಟಕ ರಾಜ್ಯದ ಚಿಂತನೆ ಮಾಡಿದವರು-ನಾವು-ಉತ್ತರ ಕರ್ನಾಟಕದವರಾಗಿದ್ದೇವೆ.

೩. ನಿರ್ಲಕ್ಷ್ಯಕ್ಕೊಳಗಾಗಲು ಹೊರಗಿನವರು ಕಾರಣರೆಂದು ಹೇಳುವುದಕ್ಕಿಂತ ಈ ಕಡೆಯಿಂದ ಜನಪ್ರತಿನಿಧಿಗಳಾದವರೇ ಮೂಲ ಕಾರಣರೆಂದು ಹೇಳುವುದು ಸರಿ. ನಮ್ಮಿಂದ ಆರಿಸಿ ಹೋಗಿ, ಬೆಂಗಳೂರು ಸೇರಿದ ಈ ಜನರು ನಿಚ್ಚಣಿಕೆ ಏರಿ ಮೇಲೆ ಹೋದ ಬಳಿಕ ನಿಚ್ಚಣಿಕೆ ಒದ್ದಿದ್ದಾರೆ. ಬೆಂಗಳೂರು ಸೇರಿ ನಮ್ಮನ್ನು ಪೂರ್ಣ ಮರೆತಿದ್ದಾರೆ. ತಮ್ಮ ಮಹತ್ವಾಕಾಂಕ್ಷೆಗಾಗಿ ನಮ್ಮನ್ನು ಬಲಿಪಶು ಮಾಡಿದ್ದಾರೆ.

೪. ಉತ್ತರ ಕರ್ನಾಟಕ ಪ್ರಗತಿಗೆ ಬರಲು ಅಡ್ಡಗಾಲು ಯಾರೂ ಹಾಕುವುದೇಕೆ ಬೇಕು? ರಾಜಕೀಯ ಆತ್ಮನಿಷ್ಠೆ ಇಲ್ಲದ ಈ ಉತ್ತರ ಕರ್ನಾಟಕದ ಜನ ತಮ್ಮನ್ನು ತಾವೇ ಕೊಂದುಕೊಂಡಿದ್ದಾರೆ. ಸಮಯ ಸಾಧಕರನ್ನು ಆಯ್ದು ನಾವು ಗೋಳಾಡುತ್ತಿದ್ದೇವೆ.

೫. ದುರ್ದೈವಕ್ಕೆ ನಮಗೆ ಬೆಂಗಳೂರು ದೂರಾಯಿತು; ಮುಂಬೈ ಹೈದರಾಬಾದು ಸನಿಹವಾಗಿದೆ. ಉತ್ತರ ಕರ್ನಾಟಕದಿಂದ ಆಯ್ಕೆಯಾಗಿ ಹೋದ ಪುಢಾರಿಗಳು ಬೆಂಗಳೂರು ತಲುಪುವಷ್ಟರಲ್ಲಿ ತಮ್ಮನ್ನು ತಾವೇ ಮರೆತರು; ನಮ್ಮನ್ನೂ ಮರೆತರು!

೬. ನಮಗಾದ ಅನ್ಯಾಯದಿಂದ ಕ್ರುದ್ಧರಾದ ನಾವು ನಮ್ಮದೇ ಉತ್ತರ ಕರ್ನಾಟಕ ಬೇಡುವಲ್ಲಿ ತಪ್ಪೇನಿಲ್ಲ. ಆದರೆ, ನಮ್ಮ ಹಿರಿಯರ ಅನೇಕ ವರ್ಷಗಳ ಅಭೀಪ್ಸೆ ಸಾಕಾರಗೊಂಡು ಕರ್ನಾಟಕ ಆಗಿದೆ. ಆ ದೆಸೆಯಲ್ಲಿ ಹಳೆಯ ಮೈಸೂರಿನ ಸಹೋದರರು ತ್ಯಾಗ ಮಾಡಿದ್ದುಂಟು. ವಿಜಯನಗರದ ನಂತರ ಕರ್ನಾಟಕ ಏಕೀಕೃತವಾಗಿದೆ. ಅದನ್ನು ಕಟ್ಟಿದ ನಾವೆಲ್ಲಾ ೨೨ ವಿಭಾಗದ ಜನರು ಮತ್ತೆ ಪುನಃ ಸಿಂಹಾವಲೋಕನ ಮಾಡುವುದಿದೆ.

೭. ನಮ್ಮ ದುಃಖಗಳು:

* ಸಿನಿಮಾ, ರೇಡಿಯೋ, ಟಿವಿಗಳಲ್ಲಿ ಉತ್ತರ ಕರ್ನಾಟಕದ ಆಡು ಭಾಷೆಯನ್ನು ಹಾಸ್ಯಕ್ಕಾಗಿ, ಅವಹೇಳನಕ್ಕಾಗಿ ಉಪಯೋಗಿಸಬೇಕೆ?

* ಉತ್ತರ ಕರ್ನಾಟಕದ ೧೦ ಜಿಲ್ಲೆಗಳಿಂದ ಸಿನೆಮಾದ ರೊಕ್ಕ ದಕ್ಷಿಣದವರಿಗೆ ಬೇಕು. ಆದರೆ....ನಾವು ಬೇಡ?

* ನಮ್ಮ ಕಲಾವಿದರೆಲ್ಲಿ? ನಮ್ಮ ಸಾಹಿತಿಗಳೆಲ್ಲಿ? ನಮ್ಮ ಚಿತ್ರಕಾರರೆಲ್ಲಿ? ನಮ್ಮ ಕಾದಂಬರಿಕಾರರೆಲ್ಲಿ? ನಮ್ಮ ನಟನಟಿಯರೆಲ್ಲಿ? ನಮ್ಮ ಅಧಿಕಾರಿಗಳೆಷ್ಟು? ರಾಜ್ಯದ ಒಟ್ಟು ಕೈಗಾರಿಕೆಗಳಲ್ಲಿ ನಮ್ಮವೆಷ್ಟು? ನಮ್ಮ ಪತ್ರಿಕೆಗಳೆಲ್ಲಿ?

* ಎಲ್ಲವು ಬೆಂಗಳೂರು-ಮೈಸೂರಿನಲ್ಲಿಯೇ ಆಗಬೇಕೆಂಬ ಹಟದಿಂದ ಈ ಧೋರಣೆ ಬರಲಿಲ್ಲವೇ?

೮. ಪ್ರತ್ಯೇಕ ರಾಜ್ಯ ಬೇಡ.

ಅದಕ್ಕೆ ಪರಿಹಾರಗಳಿವೆ :

* ಮೈಸೂರಿನ ಸಹೋದರರು ನಮ್ಮನ್ನು ಪ್ರೀತಿ-ವಿಶ್ವಾಸಗಳಿಂದ ಕಾಣಬೇಕು.

* ತುಂಗಭದ್ರೆಯ ಕೆಳಗೆ-ಮೇಲೆ ಸಾಂಸ್ಕೃತಿಕ ಸಂಬಂಧ ಬೆಳೆಸಲಿ.

* ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ೩೦ ವರ್ಷಕ್ಕೂ ಮಿಕ್ಕಿ ಇದ್ದ ಹಳೇ ಮೈಸೂರಿನ ಪ್ರಾಧ್ಯಾಪಕರು ತಪ್ಪಿಯೂ ನಮ್ಮೊಂದಿಗೆ ಸಾಮರಸ್ಯ ಹೊಂದದೆ, ತಮ್ಮ 'ಮೈಸೂರು' ಸಂಘಟನೆ ಬೆಳೆಸಿದರಲ್ಲ!

* ಸಮಗ್ರ ಕರ್ನಾಟಕ ದೃಷ್ಟಿ ಎಲ್ಲರಲ್ಲಿಯೂ ಒಡಮೂಡಬೇಕು.



* ಉತ್ತರ ಕರ್ನಾಟಕದ ಒಂದೆಡೆ, ಕರ್ನಾಟಕ ಉಪರಾಜಧಾನಿ ಕಟ್ಟಲ್ಪಡಲಿ.

* ಈಗ ಆಗಿರುವ ಅನ್ಯಾಯಗಳ ಪರಿಮಾರ್ಜನೆಯಾಗಲಿ

* ಕರ್ನಾಟಕವನ್ನು ಕಟ್ಟಿದ ವೀರಶೈವರಿಗಾಗಿರುವ ಅನ್ಯಾಯಗಳು ಬೇಗ ನೀಗಲ್ಪಡಲಿ.

* ಉತ್ತರ ಕರ್ನಾಟಕದ ಸರಕಾರಿ ಕಾರ್ಯಕರ್ತರು ದಕ್ಷಿಣಕ್ಕೆ, ದಕ್ಷಿಣದವರು ಉತ್ತರಕ್ಕೆ ವರ್ಗವಾಗಿ ಬರಲಿ.

**ಪ್ರೊ. ವಿ.ಜಿ. ಮಾರಿಹಾಳ**
ಚನ್ನಬಸವ ಕೃಪ, ಹುಬ್ಬಳ್ಳಿ ರಸ್ತೆ,
ವಿವೇಕಾನಂದ ನಗರ, ವಿದ್ಯಾಗಿರಿ, ಧಾರವಾಡ.

# ಮಿದುಳಿನ ಶಕ್ತಿ

( ೫೫ನೇ ಪುಟದಿಂದ )

ಒಟ್ಟಾರೆ ವ್ಯಕ್ತಿತ್ವ ವಿಕಾಸವು ನಮ್ಮ ಸಂಪರ್ಕ, ತಿಳಿವಳಿಕೆ ಹಾಗೂ ಅಧ್ಯಯನದ ಮೇಲೆ ಹೆಚ್ಚು ಅವಲಂಬಿತವಾಗಿದೆ. ಯಾವ ರೀತಿಯ ಜನರು ಹಾಗೂ ಮಾಧ್ಯಮಗಳನ್ನು ನಾವು ಸಂಪರ್ಕಿಸುತ್ತೇವೆ ಎಂಬುದನ್ನು ನಮ್ಮ ವಿಕಸನದ ವ್ಯಾಪ್ತಿ ಒಳಗೊಂಡಿದೆ. ಯಾವುದೇ ಕಾರ್ಯ ಸಾಧನೆಗೆ ಮುಂಚೆ ನೀವು ಸಂಪೂರ್ಣ ತಯಾರಿ-ಸಿದ್ಧತೆ ಮಾಡಿಕೊಳ್ಳುವುದು ಅತ್ಯಗತ್ಯ.

(ಸಶೇಷ)

# ವಿಭಜನೆ ವಾದವನ್ನು ನಾನು ಒಪ್ಪುವುದಿಲ್ಲ

★ ಪೂರ್ಣ ನಿರ್ಲಕ್ಷ್ಯಕ್ಕೊಳಗಾಗಿದೆ ಎಂದು ಹೇಳಲಾರೆ. ಅಗತ್ಯ ಲಕ್ಷ್ಯಕ್ಕೆ ಒಳಗಾಗಿಲ್ಲ ವೆಂಬುದಂತೂ ಸತ್ಯ.

★ ಇದಕ್ಕೆ ಕಾರಣ ಜನ ಪ್ರತಿನಿಧಿಗಳು-ಪ್ರಜಾಸತ್ತಾತ್ಮಕ ವ್ಯವಸ್ಥೆಯಲ್ಲಿ ಜನಸಮುದಾಯ ತಾನು ಆರಿಸುವ ಪ್ರತಿನಿಧಿಗಳಲ್ಲಿ ವಿಶ್ವಾಸವಿಡುತ್ತದೆ. ಆ ವಿಶ್ವಾಸಕ್ಕೆ ತಕ್ಕಂತೆ ಪ್ರತಿನಿಧಿಗಳು ಪ್ರಾಮಾಣಿಕವಾಗಿ ದುಡಿಯದಿದ್ದರೆ ಅಭಿವೃದ್ಧಿ ಹೇಗಾಗುತ್ತದೆ; 1956 ರಿಂದ ಉತ್ತರ ಕರ್ನಾಟಕ ಭಾಗದಿಂದ ಆಯ್ಕೆಯಾಗುತ್ತ ಬಂದ ಜನ ಪ್ರತಿಧಿಗಳು ಸಂಘಟಿತ ಪ್ರಯತ್ನ ನಡೆಸದಿದ್ದುದು ಕಾರಣ.

★ ಜಾತಿ ರಾಜಕೀಯದಲ್ಲಿ 'ಅಡ್ಡ'ಗಾಲು ಹಾಕುವುದು ಸಾಮಾನ್ಯ. ಯಾರೇ 'ಅಡ್ಡ'ಗಾಲು ಹಾಕಿದರೂ ಉತ್ತರ ಕರ್ನಾಟಕ ಭಾಗದ ಜನ ಪ್ರತಿನಿಧಿಗಳು 'ಉದ್ದ' ಗಾಲು ಹಾಕಲು ಸಿದ್ಧರಾಗಿದಿದ್ದರೆ ಈ ಪರಿಸ್ಥಿತಿಗೆ ಅವಕಾಶವಿರುತ್ತಿರಲಿಲ್ಲ.

★ ಪ್ರಾದೇಶಿಕ ಅಸಮತೋಲನಕ್ಕೆ ರಾಜಕಾರಣಿಗಳು ಹೊಣೆಗಾರರು ಎಂದು ಹೇಳಿ ಕೈತೊಳೆದುಕೊಳ್ಳಲಾಗದು. ಇದರಲ್ಲಿ ಜನತೆಯ ಪಾತ್ರವೂ ಮುಖ್ಯ ಎಂದು ನಾನು ತಿಳಿದಿದ್ದೇನೆ. ಜನತೆ ಕೆಲವು ವೈಯಕ್ತಿಕ ಅಗತ್ಯಗಳಿಗಷ್ಟೇ ರಾಜಕಾರಣಿಗಳನ್ನು ಬಳಸಿಕೊಳ್ಳುವುದು ಸೂಕ್ತವಲ್ಲ. ತಮ್ಮ ಪ್ರದೇಶದ ಒಟ್ಟು ಪ್ರಗತಿಯ ಬಗ್ಗೆ ರಾಜಕಾರಣಿಗಳ ಮೇಲೆ ಒತ್ತಡ ತರಬೇಕು. ಉತ್ತರ ಕರ್ನಾಟಕದ ಜನ ಸರಳ ಹಾಗೂ ಮುಗ್ಧರು. ಹಾಗಾಗಿ ಜನಪ್ರತಿನಿಧಿಗಳು ಜಾಗೃತರಾಗಲಿಲ್ಲ. ಆದ್ದರಿಂದ ಜನ ಶಕ್ತಿಯೇ ಮುಂದಾಗಬೇಕು. ತನ್ನ ಕ್ಷೇತ್ರದ ಅಭಿವೃದ್ಧಿ ಸಾಧಿಸಲಾಗದ ಪ್ರತಿನಿಧಿಗಳಿಗೆ ಪಾಠ ಹೇಳಬೇಕು.

★ ಕರ್ನಾಟಕದ ಮುಖ್ಯಮಂತ್ರಿಗಳ ಸಾಲಿನಲ್ಲಿ ಉತ್ತರ ಕರ್ನಾಟಕದವರೆಂದು ಕರೆಯಬಹುದಾದವರು ಕೇವಲ ನಾಲ್ಕು ಜನ. ಉಳಿದ ಎಂಟು ಜನ ದಕ್ಷಿಣ ಕರ್ನಾಟಕದವರೇ. ಉತ್ತರ ಕರ್ನಾಟಕದ ನಾಲ್ಕು ಜನರಲ್ಲೂ ಇಬ್ಬರದು ಅತ್ಯಲ್ಪ ಅವಧಿ. ಆದರೆ ದಿ. ವೀರೇಂದ್ರ ಪಾಟೀಲರು ಮುಖ್ಯಮಂತ್ರಿಗಳಾಗಿದ್ದಾಗ ಉತ್ತರ ಕರ್ನಾಟಕ ಭಾಗದ ರಸ್ತೆ ಸಂಪರ್ಕದ ಒಂದಷ್ಟು ಕೆಲಸಗಳು ನಡೆದಿವೆ. ಯಾರೇ ಇದ್ದರೂ ಉತ್ತರ ಕರ್ನಾಟಕದ ಅಭಿವೃದ್ಧಿಯ ಬಗ್ಗೆ ಎಡವಿದ್ದಾರೆಂದು ನನಗನಿಸದು. ಆದರೆ ಕ್ಷಿಪ್ರ ಹಾಗೂ ದೃಢ ನಿರ್ಧಾರವಿಲ್ಲದೆ ನಿರೀಕ್ಷಿತ ವೇಗದಲ್ಲಿ ಆ ಭಾಗದ ಅಭಿವೃದ್ಧಿ ಕಾರ್ಯಗಳು ನಡೆಯಲಿಲ್ಲ.

★ ದೇವೇಗೌಡರಿಗೆ ಉತ್ತರ ಕರ್ನಾಟಕದ ಬಗ್ಗೆ ಕಾಳಜಿ ಇರುವುದು ನನಗೆ ಕಂಡುಬಂದಿಲ್ಲ. ಇರಬಹುದಾದ ಕಾಳಜಿಯೆಲ್ಲ ರಾಜಕೀಯದ್ದು. ಮುಖ್ಯಮಂತ್ರಿ ಜೆ.ಹೆಚ್.ಪಟೇಲರು, ಇನ್ನೂ ದೃಢ ಮನಸ್ಸು ಮಾಡಿಲ್ಲವೆಂದೇ ನನಗನಿಸುತ್ತದೆ: ಕರ್ನಾಟಕ ಇಬ್ಭಾಗವಾಗುವುದು ಸುಲಭವಲ್ಲ ಎನ್ನುವ ಸಮಾಧಾನವೂ ಇದಕ್ಕೆ ಕಾರಣವಿರಬಹುದು. ಪಾಟೀಲ ಪುಟ್ಟಪ್ಪನವರ 'ಕರ್ನಾಟಕ ವಿಭಜನೆ' ವಾದವನ್ನು ನಾನು ಒಪ್ಪುವುದಿಲ್ಲ. ಆದರೆ ಅವರ ಕಳಕಳಿಯನ್ನು ಎಲ್ಲರೂ ಅರ್ಥಮಾಡಿಕೊಳ್ಳಬೇಕು. ಕರ್ನಾಟಕ ಏಕೀಕರಣಕ್ಕಾಗಿ ದುಡಿದವರಲ್ಲಿ ಪಾಟೀಲ ಪುಟ್ಟಪ್ಪನವರೂ ಒಬ್ಬರು. ಅವರಿಗೆ ಕರ್ನಾಟಕ ಇಬ್ಭಾಗವಾಗಬೇಕೆಂಬ ಇಚ್ಛೆಯಿದೆಯೆಂದು ನಾನು ಭಾವಿಸಲಾರೆ. ಅವರದು ಉತ್ತರ ಕರ್ನಾಟಕಕ್ಕೆ ಆಗಿರುವ ಅನ್ಯಾಯದ ವಿರುದ್ಧ ನೋವಿನ ದನಿ. ಇನ್ನು ಹೆಚ್.ಕೆ.ಪಾಟೀಲರು. ಸ್ಪಷ್ಟವಾಗಿ ಹೇಳಬೇಕೆಂದರೆ, ಅವರು ನಮ್ಮ ಕಾಲದ ಓರ್ವ ಭರವಸೆಯ ಯುವ ಶಾಸಕರೆಂದು ತಿಳಿದಿದ್ದೇನೆ. ಉತ್ತರ ಕರ್ನಾಟಕಕ್ಕೆ ಸಂಬಂಧಿಸಿದ ತುಂಬ ಮಾಹಿತಿ ಸಂಗ್ರಹಿಸಿದ್ದಾರೆ. ಅವರೂ ಅಷ್ಟೆ, ಅನ್ಯಾಯದ ವಿರುದ್ಧ ಕೈಯೆತ್ತಿದ್ದಾರೆ ವಿನಾಃ ಕರ್ನಾಟಕ ಇಬ್ಭಾಗದ ಪರವಾಗಲ್ಲ.

★ ಪ್ರತ್ಯೇಕ ರಾಜ್ಯದ ಅಗತ್ಯವಿಲ್ಲ. ದೇಹದ ಯಾವುದೋ ಅಂಗ ದುರ್ಬಲವಾಗಿದೆ ಎಂದು ಅದನ್ನು ದೇಹದಿಂದಲೇ ಬೇರ್ಪಡಿಸಿ ದುರಸ್ತಿ ಮಾಡಲಾಗದು. ಉತ್ತರ ಕರ್ನಾಟಕ, ಕರ್ನಾಟಕದ ಒಂದು ಅವಿಭಾಜ್ಯಾಂಗ. ವಾಸ್ತವವಾಗಿ ಶಿರೋಭಾಗ. ಅದನ್ನು ಬೇರ್ಪಡಿಸಿ ಏನು ಮಾಡಲಾದೀತು? ಉತ್ತರ ಕರ್ನಾಟಕ ಭಾಗದ ಶಾಸಕರ ಸಂಖ್ಯೆಯೇನೂ ಕಡಿಮೆಯಿಲ್ಲ. ಅವರಲ್ಲಿ ಪಕ್ಷಭೇದ ಬದಿಗಿಟ್ಟು ಸಂಘಟಿತರಾಗಿ ಆಗಬೇಕಾಗಿರುವ ಅಭಿವೃದ್ಧಿ ಯೋಜನೆಗಳನ್ನು ತ್ವರಿತಗೊಳಿಸಲು ಸರ್ಕಾರದ ಮೇಲೆ ಒತ್ತಡ ಹೇರಬೇಕು. ಜನ ಪ್ರತಿನಿಧಿಗಳಿಗೆ ಕೇವಲ ಮಾಸಾಶನ ಕೊಡಿಸುವುದು, ಸಾಲಕೊಡಿಸುವುದು, ವರ್ಗಾ-ವರ್ಗಿಯಲ್ಲಿ ನೆರವಾಗುವುದು, ಸಮಾರಂಭಗಳಲ್ಲಿ ಪಾಲುಗೊಳ್ಳುವುದು, ಇವುಗಳೇ ಮುಖ್ಯವಾಗಬಾರದು. ಜನತೆಯೂ ಅಷ್ಟೆ; 'ಪ್ರಗತಿ ವೇದಿಕೆ'ಗಳನ್ನು ರೂಪಿಸಿಕೊಂಡು ತಮ್ಮ ಭಾಗದ ಶಿಕ್ಷಣ, ನೀರಾವರಿ, ರಸ್ತೆ-ರೈಲು, ಕೈಗಾರಿಕೆ, ವಿದ್ಯುಚ್ಛಕ್ತಿ ಸೌಲಭ್ಯಗಳಿಗೆ ಸಂಬಂಧಿಸಿದ ಒಟ್ಟು ಅಭಿವೃದ್ಧಿ ಕಾರ್ಯಗಳ ಬಗ್ಗೆ ಒತ್ತಡ ತರಬೇಕು. ರಾಜ್ಯದ ರಾಜಧಾನಿಯಲ್ಲಿ ಸಚಿವಾಲಯಗಳಿರಲಿ. ಆದರೆ ಅನಿವಾರ್ಯವೆನಿಸಿರುವ ಕೆಲವು ಇಲಾಖೆಗಳನ್ನು ಬಿಟ್ಟು ಉಳಿದ ಇಲಾಖೆಗಳ ನಿರ್ದೇಶನಾಲಯಗಳನ್ನು ಕನಿಷ್ಠ ವಿಭಾಗ ಕೇಂದ್ರಗಳಿಗಾದರೂ ವರ್ಗಾಯಿಸಬೇಕು. ಹೊಸ ಯೋಜನೆಗಳಿಗೆ ಸಂಬಂಧಿಸಿದಂತೆ ಸಾಧ್ಯವಾದಷ್ಟು ಮಟ್ಟಿಗೆ ಹಿಂದುಳಿದ ಪ್ರದೇಶಗಳಿಗೆ ಆದ್ಯತೆ ನೀಡಬೇಕು.

★ ಎಲ್ಲಕ್ಕಿಂತ ಮುಖ್ಯವಾದುದು ಜನಶಕ್ತಿ. ಜನಶಕ್ತಿಯ ಜಾಗೃತಿ ಜನಪ್ರತಿನಿಧಿಗಳನ್ನು ಎಚ್ಚರಿಸುತ್ತದೆ. ಜನ ಪ್ರತಿನಿಧಿಗಳ ಎಚ್ಚರದಿಂದ ಸರ್ಕಾರ ಕ್ರಿಯಾಶೀಲವಾಗುತ್ತದೆ.

★ ರಾಷ್ಟ್ರದ ರಾಜಧಾನಿಯಲ್ಲಿ ವಿವಿಧ ರಾಜ್ಯಗಳ ಭವನಗಳಿರುವಂತೆ ರಾಜ್ಯದ ರಾಜಧಾನಿಯಲ್ಲೂ ವಿವಿಧ ಜಿಲ್ಲೆಗಳ ಭವನಗಳಿರಬೇಕು. ಆ ಜಿಲ್ಲಾ ಭವನಗಳು ವಿಧಾನಸೌಧ ಮತ್ತು ಆಯಾ ಜಿಲ್ಲೆಗಳ ಮಧ್ಯೆ ಸಂಪರ್ಕ ಸೇತುವೆಗಳಂತೆ ಕಾರ್ಯ ನಿರ್ವಹಿಸಬೇಕು. ಈ ಬಗ್ಗೆ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ನಿರ್ಣಯವನ್ನೇ ಮಾಡಿ ಸರ್ಕಾರಕ್ಕೆ ಕಳುಹಿಸಿದೆ.

**ಗೊ.ರು. ಚನ್ನಬಸಪ್ಪ**
ಬೆಂಗಳೂರು.

# ರಾಮಕೃಷ್ಣ ಹೆಗಡೆಯ ಮಿತಿ

○ ಖಂಡಿತವಾಗಿ ನಿರ್ಲಕ್ಷಿಸಲ್ಪಟ್ಟಿದೆ.

○ ಪ್ರಾದೇಶಿಕ-ವ್ಯಾಮೋಹವಿರುವವರಿಂದ, ಅವಕಾಶವಾದಿಗಳಿಂದ. ಇದಕ್ಕೆ ರಾಜಕಾರಣಿಗಳು, ಬುದ್ಧಿಜೀವಿಗಳು, ಪತ್ರಕರ್ತರು, ಸಾಹಿತಿ, ಕಲಾವಿದರುಗಳೂ ಹೊರತಲ್ಲ. ಕರ್ನಾಟಕದ ಏಕೀಕರಣದ ಸಂದರ್ಭದಲ್ಲಿ ಇದ್ದ ತುಡಿತ, ಹುಮ್ಮಸ್ಸು, ಹೋರಾಟ, ಆದರ್ಶ, ಗುರಿಗಳು ಅವಕಾಶ ಬಾಚಿಕೊಳ್ಳುವವರಿಂದಾಗಿ ತಿರುವು ಮುರುವಾದವು.

○ ಅಖಂಡ ಕರ್ನಾಟಕವನ್ನು ಸಾಂಸ್ಕೃತಿಕವಾಗಿ ಬಂಧಿಸಿಡಬೇಕೆಂಬ ಹಲವರ ಒತ್ತಾಸೆಯ ನಡುವೆಯೂ ಕೆಲವು ಪ್ರಭಾವಿ ಪಟ್ಟಭದ್ರರು ಉತ್ತರ ಕರ್ನಾಟಕದ ಪ್ರಗತಿಗೆ ತೊಡರುಗಾಲು ಹಾಕಿರುವುದಂತೂ ನಿಜ.

○ ದೈನಂದಿನ ಬದುಕು ದುರ್ಭರವಾಗಿರುವ ಸಂದರ್ಭದಲ್ಲಿ, ಹೊಟ್ಟೆ ಬಟ್ಟೆಯ ಚಿಂತೆಯಲ್ಲೇ ಕಾಲಕಳೆಯುವ ಬಹುಜನ ಈ ಪ್ರಾದೇಶಿಕ ಪರಿಕಲ್ಪನೆ, ಅಸಮತೋಲನ ಬಗ್ಗೆ ನಿರಾಸಕ್ತರು. ಉದಾರತೆಯ ಮುಸುಕಿನಲ್ಲಿ ಉತ್ತರ ಕರ್ನಾಟಕದವರಿಗೆ ತುಟಿಗೆ ತುಪ್ಪ ಹಚ್ಚಿ 'ಚೈ' ಬಡಿದ ರಾಜಕಾರಣಿಗಳೇ ಈ ಕಂದರಕ್ಕೆ ಕಾರಣರು.

○ ಬಿ.ಡಿ.ಜತ್ತಿ, ಎಸ್.ಆರ್.ಕಂಠಿ, ವೀರೇಂದ್ರ ಪಾಟೀಲ, ರಾಮಕೃಷ್ಣ ಹೆಗಡೆ, ಎಸ್.ಆರ್.ಬೊಮ್ಮಾಯಿ ಇವರು ರಾಜ್ಯದ ಮುಖ್ಯಮಂತ್ರಿಗಳಾಗಿದ್ದವರು. ಜತ್ತಿ, ಕಂಠಿಯವರ ಅವಧಿಯಲ್ಲಿ ಶಿಕ್ಷಣ ಕ್ಷೇತ್ರಕ್ಕೆ ನೀಡಿದ ಆದ್ಯತೆಯನ್ನು ಅಲ್ಲಗಳೆಯುವಂತಿಲ್ಲ. ವೀರೇಂದ್ರ ಪಾಟೀಲರು ಉತ್ತರ ಕರ್ನಾಟಕಕ್ಕಿಂತ ಹೈದರಾಬಾದ ಕರ್ನಾಟಕದತ್ತ ಒಲವು ತೋರಿದ ಕಾರಣ ಸಮಗ್ರ ಉತ್ತರ ಕರ್ನಾಟಕದ ಅಭಿವೃದ್ಧಿಯಾಗದಿದ್ದರೂ ಹೈದರಾಬಾದ ಕರ್ನಾಟಕದ ಅನೇಕ ಹಳ್ಳಿಗಳು ರಸ್ತೆ, ವಿದ್ಯುತ್, ಆಸ್ಪತ್ರೆ ಹೊಂದುವಂತಾಯಿತು. ಅಲ್ಲದೆ ಅವರು ಕೃಷ್ಣಾ ಮೇಲ್ದಂಡೆ ಯೋಜನೆ, ಬೆಣ್ಣೆತೊರಾ, ಮುಲ್ಲಾಮಾರಿಯಂಥ ಹಲವು ನೀರಾವರಿ ಯೋಜನೆಗಳಿಗೆ ಚಾಲನೆ ನೀಡಿದರೂ ಅಧಿಕಾರದ ಸ್ಥಿತ್ಯಂತರದಿಂದಾಗಿ ಪಾಟೀಲರ ಕನಸಿನ ಈ ಯೋಜನೆಗಳು ತೆವಳುತ್ತಲೇ ಸಾಗಿರುವುದೊಂದು ದುರಂತ. ರಾಮಕೃಷ್ಣ ಹೆಗಡೆಯವರ ಅವಧಿಯಲ್ಲಿ ಕುಡಿಯುವ ನೀರಿನ ಕೊರತೆ ಕೊಂಚ ನೀಗಿತೆನಿಸಿದರೂ ಹೆಗಡೆಯವರೂ ಸಮಗ್ರ ಉತ್ತರ ಕರ್ನಾಟಕದ ಉನ್ನತಿಗಾಗಿ ಚಿಂತಿಸಿದ್ದೂ ಅನುಮಾನವೆ! ಎಸ್.ಆರ್.ಬೊಮ್ಮಾಯಿಯಿಂದ ಹೇಳಿಕೊಳ್ಳುವಂಥಾದ್ದೇನೂ ಆಗಲೇ ಇಲ್ಲ (ಈಗಲೂ ಅಷ್ಟೆ).



ಕರ್ನಾಟಕದವರೇ ಆದ ದೇವೇಗೌಡರು ಸಮಗ್ರ ಕರ್ನಾಟಕದುನ್ನತಿಯ ದೃಷ್ಟಿಕೋನ ಹೊಂದಬೇಕಾಗಿತ್ತು. ಆದರೆ ಅವರಲ್ಲಿ ಆ ಉದಾರತೆ ಬರಲೇ ಇಲ್ಲ. ಬೆಂಗಳೂರು, ಮೈಸೂರು, ಹಾಸನ ಭಾಗದ ಅಭಿವೃದ್ಧಿಗೆ ಆದ್ಯಗಮನ ನೀಡಿದ್ದರ ಫಲವಾಗಿ ಕೇಂದ್ರ ಸರ್ಕಾರದ ಅನೇಕ ಯೋಜನೆಗಳು ಉತ್ತರ ಕರ್ನಾಟಕಕ್ಕೆ ದಕ್ಕದಂತಾದವು. ರಾಜ್ಯದ ಪ್ರಗತಿಗಿಂತ ಆಡಳಿತವನ್ನು ಏಗಿಸಿಕೊಂಡು ಹೋಗುವದರಲ್ಲೇ ಪಟೇಲರ ಶಕ್ತಿ ಸಮಯ ಹ್ರಾಸವಾಗುತ್ತಿರುವಾಗ ಉತ್ತರ ಕರ್ನಾಟಕದ ಬಗ್ಗೆ.... ಪಾಟೀಲ ಪುಟ್ಟಪ್ಪ, ಹೆಚ್.ಕೆ. ಪಾಟೀಲರು ಎತ್ತಿದ ಧ್ವನಿಯಲ್ಲಿ ದಮ್ ಇದೆ. ಅದಕ್ಕೆ ಈ ಭಾಗದ ರಾಜಕಾರಣಿಗಳ, ಬುದ್ಧಿಜೀವಿಗಳ, ವ್ಯಾಪಾರಿಗಳ ಸಾಹಿತಿ ಕಲಾವಿದರ, ಸಕಲ ಸಾರ್ವಜನಿಕರ ಒಕ್ಕೊರಲಿನ ಬೆಂಬಲ ಬೇಕಾಗಿದೆ. ದುರ್ದೈವವೆಂದರೆ, ಪಕ್ಷದ ಕಟ್ಟಳೆ, ಅಧಿಕಾರದ ಪ್ರಲೋಭನೆಯಿಂದಾಗಿ ಇವರಿಬ್ಬರಿಗೆ ತಕ್ಕ ಬೆಂಬಲ ಸಿಗದೇ ಇವರಿಬ್ಬರ ಧ್ವನಿ ಕೀರಲು ಧ್ವನಿಯಾಗುತ್ತಿರುವುದು ನಮ್ಮ ಈ ಭಾಗದ ಸೋಂಭೇರಿತನಕ್ಕೆ ಸಾಕ್ಷಿಯೆನಿಸಿದೆ.

○ ಪ್ರಾದೇಶಿಕ ಸಮತೋಲನ ನೀಗಿಸಲು ಪ್ರತ್ಯೇಕ ರಾಜ್ಯದ ರಚನೆಯು ಪರಿಹಾರವಲ್ಲ. ಈ ಬೇಡಿಕೆ ಸಾಧುವೂ ಅಲ್ಲ. ಒಟ್ಟಿನಲ್ಲಿ ಉತ್ತರ ಕರ್ನಾಟಕದಿಂದ ಆರಿಸಿ ಹೋದ ಜನಪ್ರತಿನಿಧಿಗಳು ಈ ಪ್ರದೇಶದ ಉನ್ನತಿಗಾಗಿ ಪ್ರಾಮಾಣಿಕವಾಗಿ ಪ್ರಯತ್ನಿಸಿದಲ್ಲಿ ಈ ತಾರತಮ್ಯ ಖಂಡಿತ ನಿಗುವುದು. ದೇಶದ ಸ್ವಾತಂತ್ರ್ಯಕ್ಕಾಗಿ ಕರ್ನಾಟಕದ ಏಕೀಕರಣಕ್ಕಾಗಿ ಈ ಭಾಗದ ಜನರು ಪ್ರಾಣವನ್ನು ಪಣಕ್ಕಿಟ್ಟು ಹೋರಾಡಿದ್ದಾರೆ. ಹುತಾತ್ಮರಾಗಿದ್ದಾರೆ. ಸಾಮ್ರಾಜ್ಯಗಳು ತಲೆ ಎತ್ತಿದ ಈ ಪ್ರದೇಶ ಕಲೆ, ಸಾಹಿತ್ಯದಲ್ಲಿ ಜಗತ್ತಿಗೆ ಆದರ್ಶ ಮಾದರಿಯನ್ನು ನೀಡಿದೆ ಎಂಬುದನ್ನು ಕಡೆಗಣಿಸುವಂತಾಗಬಾರದು. ಇಲ್ಲಿ ಸಮರ್ಥ ಆಡಳಿತಗಾರರಿದ್ದಾರೆ, ಮುತ್ಸದ್ಧಿಗಳಿದ್ದಾರೆ, ಸಾಹಿತಿ ಕಲಾವಿದರಿದ್ದಾರೆ, ದಿಗ್ಗಜ ಬುದ್ಧಿಜೀವಿಗಳಿದ್ದಾರೆ. ಉತ್ತರ ಕರ್ನಾಟಕದ ಜನರೂ ಕರ್ನಾಟಕದ ಆಡಳಿತದಲ್ಲಿ ಅಧಿಕಾರದಲ್ಲಿ ಪಾಲುಗಾರರಾಗುವ ಅಧಿಕಾರ ಹೊಂದಿದವರಾಗಿದ್ದಾರೆ. ಹಾಗೆಯೆ ಅಕಾಡೆಮಿ, ನಿಗಮ, ಮಂಡಳಿಗಳ ಅಧ್ಯಕ್ಷಗಿರಿಯಲ್ಲೂ ಈ ಭಾಗದವರಿಗೆ ಸಿಂಹಪಾಲು ಸಿಕ್ಕಲೇಬೇಕು. ರಾಜ್ಯದ ದಕ್ಷಿಣದ ಕೊನೆಗೆ (ಮೂಲೆಗೆ) ಇರುವ ಬೆಂಗಳೂರು ಅಧಿಕಾರದ ಕೇಂದ್ರ ಸ್ಥಾನವಾಗಬಾರದು. ಕರ್ನಾಟಕದ ಮಧ್ಯ ಸ್ಥಳದಲ್ಲಿ ಹೈಕೋರ್ಟು ಪೀಠ ಸ್ಥಾಪಿಸಬೇಕು. ಬೃಹತ್ ಕಾರ್ಖಾನೆಗಳು ಈ ಭಾಗದಲ್ಲಿ ತಲೆ ಎತ್ತಬೇಕು ಪ್ರತಿಭಾ ಪುರಸ್ಕಾರ, ಪ್ರಶಸ್ತಿಗಳು ಈ ಭಾಗದ ಅರ್ಹರಿಗೆ ಸಿಗಲೇಬೇಕು; ದಕ್ಷಿಣ-ಉತ್ತರ ಕರ್ನಾಟಕದ ಈ ಕೊಡುಕೊಳ್ಳುವಿಕೆಯಲ್ಲಿ ಕರ್ನಾಟಕಕ್ಕೆ ಭದ್ರ ಭವಿಷ್ಯವಿದೆ. ಪತ್ರಿಕೆಗಳೂ ಈ ಭಾಗದ ಬಗ್ಗೆ ತಾಳಿರುವ ಮಲತಾಯಿ ಧೋರಣೆ ತೊರೆದು ಇಲ್ಲಿಯ ಪ್ರತಿಭೆಗಳಿಗೆ ಅವಕಾಶ ನೀಡಬೇಕು. ಉತ್ತರ ಕರ್ನಾಟಕದವರು ಯಾಚಕರಲ್ಲ ಪಾಲುಗಾರರು ಎಂಬ ಜಾಗರೂಕತೆ ಆಡಳಿತ ನಡೆಸುವವರಿಗೆ ತಿಳಿದಷ್ಟೂ ಈ ರಾಜ್ಯದ ಹಿತಕ್ಕೆ ಕ್ಷೇಮಕ್ಕೆ ಒಳ್ಳೆಯದು. ಹೀಗಾದಾಗ ಸಮಗ್ರ ಕರ್ನಾಟಕದ ಸರ್ವಾಂಗೀಣ ಪ್ರಗತಿ ಸಾಧ್ಯ.

**ಡಿ.ಎನ್. ಅಕ್ಕಿ**
ಗೋಗಿ

# ರಾಜಕಾರಣಿಗಳೇ ಸಂಪೂರ್ಣ ಹೊಣೆಗಾರರಲ್ಲ



೧. ಅಖಂಡ ಕರ್ನಾಟಕ ರಾಜ್ಯೋದಯ ನಂತರದ ಈ ೪೧ ವರ್ಷಗಳಲ್ಲಿ ಉತ್ತರ ಕರ್ನಾಟಕ ಪ್ರದೇಶ ಸಮಾಧಾನಕರವಾದ ಅಭಿವೃದ್ಧಿ ಕಾಣದೆ ನಿರ್ಲಕ್ಷ್ಯಕ್ಕೊಳಗಾಗಿರುವದು ನಿಜ.

೨. ಜನಪ್ರತಿನಿಧಿಗಳಿಂದ ಮತ್ತು ಮಂತ್ರಿ ಮಾನ್ಯರಿಂದ. ಜನಾಭಿಪ್ರಾಯವನ್ನು ಕಡೆಗಣಿಸುವದರ ಮೂಲಕ ನಡೆಯಬೇಕಾದ ಅಭಿವೃದ್ಧಿ ಕಾರ್ಯವನ್ನು ಕುಂಠಿತಗೊಳಿಸುವದರ ಮೂಲಕ. ಈ ಮಾತಿಗೆ ಅತ್ಯುತ್ತಮ ನಿದರ್ಶನವೆಂದರೆ ಕಳೆದ ೩೩ ವರ್ಷಗಳಿಂದ ನಿರ್ಮಾಣ ಹಂತದಲ್ಲೇ ನಿಂತ ಕೃಷ್ಣಾ ಮೇಲ್ದಂಡೆ ಯೋಜನೆ.

೩. ಯಾರೇ ಒಬ್ಬರು ವೈಯಕ್ತಿಕವಾಗಿ ಉತ್ತರ ಕರ್ನಾಟಕದ ಅಭಿವೃದ್ಧಿಗೆ ಅಡ್ಡಗಾಲು ಹಾಕಿದ್ದಾರೆಂದು ಹೇಳಲು ಬರುವಂತಿಲ್ಲ. ಆದರೆ ನೀರಾವರಿ ಯೋಜನೆಗಳಿಗೆ ಸಾಕಷ್ಟು ಹಣ ಬಿಡುಗಡೆಯಾಗುತ್ತಿಲ್ಲವೆಂದು ಮಾನ್ಯ ದೇವೇಗೌಡರು ರಾಮಕೃಷ್ಣ ಹೆಗಡೆಯವರ ಸಂಪುಟಕ್ಕೆ ರಾಜೀನಾಮೆ ಕೊಟ್ಟ ಉದಾಹರಣೆ ನಮ್ಮ ಕಣ್ಣ ಮುಂದಿದೆ.

೪. ಪ್ರಾದೇಶಿಕ ಅಸಮತೋಲನಕ್ಕೆ ರಾಜಕಾರಣಿಗಳೇ ಸಂಪೂರ್ಣ ಹೊಣೆಗಾರರೆಂದು ಹೇಳಲಾರೆ. ಇದರಲ್ಲಿ ಜನರ ಪಾಲೂ ಅರ್ಧದಷ್ಟು ಇದ್ದೇ ಇದೆ. ತಮಗೆ ತಮ್ಮ ಊರು ಕೇರಿಗೆ ಬೇಕಾದ ನೀರು-ಶಾಲೆ-ರಸ್ತೆ-ಬಸ್ಸು-ಆಸ್ಪತ್ರೆ ಇತ್ಯಾದಿ ಮೂಲಭೂತ ಸೌಕರ್ಯಗಳ ಸಲುವಾಗಿ ಜನರು ಒಗ್ಗಟ್ಟಾಗಿ ಹೋರಾಡಿ ಕೆಲಸ ಮಾಡಿಸಿಕೊಳ್ಳಬೇಕಾಗುತ್ತದೆ. ಪರಸ್ಪರ ಕಾಲೆಳೆಯುವ ಮತ್ತು ಪರಸ್ಪರ ಹರಿದು ತಿನ್ನುವ ಕ್ಷುದ್ರತೆಯನ್ನು ಮರೆತು ಒಟ್ಟು ಸಮೂಹಕ್ಕಾಗಿ ಕೆಲ ಮಟ್ಟಿಗಾದರೂ ದುಡಿಯಲೇಬೇಕಾದ ಅನಿವಾರ್ಯತೆಯನ್ನು ಮನಗಾಣಲೇಬೇಕಾಗುತ್ತದೆ. ಅಂಥ ಒಂದು ಕಾಣ್ಕೆ ಸಾಮಾನ್ಯರಲ್ಲಿ ಕಡಿಮೆಯಾಗಿರುವುದೂ ಇಂದಿನ ಪರಿಸ್ಥಿತಿಯ ಒಂದು ಮಹತ್ವದ ಕಾರಣವೆಂದು ನನ್ನ ಭಾವನೆ.

೫. ಹಿಂದೆ ಅರುವತ್ತರ ದಶಕದಲ್ಲಿ ವೀರೇಂದ್ರ ಪಾಟೀಲರ ಸರ್ಕಾರವಿದ್ದಾಗ ನಮ್ಮ ಕಾರವಾರ ಜಿಲ್ಲೆಯ ಮಟ್ಟಿಗಂತೂ ಸಾಕಷ್ಟು ಕೆಲಸಗಳಾಗಿವೆ. ಗುಡ್ಡಗಾಡಿನ ನಮ್ಮ ಜಿಲ್ಲೆಯಲ್ಲಿ ಕೆಲ ಮಟ್ಟಿಗೆ ರಸ್ತೆ-ಸೇತುವೆ-ಶಾಲಾ-ಕಾಲೇಜು ಆಸ್ಪತ್ರೆಗಳು ನಿರ್ಮಾಣವಾಗಿವೆ. ಆಗಿನ ಅರ್ಥ ಮಂತ್ರಿ ರಾಮಕೃಷ್ಣ ಹೆಗಡೆಯವರು ಜಿಲ್ಲೆಯ ಉತ್ತರದ ಬಯಲು ಪ್ರದೇಶದ ನೀರಿನ ಬವಣೆ ನೀಗಿಸಿದ್ದಾರೆಂದು ಜನ ಈಗಲೂ ನೆನೆಯುತ್ತಾರೆ. ಆದರೆ ಎಂಬತ್ತರ ದಶಕದಲ್ಲಿ ಅವರೇ ಮುಖ್ಯಮಂತ್ರಿಯಾಗಿದ್ದಾಗ ಅಪಾಯಕಾರಿ ಕೈಗಾ ಅಣು ವಿದ್ಯುತ್ಕೇಂದ್ರವನ್ನು ಜಿಲ್ಲೆಗೆ ತಂದು ಹಾಕಿದರೇ ಹೊರತು ಜನ ಕಲ್ಯಾಣದ ವಿಶೇಷ ಕೆಲಸವನ್ನೇನೂ ಮಾಡಿಲ್ಲವೆಂಬುದು ಸಾಮಾನ್ಯ ಅಭಿಪ್ರಾಯ. ಈ ಮಾತಿಗೆ ಎಸ್.ಆರ್.ಬೊಮ್ಮಾಯಿ - ವೀರೇಂದ್ರ ಪಾಟೀಲರೂ ಹೊರತಾಗಲಾರರು. ಬಹುಶಃ ಇಡೀ ಕರ್ನಾಟಕದ ಹೊಣೆ ಹೊತ್ತಾಗ ತವರಿನ ಬಗ್ಗೆ ಮೋಹ ಸಲ್ಲ ಎಂಬುದನ್ನು ಒಪ್ಪಿಕೊಳ್ಳೋಣ. ಆದರೆ ಜನಸಂಖ್ಯೆಯ ಅಥವಾ ಕ್ಷೇತ್ರ ವಿಸ್ತೀರ್ಣದ ಆಧಾರದ ಮೇಲೆ ಲಭ್ಯ ಸಂಪನ್ಮೂಲಗಳ ಹಂಚಿಕೆಯಾಗಬೇಕಾದದ್ದು ಸರ್ವಸಮ್ಮತ ನ್ಯಾಯ. ಇಂಥ ನ್ಯಾಯ ಉತ್ತರ ಕರ್ನಾಟಕಕ್ಕೆ ಸಿಕ್ಕಿಲ್ಲವೆಂಬುದನ್ನು ಸರ್ಕಾರಿ ಅಂಕಿ ಅಂಶಗಳಿಂದಲೇ ಎಚ್.ಕೆ. ಪಾಟೀಲರು ಸಿದ್ಧಪಡಿಸಿ ತೋರಿಸಿದ್ದಾರಲ್ಲ! ಅಂದಾಗ ನಮ್ಮ ಮಾಜಿ ಮುಖ್ಯಮಂತ್ರಿಗಳು ತಮ್ಮ ಕರ್ತವ್ಯದಲ್ಲಿ ಎಡವಿದ್ದಾರೆನ್ನದೇ ಬೇರೆ ವಿಧಿಯಿಲ್ಲ.

೬. ಮಾನ್ಯ ಜೆ.ಎಚ್.ಪಟೇಲರು ಜನಾಭಿಪ್ರಾಯಕ್ಕೆ ಮಣಿದು ಮೊನ್ನೆ ಯುಗಾದಿ ದಿನ ಏಳು ಹೊಸ ಜಿಲ್ಲೆಗಳ ಉದಯವನ್ನು ಘೋಷಿಸಿದ್ದಾರೆ. ಇನ್ನೆರಡು ಜಿಲ್ಲೆಗಳೂ ಉದಯವಾಗಲಿವೆಯಂತೆ. ಈ ಒಂದು ಉಪಕ್ರಮದಿಂದ ಉತ್ತರ ಕರ್ನಾಟಕದ ಒಣ ಪ್ರದೇಶಗಳು ಅಭಿವೃದ್ಧಿಯ ಹಸಿರು ಕಾಣಲು ಸಾಧ್ಯವಾಗಬಹುದು. ಕಾದು ನೋಡಬೇಕು. ನೈಋತ್ಯ ರೇಲ್ವೆ ವಲಯವನ್ನು ಬೆಂಗಳೂರಿಗೆ ಕೊಟ್ಟ ದೇವೇಗೌಡರ ಸರ್ಕಾರ ಬಿದ್ದು ಹೋಯಿತು. ಮುಂದಿನವರು ಏನು ಮಾಡುತ್ತಾರೊ ನೋಡಬೇಕು. ಪಾಟೀಲ ಪುಟ್ಟಪ್ಪ ಮತ್ತು ಹೆಚ್.ಕೆ.ಪಾಟೀಲರ ನಿಲುವುಗಳನ್ನು ಕುತೂಹಲದಿಂದ ಮತ್ತು ತಟಸ್ಥ ಮನೋಭಾವದಿಂದ ಅರ್ಥೈಸಿಕೊಳ್ಳುತ್ತಿದ್ದೇನೆ.

೭. ನಮ್ಮ ಅಖಂಡ ಕರ್ನಾಟಕ ಅಖಂಡವಾಗಿಯೇ ಇರಬೇಕೆಂಬುದು ನನ್ನ ಖಂಡಿತ ಅಭಿಪ್ರಾಯ. ಪ್ರಾದೇಶಿಕ ಅಸಮತೋಲನ ನೀಗಿಸಲು ಜನರು ಮತ್ತು ಜನ ಪ್ರತಿನಿಧಿಗಳು ಪ್ರಾಮಾಣಿಕವಾಗಿ ಶ್ರಮಿಸಬೇಕು. ಬಯಲು ಸೀಮೆಯ ಜನರ ನೀರಿನ ಬವಣೆ ನೀಗುವಂತೆ, ಬದುಕು ಸಹನೀಯವಾಗುವಂತೆ ನೀರಾವರಿ ಯೋಜನೆಗಳು ಶೀಘ್ರಗೊಳ್ಳುವಂತೆ ಜನರು, ಜನಪ್ರತಿನಿಧಿಗಳು ಸರ್ಕಾರದ ಮೇಲೆ ಒತ್ತಡ ತರಬೇಕು. ನಮ್ಮ ಕಾರವಾರ ಜಿಲ್ಲೆಯ ಮೇಲೆ ಬಂದೆರಗುತ್ತಿರುವ ಕೈಗಾ ಯೋಜನೆ-ಬೇಡ್ತಿ-ಅಘನಾಶಿನಿ ಜಲ ವಿದ್ಯುತ್ಯೋಜನೆಯಂಥ ಅಪಾಯಗಳಿಂದ ಜಿಲ್ಲೆಯನ್ನುಳಿಸಲು ಜಿಲ್ಲೆಯ ಪ್ರತಿಯೊಬ್ಬ ವ್ಯಕ್ತಿಯೂ ಪಣ ತೊಡಬೇಕು. ಗ್ರಾಮ ಪಂಚಾಯ್ತಿ ಹಂತದಿಂದಲೇ ಲೋಕಹಿತ ದೃಷ್ಟಿಯ ಜನಾಭಿಪ್ರಾಯವನ್ನು ರೂಪಿಸಬೇಕು.

**ಭಾಗೀರಥಿ ಹೆಗಡೆ**
ಶಿರಸಿ.

## ಹಣ - ಗುಣ

ಆತ
ಹಣವಂತ
ಗುಣದ ಬಗ್ಗೆ ಗೊತ್ತಿಲ್ಲ;
ಈತ
ಗುಣವಂತ
ಹಣವಿದೆಯೆಂಧು ಗತ್ತಿಲ್ಲ!

**- ಗೋಪಾಲಕೃಷ್ಣ ವಂಡ್ಸೆ**

# ಹೀಗೇ ಮುಂದುವರಿದರೆ ಪ್ರತ್ಯೇಕ ರಾಜ್ಯ ಅನಿವಾರ್ಯ



೧. ಉತ್ತರ ಕರ್ನಾಟಕ ನಿರ್ಲಕ್ಷ್ಯಕ್ಕೊಳಗಾಗಿದೆ ಎಂಬುದರಲ್ಲಿ ನನಗೆ ಯಾವ ಅನುಮಾನವೂ ಇಲ್ಲ. ಹೈದ್ರಾಬಾದ್ ಕರ್ನಾಟಕ ಅಭಿವೃದ್ಧಿ ಮಂಡಳಿ ಬಂದರೂ - ಇಲ್ಲಿ ಪ್ರಗತಿಯಾಗದಿರುವುದು, ಈ ಭಾಗ ನಿರ್ಲಕ್ಷ್ಯಕ್ಕೊಳಗಾಗಿದೆ ಎಂಬುದನ್ನು ಎತ್ತಿ ತೋರಿಸುತ್ತಿದೆ. ಬೀದರದ ಕಾರಂಜಾ ಯೋಜನೆ, ಕೃಷ್ಣಾ ಯೋಜನೆ, ಕೊಪ್ಪಳದ ಹಿರೇಹಳ್ಳ ಯೋಜನೆ, ಮಸ್ಕಿ ನಾಲಾ ಯೋಜನೆ - ಮುಂತಾದ ನೀರಾವರಿ ಯೋಜನೆಗಳು ನಿರ್ಲಕ್ಷ್ಯಕ್ಕೊಳಗಾದ್ದರಿಂದ ಇನ್ನೂ ಅಪೂರ್ಣ ಸ್ಥಿತಿಯಲ್ಲಿವೆ. ''ಉತ್ತರ ಕರ್ನಾಟಕದ ರಸ್ತೆಗಳಂಥ ಕಳಪೆ ರಸ್ತೆಗಳು ನಮ್ಮಲ್ಲಿದ್ದರೆ ನಮ್ಮ ಜನ ಬಂಡೇಳುತ್ತಿದ್ದರು'' ಎಂದು ಸರಕಾರದಲ್ಲಿರುವವರೊಬ್ಬರು ಉದ್ಗಾರ ತೆಗೆದಿದ್ದಾರೆ. ಉತ್ತರ ಕರ್ನಾಟಕ ನಿರ್ಲಕ್ಷ್ಯಕ್ಕೊಳಗಾಗಿದೆ ಎಂಬುದು ಸತ್ಯಕ್ಕಿಂತಲೂ ಸತ್ಯವಾದ ಸಾರ್ವತ್ರಿಕವಾದ ವಿಷಯ.

೨. ಸರಕಾರದಿಂದ ಮತ್ತು ಈ ಭಾಗದ ಕೆಲಸ ಮಾಡದ ಶಾಸಕರಿಂದ ಉತ್ತರ ಕರ್ನಾಟಕ ನಿರ್ಲಕ್ಷ್ಯಕ್ಕೊಳಗಾಗಿದೆ. ಮಂಡಳಿ, ನಿಗಮ, ಅಕಾಡಮಿಗಳಲ್ಲಿ, ಪಠ್ಯಪುಸ್ತಕ ಮಂಡಳಿಗಳಲ್ಲಿ, ಟಿ.ವಿ. ರೇಡಿಯೋಗಳಲ್ಲಿ ನಮ್ಮ ಜನರಿಗೆ ಪ್ರಾತಿನಿಧ್ಯವೇ ಇಲ್ಲ. ಉತ್ತರ ಕರ್ನಾಟಕದ ಅಭಿವೃದ್ಧಿಗೆ ಹಣದ ಬಿಡುಗಡೆ ಕಡಿಮೆಯಿದೆ. ಖನಿಜ, ಉತ್ಪಾದನೆ, ಜನಪದ, ಸಾಹಿತ್ಯ ಸಂಗೀತಗಳ ಬೀಡಾಗಿದ್ದರೂ ರಾಜಧಾನಿ ನಮಗೆ ದೂರವಾದ್ದರಿಂದ ನಮ್ಮನ್ನು ಉಪೇಕ್ಷಿಸಲಾಗಿದೆ. ಹೈದ್ರಾಬಾದ್ ಕರ್ನಾಟಕದವರು ಆಲಸಿಗಳು, ಸಾಮರ್ಥ್ಯವಿರಲಾರದೆ ನಿಗಮ, ಮಂಡಳಿ, ವಿವಿಧ ಅಕಾಡಮಿಗಳಲ್ಲಿ ಪ್ರಾತಿನಿಧ್ಯ ಬೇಡುತ್ತಾರೆಂದು ಹಾ.ಮಾ. ನಾಯಕರಂಥವರು ಹೇಳುತ್ತಾರೆ.

೩. ಉತ್ತರ ಕರ್ನಾಟಕ ಅಭಿವೃದ್ಧಿಯಾಗದಂತೆ ಹಳೆ ಮೈಸೂರಿನ ರಾಜಕಾರಣಿಗಳು, ಉನ್ನತ ಅಧಿಕಾರಿಗಳು ಅಡ್ಡಗಾಲು ಹಾಕುತ್ತಿದ್ದಾರೆ. ನಮ್ಮ ಜನರಲ್ಲಿ ಇದೀಗ ಈ ಬಗ್ಗೆ ಜಾಗೃತಿ ಕಾಣಿಸಿಕೊಂಡಿದೆ. ಆದರೆ ಈ ಜಾಗೃತಿ ನಮ್ಮ ಶಾಸಕರಲ್ಲಿ ಕಾಣಿಸಿಕೊಂಡಾಗ ನಮಗೆ ಅಡ್ಡಗಾಲು ಹಾಕುವವರನ್ನು ತೊಡರುಗಾಲು ಹಾಕಿ ಕೆಡವಲು ಬರುತ್ತದೆ.

೪. ಪ್ರಾದೇಶಿಕ ಅಸಮತೋಲನ ಉಂಟಾಗುವಲ್ಲಿ ಜನರ ಮತ್ತು ರಾಜಕಾರಣಿಗಳ ಪಾತ್ರವಿದೆ. ತಮಗೆ ಅನ್ಯಾಯವುಂಟಾಗುತ್ತಿದೆಯೆಂದು ಉತ್ತರ ಕರ್ನಾಟಕದ ಜನ ಇದೀಗ ಎಚ್ಚೆತ್ತಿದ್ದಾರೆ. ಅಲ್ಲೊಬ್ಬ, ಇಲ್ಲೊಬ್ಬ ನಾಯಕ ಎಚ್ಚರಗೊಂಡಿದ್ದಾರೆ. ಇಸ್ಪೇಟ, ರಂಡೆಬಾಜಿ, ಕುಡಿತಗಳಲ್ಲಿ ಕಾಲಹರಣ ಮಾಡಿದ ಶಾಸಕರೇ ಬಹುಪಾಲು ಹೊಣೆಗಾರರು. ಇಂಥ ಪ್ರತಿನಿಧಿಗಳನ್ನು ಆರಿಸಿ ಕಳಿಸಿ ಪ್ರಶ್ನಿಸದವರೂ ಹೊಣೆಗಾರರ ಪಟ್ಟಿಯಲ್ಲಿ ಬರುತ್ತಾರೆ.

೫. ಉತ್ತರ ಕರ್ನಾಟಕದ ಹಲವು ಮುಖ್ಯಮಂತ್ರಿಗಳು ರಾಜ್ಯವನ್ನು ಆಳಿದರೂ ಈ ಪ್ರದೇಶದ ಅಭಿವೃದ್ಧಿಗೆ ಕೊಡುಗೆ ನೀಡಿಲ್ಲ. ಸಮಗ್ರತೆಯ ಹೆಸರಿನಲ್ಲಿ ಅವರು ಈ ಭಾಗಕ್ಕೆ ಒತ್ತು ಕೊಟ್ಟಿಲ್ಲ. ಈಗಿನಂತೆ ಆಗ ಪ್ರಾದೇಶಿಕತೆಯ ಕೂಗಿರಲಿಲ್ಲ. ಆಗಿನ ನಮ್ಮ ಉತ್ತರ ಕರ್ನಾಟಕದಿಂದ ಆಗಿ ಹೋದ ಮುಖ್ಯಮಂತ್ರಿಗಳಿಗೆ ಪ್ರಾದೇಶಿಕ ಪ್ರಜ್ಞೆಯಿದ್ದಿದ್ದರೆ ನಮ್ಮೆಲ್ಲ ನೀರಾವರಿ ಯೋಜನೆಗಳು ಪೂರ್ಣಗೊಂಡಿರುತ್ತಿದ್ದವು. ಶಾಲೆ, ರಸ್ತೆ, ನೀರಿನಂಥ ಪ್ರಾಥಮಿಕ ಸೌಲಭ್ಯಗಳಿಂದ ಇನ್ನೂ ದೂರ ಇರುವ ಉತ್ತರ ಕರ್ನಾಟಕದ ಸ್ಥಿತಿ ಗಮನಿಸಿದರೆ ಮುಖ್ಯಮಂತ್ರಿಗಳು ಮುಗ್ಗರಿಸಿ ಬಿದ್ದುದಕ್ಕೆ ಇದಕ್ಕಿಂತ ಇನ್ನೆಂಥ ಸಾಕ್ಷಿ ಬೇಕು?

೬. ಪಾಟೀಲ ಪುಟ್ಟಪ್ಪ, ಹೆಚ್.ಕೆ.ಪಾಟೀಲ ಉತ್ತರ ಕರ್ನಾಟಕಕ್ಕೆ ಅನ್ಯಾಯವಾದದ್ದನ್ನು ಅಂಕಿ ಅಂಶಗಳ ಮೂಲಕ ಚೆನ್ನಾಗಿ ಗುರುತಿಸಿದ್ದಾರೆ. ಪ್ರಾದೇಶಿಕ ಅಸಮತೋಲನವನ್ನು ಸರಿಪಡಿಸದಿದ್ದರೆ ಉತ್ತರ ಕರ್ನಾಟಕ ರಾಜ್ಯ ಅನಿವಾರ್ಯವಾದೀತು ಎಂದು ಎಚ್ಚರಿಸಿದ್ದಾರೆ. ಕರ್ನಾಟಕದ ಏಕೀಕರಣಕ್ಕೆ ಪ್ರಧಾನವಾಗಿ ದುಡಿದವರು ಉತ್ತರ ಕರ್ನಾಟಕದವರು. ಕರ್ನಾಟಕವನ್ನು ಒಡೆಯುವ ಮನಸ್ಸು ಪಾಟೀಲ ಪುಟ್ಟಪ್ಪನವರಲ್ಲಿಯಾಗಲಿ, ಬೇರೆ ಯಾರಲ್ಲಿಯಾಗಲಿ ಇಲ್ಲ. ಪ್ರಾದೇಶಿಕ ಅಸಮತೋಲನ ಸರಿಪಡಿಸಲು ಉತ್ತರ ಕರ್ನಾಟಕ ರಾಜ್ಯ ನಿರ್ಮಿಸುತ್ತೇವೆಂದು ಬೆದರಿಕೆ ಹಾಕುವದು ಅನಿವಾರ್ಯವಾಗಿದೆ. ಅಂಥ ಬೆದರಿಕೆಯನ್ನಷ್ಟೇ ಅವರು ಹಾಕಿದ್ದು.

ದೇವೇಗೌಡ, ಜೆ.ಎಚ್.ಪಟೇಲ, ಬಾಪೂ ಹೆದ್ದೂರ ಶೆಟ್ಟಿ ಮೂಲಕ ಪ್ರಾದೇಶಿಕ ಅಸಮತೆ ಇಲ್ಲವೆಂಬ ಉತ್ತರ ಕೊಡಿಸಿದ್ದರೂ ಜನರು ಅದನ್ನು ನಂಬಿಲ್ಲ. ಪ್ರಾದೇಶಿಕ ಅಸಮತೋಲನ ಸರಿಪಡಿಸದೆ ನಾಟಕವಾಡಿದರೆ ಭಾವನಾತ್ಮಕ ನೆಲೆಯನ್ನು ದಾಟಿ ಉತ್ತರ ಕರ್ನಾಟಕ ರಾಜ್ಯ ನಿರ್ಮಾಣಕ್ಕೆ ಜನ ಸನ್ನದ್ಧರಾಗುವ ಪರಿಸ್ಥಿತಿ ಉತ್ತರ ಕರ್ನಾಟಕದಲ್ಲಿದೆ.

೭. ಪ್ರಾದೇಶಿಕ ಅಸಮತೋಲನ ನೀಗಿಸಲು ಹೊರಡುವ ಪೂರ್ವದಲ್ಲಿ ಅಸಮತೋಲನ ಇರುವದನ್ನು ಸರಕಾರ ಒಪ್ಪಿಕೊಳ್ಳಬೇಕು. ಅದು ಒಪ್ಪಿಕೊಂಡು ಇಲ್ಲಿಯ ನೀರಾವರಿ ಯೋಜನೆಗಳನ್ನು ಮೊದಲು ಮುಗಿಸಬೇಕು. ಇಲ್ಲಿಯವರೆಗೆ ಪಕ್ಷಪಾತದಿಂದ ನಮ್ಮ ಜಿಲ್ಲೆಗಳಿಗೆ ಕಡಿಮೆ ಹಣ ಬಿಡುಗಡೆ ಮಾಡಲಾಗಿದೆ. ಅದು ಬದಲಾಗಬೇಕು. ನಿಗಮ, ಮಂಡಳಿ, ವಿವಿಧ ಅಕಾಡಮಿಗಳಲ್ಲಿ ಪ್ರಾತಿನಿಧ್ಯ ನೀಡಬೇಕು. ಅರ್ಧದಷ್ಟು ಸಂಖ್ಯೆಯ ನಿಗಮ, ಮಂಡಳಿ, ಅಕಾಡಮಿ, ವಿಶ್ವವಿದ್ಯಾಲಯಗಳಲ್ಲಿ ಅಧ್ಯಕ್ಷತೆಯ ಸ್ಥಾನ ಉತ್ತರ ಕರ್ನಾಟಕದವರಿಗೆ ಸಿಕ್ಕರೆ ಉತ್ತರ ಕರ್ನಾಟಕ ರಾಜ್ಯ ರಚನೆಯ ಅಗತ್ಯವಿಲ್ಲ. ಹೀಗೆಯೇ ಅಸಮತೋಲನ ಮುಂದುವರಿದರೆ ಉತ್ತರ ಕರ್ನಾಟಕ ರಾಜ್ಯ ನಿರ್ಮಾಣ ಅನಿವಾರ್ಯವಾದೀತು.

**ಅಲ್ಲಮಪ್ರಭು ಬೆಟ್ಟದೂರು**
ಕೊಪ್ಪಳ



# ಹಂಪಿ ಕನ್ನಡ ವಿಶ್ವವಿದ್ಯಾಲಯ : ಒಳಹೊರಗು

ಬಿಸಿಲ ಬೇಗೆಗೆ ಹೆಸರಾದ ಹೈದ್ರಾಬಾದ್ ಕರ್ನಾಟಕದ ಬಳ್ಳಾರಿ ಜಿಲ್ಲೆಗೆ ತುಂಗಭದ್ರೆಯ ತಂಪಿನ ಬಂಗಾರದ ಎಳೆಯಿದೆ. ಬೃಹತ್ ಬಂಡೆಗಳ ಸಾಲುಗುಡ್ಡಗಳ ಆಯಕಟ್ಟಿನ ಸ್ಥಳದಲ್ಲಿ ಹಿಂದೆ ವಿಜಯನಗರ ಸಾಮ್ರಾಜ್ಯ ಹುಟ್ಟಿತ್ತು. ಕರ್ನಾಟಕದ ಚರಿತ್ರೆಯ ನಿರ್ಣಾಯಕ ಘಟ್ಟಗಳಲ್ಲಿ ಉದಿಸಿದ ಸಾಮ್ರಾಜ್ಯದ ಸಾಧನೆಯನ್ನು ಬೂರ್ಷ್ವಾ ಇತಿಹಾಸಕಾರರು ಮುಕ್ತಕಂಠದಲ್ಲಿ ಹೊಗಳಿದ್ದಾರೆ. ಇಂದು ಅದರ ಅಳಿದುಳಿದ ಸ್ಮಾರಕಗಳು ಪ್ರವಾಸಿಗಳ ತಾತ್ಕಾಲಿಕ ನೋಟ-ನಿಟ್ಟುಸಿರುಗಳಿಗೆ ಸಿಕ್ಕು ವಿಷಾದದ ಛಾಯೆ ಹೊತ್ತು ನಿಂತಿವೆ.

ವಿಪರ್ಯಾಸವೆಂಬಂತೆ ತೊಂಬತ್ತರ ದಶಕದಲ್ಲಿ ಈ ಪ್ರದೇಶ 'ಸಾಂಸ್ಕೃತಿಕ ರಾಜಕಾರಣ'ಕ್ಕೆ ಪಕ್ಕಾಗುತ್ತಿರುವುದು ಯಾವುದರ ಸಂಕೇತ?

ಬೆಳಗಾವಿ, ಧಾರವಾಡ ಜಿಲ್ಲೆಯ ಹಾಲು ಕುಡಿದು ಬೆಳೆದು, ಬಳ್ಳಾರಿ ಜಿಲ್ಲೆಯ ಅನ್ನ ಉಣ್ಣಲು ಎಪ್ಪತ್ತರ ದಶಕದಲ್ಲಿ ಹೊಸಪೇಟೆಗೆ ಕಾಲಿಟ್ಟೆ. ರೈಲ್ವೆ ಸ್ಟೇಶನ್ನಿನ ದಾರಿಯ ಹೊಟೆಲೊಂದರಲ್ಲಿ ಹಸಿದ ಹೊಟ್ಟೆಗೆ 'ಭಜಿ' (ಪಕೋಡಾ) ಹಾಕಿದ್ದೆ. ಅದು ನಿಜವಾಗಿಯೂ ಹಳಸಿತ್ತು. ಒಡಮುರಿದೇಳುತ್ತಿದ್ದ ಊರಿಗೆ ಹಳೆಯ ಕಾಲದ ರೋಗ ಅಂಟಿತ್ತು. ಮೂರಂಗಡಿಯ ಹತ್ತಿರದ ಅಂದಿನ ಗಟಾರದ ವಾಸನೆ ಇನ್ನೂ ಮೂಗಿನಲ್ಲಿದೆ. ಪುಕ್ಕಟೆ ಕೊಟ್ಟರೂ ತಗೊಳ್ಳುವವರಿಲ್ಲದ ಅಂದಿನ ನೆಲ ಇಂದು ಭಿನ್ನವಾಗಿದೆ. ಒಮ್ಮೆಲೆ ಇಂಥ 'ಲೀಪ್' ಹೇಗೆ ಸಿಕ್ಕಿತೆನ್ನುತ್ತೀರಿ?

ಒಂದೆಡೆ ತುಂಗೆಯ ಉಸಿರು ಸುತ್ತಮುತ್ತಲ ನೆಲದೊಡಲ ನಾಡಿಯಲ್ಲಿ ಭತ್ತ, ಕಬ್ಬು,ಬಾಳೆ ಎಳನೀರಾಗಿ ಭೂಮಾಲಿಕರ ಕಬ್ಬಿಣದ ಕಣಜ ತುಂಬುತ್ತಿದೆ. ಹೇಗೆ? ಬಡ ದಲಿತ ಹೆಂಗಸರು ಹೆಗಲಿಗೆ ಕುರಿಪಿ ಇಳಿಬಿಟ್ಟು ರೊಟ್ಟಿ ತಿನ್ನುತ್ತ ಸಸಿ ನೆಡಲೋ ಕಳೆ ತಗೆಯಲೋ ದಿನ ಬೆಳಿಗ್ಗೆ ಕೆಂಪು ಕೆಸರು ತುಳಿಯುವ ಮೂಲಕ.ಇನ್ನೊಂದೆಡೆ ಜಪಾನುಗಳಿಗೆ ರಫ್ತಾಗುವ ಜಗತ್ಪಸಿದ್ಧ ಕಬ್ಬಿಣದ ಅದಿರ ಗುಡ್ಡದಲ್ಲಿ ಜೀವ ತೇಯುವ ಕೆಂಪು ಕಾರ್ಮಿಕರು. ಈ ದಂಧೆಯಿಂದ ಕೆಲ ಮಾಲಿಕರು ಕೋಟ್ಯಾಧೀಶರಾಗಿದ್ದಾರೆ.

'ಲೀಪ್' ಎಂದೆ. ಏಕೆ ಗೊತ್ತೇ? ಈಚೆಗೆ ಜಿಂದಲ್, ಕಿರ್ಲೋಸ್ಕರ್ ಮೊದಲಾದ ಘಟಾನುಘಟಿಗಳು ಸೊಂಡೂರು ಮಹಾರಾಜನ ಫ್ಯಾಕ್ಟರಿಗಳನ್ನು ಜಕ್ಕಿಸಿ ಎಲ್ಲೆಂದರಲ್ಲಿ ಕಾಲಿಟ್ಟಿವೆ. ಬಳ್ಳಾರಿ, ಹೊಸಪೇಟೆ, ಕೊಪ್ಪಳ ಮಾರ್ಗದುದ್ದಕ್ಕೂ 'ಕೈಗಾರಿಕಾ ಪ್ರದೇಶ' ಇಂಚಿಂಚನ್ನೂ ಶ್ರೀಮಂತಗೊಳಿಸುತ್ತ ತಲೆ ಎತ್ತಿದೆ.

ಕನ್ನಡ ಭಾಷೆ ಮತ್ತು ಸಂಸ್ಕೃತಿಯ ಸರ್ವಾಭಿವೃದ್ಧಿಯ ಕೇಂದ್ರವಾಗಬೇಕಿರುವ ಕನ್ನಡ ವಿಶ್ವವಿದ್ಯಾಲಯದ ಚಿತ್ರ ಬಿಡಿಸುವುದಕ್ಕೆ ಈ ಹಿನ್ನಲೆಯ ಬಣ್ಣ ತೀರ ಅಗತ್ಯ.

ಈ ಲೇಖನದಲ್ಲಿ ಎರಡು ಭಾಗಗಳಿವೆ. ೧೯೯೩-೯೪ರಲ್ಲಿ ಎರವಲು ಸೇವೆಗೆಂದು ಕನ್ನಡ ವಿ.ವಿ.ದಲ್ಲಿರುವ ಅವಕಾಶ ಒದಗಿತ್ತು. ಆ ಸಂದರ್ಭದ ನನ್ನ ಅನುಭವಗಳು 'ಖಾಸಗಿ' ಆಗಿರಲಾರವು. ಎರಡನೆಯ ಭಾಗದಲ್ಲಿ ಕನ್ನಡ ವಿಶ್ವವಿದ್ಯಾಲಯದ ಆಶಯಗಳಿಗೆ ಅನುಗುಣವಾಗಿ ಕೆಲಸ ಕಾರ್ಯಗಳು ನಡೆಯುತ್ತಿವೆಯೆ ಎಂಬ ಸಮೀಕ್ಷೆ ಇದೆ. ಈ ಬರಹದಲ್ಲಿ ತಪ್ಪುಗಳಿದ್ದರೆ ತಿದ್ದಿಕೊಳ್ಳಲು ಬದ್ಧನಿದ್ದೇನೆ.

○ ಎಸ್.ಎಸ್.ಹಿರೇಮಠ

ಕಮಲಾಪುರದಾಚೆಯ ಬೋಳುಗುಡ್ಡದಲ್ಲಿ 'ಇಂದ್ರನಮರಾವತಿ'ಯಂತೆ 'ಕನ್ನಡ ವಿ.ವಿ.ತಲೆ ಎತ್ತಿದೆ. ಕೆರೆದಂಡೆಯ ಧೂಳುದಾರಿಗುಂಟ ವಿಶ್ವವಿದ್ಯಾಲಯಕ್ಕೆ ಬರುತ್ತೀರಿ. ಎಡಬಲಗಳಲ್ಲಿ ಹೂ, ಗಿಡ. ಎದುರಿಗೆ ದೈತ್ಯಾಕಾರದ ಕಟ್ಟಡ. ಅದು ಗ್ರಂಥಾಲಯ. ಅದರಾಚೆ ನೂರಾರು ಎಕರೆ ಗುಡ್ಡದಲ್ಲಿ 'ವಿದ್ಯೆಯನ್ನು ನಿರ್ಮಿಸುವ' ಡಾ.ಕಂಬಾರರ ಕನಸಿಗೆ ಅನುಗುಣವಾಗಿ, 'ಹಳೆಯ ಕಾಲದ ತಿಳಿವಳಿಕೆ'ಯ ಆಧಾರ, ಹುಟ್ಟಿರುವ ಈ ಸ್ಮಾರಕಗಳು 'ಕಾಯಕದ ಮನೆ', 'ನವರಂಗ', 'ಚಾವಡಿ' 'ತ್ರಿಪದಿ', 'ಗಿರಿಸೀಮೆ'... ಇಷ್ಟೇ ಹೇಳಿದರೆ ತಪ್ಪಾದೀತು. 'ಪಶ್ಚಿಮದಿಂದ ಹರಿದು ಬರುವು ಜ್ಞಾನವೂ' ಸಂಧಿಸಿ 'ಬೆಳಕು' ಹುಟ್ಟಬೇಕಿದೆ. 'ಎಲ್ಲ ಬಗೆಯ ಸಂಶೋಧನೆ'ಗೆ ಅವಕಾಶವಿದೆ....

ಕ.ವಿ.ವಿ. ಕಡೆ ತಲೆಹಾಕಿ ಮಲಗಿರದ ನನಗೆ ಇಂಥ ಅವಕಾಶದ ಎಳೆಯೊಂದು ಸಿಕ್ಕಿತು; ೧೯೯೩ ರಲ್ಲಿ. ಬಂಡಾಯದ ಹಿರಿಯ ಸಂಗಾತಿಯೊಬ್ಬರು ಕೊಟ್ಟ ಚೀಟಿ ಹಿಡಿದುಕೊಂಡು ಕಂಬಾರರ 'ದರ್ಬಾರು' ಪ್ರವೇಶಿಸಿದ್ದೆ. ಆಗಿನ್ನೂ ಕಂಬಾರರು 'ಎಳೆಯ' ಕುಲಪತಿ. ವಿರುಪಾಕ್ಷ ದೇವಾಲಯದೆದುರು ಬೀದಿಯ ತುದಿಗಿರುವ ಮಂಟಪಗಳಲ್ಲಿತ್ತು ವಿ.ವಿ. ಚಪ್ಪಲಿ ಸವೆದರೂ ಒಂದು ವರ್ಷದ ಎರವಲು ಸೇವೆಯ (ಡೆಪ್ಯುಟೇಶನ್) ಭಾಗ್ಯ ಸಿಕ್ಕಿತು. ಆಶ್ವಾಸನೆ ಇನ್ನೂ ದೊಡ್ಡದು: 'ವರ್ಷದೊಳಗೆ ಪೂರ್ಣಾವಧಿ ಸೇವೆಗೆ ಐಕ್ಯ (ಅಬ್ಸಾರ್ಬ್) ಮಾಡಿಕೊಳ್ಳುತ್ತೇವೆ'.

ನಾನು ಇವರ ಬಲೆಗೆ ಬಿದ್ದುದಾದರೂ ಹೇಗೆನ್ನುತ್ತೀರಿ?

ಮುದೇನೂರು ಸಂಗಣ್ಣನವರು ನಾಡಿನ

ಖ್ಯಾತರನ್ನು ತಮ್ಮ ಮನೆಗೆ ಊಟಕ್ಕೆ ಆಹ್ವಾನಿಸಿದ್ದರು. ಕಂಬಾರರೂ ಬಂದು ಕವನ ಓದಿದ್ದರು. ಹರಪನಹಳ್ಳಿಯ ಐಬಿಯಲ್ಲಿ 'ಕನ್ನಡ ವಿಶ್ವವಿದ್ಯಾಲಯ ಹೇಗಿರಬೇಕೆನ್ನುತ್ತೀರಿ?' ಎಂದು ಕೇಳಿದ್ದರು. ಸಮತಾ ಪ್ರಕಾಶನ ದಿಂದ 'ಹಂಪಿ ಕನ್ನಡ ವಿಶ್ವವಿದ್ಯಾಲಯ ಮತ್ತು ಕನ್ನಡ ಸಂಸ್ಕೃತಿ' ಎಂಬ ಪುಸ್ತಿಕೆಯನ್ನು ಅಚ್ಚಿಸಿದ್ದೆ. 'ಬಹಳ ಸಲ ಓದಿದೆ, ಅರ್ಥವಾಗುತ್ತಿಲ್ಲ' ಎಂದರು. ನಿರ್ಭಿಡೆಯ ಹತ್ತಾರು ಮಾತಾಡಿದ್ದೆ. ಆಗಿನ್ನೂ ಅವರು ಆಡಳಿತಾಧಿಕಾರಿ. ಮನೆಗೆ ಆಹ್ವಾನಿಸಿದೆ. ಚಪಾತಿ, ಪಚಡಿ, ಪಲ್ಲೆ. ಆಗಾಗ ಅದನ್ನು ಯಾಕೋ ನೆನೆಸಿಕೊಳ್ಳುತ್ತಿದ್ದರು.

'ಬಂಡಾಯ ಪುಸ್ತಕ ಜಾಥಾ' ಯೋಜಿಸಿ ರಾಜ್ಯವನ್ನೆಲ್ಲಸುತ್ತಿದೆ. ಅದು ಬೇರೆ ಕಥೆ. ಮುಕ್ತಾಯ ಸಮಾರಂಭಕ್ಕೆ ಗೆಳೆಯರು ಕಂಬಾರ ರನ್ನು ಆಹ್ವಾನಿಸಿದರು. ಆಗ ಅವರು ಕುಲಪತಿ. ಖಾಸಗಿ ಮಾತುಕತೆಯಲ್ಲಿ 'ಡಂಬಾಯ' ಅನ್ನುವವರು ವೇದಿಕೆಯಲ್ಲಿ ಸರಿಯಾಗೇ ಉಚ್ಚರಿಸಿದರೆನ್ನಿ. ಜಾಥಾದ ನನ್ನ ಸಾಹಸ ಕೇಳಿ ತಮ್ಮ ವಿ.ವಿ.ಯ ಪ್ರಸಾರಾಂಗದ ನಿರ್ದೇಶಕ ಸ್ಥಾನಕ್ಕೆ ಕೂಡಿಹಾಕಲು ಯೋಜಿಸಿದ್ದರಂತೆ. ಆದರೆ ಆದುದೇನು?

ಪ್ರಸಾರಾಂಗದಲ್ಲಿ ಸಜ್ಜನ ಚಿ.ಶ್ರೀನಿವಾಸ ರಾಜು ಅವರ ಜತೆ ಕೆಲವು ತಿಂಗಳು ಕಳೆದೆ-ಮಳೆಗಾಲದ ಹಾವು, ಏಡಿಗಳನ್ನು ನೋಡುತ್ತಾ, ಒಳಗಿನ ಚಟುವಟಿಕೆಗಳಿಗೆ ಬೆರಗುಗಣ್ಣು, ಕಿವಿಯಾಗುತ್ತ. ಪ್ರತಿದಿನ ಕಂಬಾರರು ಪ್ರಾಧ್ಯಾಪಕ, ಪ್ರವಾಚಕರ ಸಭೆ ನಡೆಸುತ್ತಿದ್ದರು. ತಮಾಷೆಗೆ ಗೆಳೆಯರು ಅದಕ್ಕೆ 'ಒಡ್ಡೋಲಗ' ಎನ್ನುತ್ತಿದ್ದರು. ಮುಂದೆ ಅದಕ್ಕೆ ಅದೇ ಗತಿ ಬಂತು ಬಿಡಿ. ಹರಟೆಗೆ ಸಿಕ್ಕದ ವಿಷಯವಿರಲಿಲ್ಲ. ಕಿ.ರಂ.ನಾಗರಾಜ, ಕೆ.ವಿ.ನಾರಾಯಣ, ಬಿಳಿಮಲೆ, ರಹಮತ್, ಕುಂ.ವೀ., ಹಿ.ಚಿ, ಓ.ಎಲ್.ಎನ್., ಮಲ್ಲೇಪುರಂ; ಎಚ್.ಎಸ್.ಆರ್, ಕರಿಗೌಡ, ಮುಂತಾಗಿ ಕೈಗೆ ಸಿಕ್ಕ ವಿದ್ವಾಂಸರನ್ನೆಲ್ಲ ಎಳೆದು ತಂದಿದ್ದರು; 'ಸಾಹೇಬರು'. ಕಟ್ಟುವ ಹುರುಪು ಪುಟಿಯುತ್ತಿತ್ತು. ಶ್ರದ್ಧೆ ಶ್ರಮದ ಜತೆ ಬೆರೆತಿತ್ತು. ತಮಗಾಗದ, ಆಗುವ ಲೇಖಕರು, ಕೃತಿಗಳ ಬಗ್ಗೆ ಕಂಬಾರರು ಯಾಕೆ ಮಾತಿಗೆ ಎಳೆಯುತ್ತಿದ್ದ ರೆಂದು ತಿಳಿಯುತ್ತಿರಲಿಲ್ಲ. ಅದರೆ ಬೇಕಾದ ವರನ್ನು ಕರೆಸಿ ಅಗಲೇ ಪ್ರಕಟಗೊಂಡ ಕೃತಿಗಳ 'ದಾನ' ನೀಡುತ್ತ ಹೊಗಳಿಕೆಯ ಪುಟಗಳನ್ನು ಪೇರಿಸಿಕೊಂಡರು. ಚರ್ಚೆಯಲ್ಲಿ ಮುಕ್ತತೆ ಇರುತ್ತಿತ್ತು. ಎಲ್ಲರ ಅಭಿಪ್ರಾಯಕ್ಕೂ ಗೌರವವಿತ್ತು. ಆದರೆ ಅಧ್ಯಾಪಕರಲ್ಲಿ ಅಸಮಾಧಾನವಿತ್ತೆಂದು ನಂತರ ಗೊತ್ತಾಯಿತು.

ಕನ್ನಡಕ್ಕಾಗಿ ಕಾಡಿನಲ್ಲಿ ಹೊಸ ವಿಶ್ವವಿದ್ಯಾಲಯವನ್ನು ಕಟ್ಟಬೇಕಿತ್ತು. ಉತ್ತರ ಕರ್ನಾಟಕದ ಧಾಡಸಿ ಕಂಬಾರರು ಕಬ್ಬಿಣದ ಅದಿರನ್ನು ಕರಗಿಸಿ, ಹೊಡೆದು, ಬಡಿದು ಆಯುಧ, ಉಪಕರಣಗಳೆರಡನ್ನೂ ಮಾಡುವಂತೆ ಏಗುತ್ತಾ ಬಂದರು. 'ನಾವೆಲ್ಲ' ಮೆಚ್ಚಿದೆವು. ಅಂತೆಯೇ ಎರಡನೆಯ ಅವಧಿಗೂ ಅವರೇ ಇರಲಿ ಎಂದು ವಾದಿಸಿದೆವು. ಒಳರಾಜಕೀಯವೇನೇ ನಡೆದಿರಲಿ ಕಂಬಾರರೇ ಮುಂದುವರೆದರು. ಆದರೆ ಕನ್ನಡ ವಿ.ವಿ. ಕಮಲಾಪುರದ ಗುಡ್ಡಗಳಿಗೆ ಸ್ಥಳಾಂತರಗೊಂಡ ಕ್ಷಣದಿಂದಲೇ ಕಂಬಾರರ ವ್ಯಕ್ತಿತ್ವದ ವೈರುಧ್ಯಗಳು ಢಾಳಾಗಿ ಕಾಣತೊಡಗಿದವು. ಶರಣರ ತಾತ್ವಿಕ ಆಶಯದ 'ಕಾಯಕದ ಮನೆ'ಯಲ್ಲೇ ಉದ್ಘಾಟನೆಯ ದಿನ ಬ್ರಾಹ್ಮಣರಿಂದ ಯಜ್ಞ ಮಾಡಿಸಿದರು. ಅಂದವಾದ ಕಟ್ಟಡಗಳು ಸೋರುತ್ತಿದ್ದವು. ಗಿರಿಸೀಮೆಯ ಕಟ್ಟಡಗಳಲ್ಲಿ ಹುಳುತಿಂದ ಧೂಳು ಜಾಡಿಸಿ ಕೂತುಕೊಳ್ಳುತ್ತಿದ್ದೆವು. ಬೇಕಾದವರು ಪಟ್ಟಕ್ಕೇರಿದರು, ಬೇಡಾದವರು ಪಾತಾಳಕ್ಕೆ. ಈಗ ಕುಲಸಚಿವರ ಹುದ್ದೆ 'ಬೇಕಾದವರಿಗೇ' ಬರಿಷಿಣವಾಗಿದೆಯಂತೆ. ಏಳು ಜನ್ಮ ಎತ್ತಿದರೂ ರಿಪೇರಿ ಮಾಡಲಾಗದ ವ್ಯವಹಾರ ನಡೆದಿವೆಯಂತೆ; ವಿ.ವಿ.ದ ದೊಡ್ಡವರ ಬಾಯ್ಮಾತು. ರೋಗವೇಯಿಲ್ಲದ ವಿ.ವಿ.ಬಸ್ಸು ಯಾಕೆ ನಿಂತಿದೆ, ವಿ.ವಿ. ವಿದ್ವಾಂಸರಿಗೇ ತಿಳಿದಿಲ್ಲವಂತೆ.....

ಇಷ್ಟರಲ್ಲಿ ವೈಯಕ್ತಿಕವಾಗಿ ನನಗೆ ಆಘಾತಕರ ಘಟನೆಗಳನುಭವ. 'ರಾಜ್ಯೋತ್ಸವ-ಜ್ಞಾನೋತ್ಸವ ಎಂಬ ಯೋಜನೆಯನ್ನು ರೂಪಿಸಿದ್ದೆ. ರಾಜ್ಯದ ತುಂಬ ಪುಸ್ತಕ ಹೊತ್ತು ಮಾರುವ ಕೆಲಸಕ್ಕಿಳಿದಿದ್ದೆವು. ಬಿಳಿಮಲೆ ಮೊದಲಾದ ಸ್ನೇಹಿತರ ಜತೆ ಅಕ್ಷರಶಃ ಹಮಾಲಿ ಕೆಲಸ ಮಾಡಿದ್ದೆ. ಚಿತ್ರದುರ್ಗ ಮುಗಿಸಿ ಬಳ್ಳಾರಿಗೆ ಬಂದಿದ್ದೆವು. ಸಫಲತೆಯ ಶಿಖರ ಏರುತ್ತಿದ್ದೆವು. ಇ ಈ ಎಂಬ ಕವಿ ಕಂಬಾರರ ವಿರುದ್ಧ ಕವನ ಓದಿದರು. ನನ್ನನ್ನು ತುಳಿಯಲು ತಯಾರಾಗಿದ್ದ ಗುಂಪು ಕಂಬಾರರ ಕಿವಿ ಯೂದಿತು. ತುಂಬಿದ ದೈನಂದಿನ ಸಭೆಯಲ್ಲಿ ಕಂಬಾರ ಅಪಮಾನಿಸಿದರು. ಜಾಥಾ ನಿಲ್ಲಿಸಿದರು. ಅಸಹಾಯಕನಾಗಿ ಅತ್ತೆ. ಸುಳ್ಳು ಅಪವಾದವನ್ನು ಹೊತ್ತೆ. 'ಅರಸರಿಯದ ಬಟ್ಟೆಗೆ, ಬಿದ್ದೆ. ಜಾನಪದ ವಿಭಾಗದಲ್ಲಿ ಬಿಳಿಮಲೆಯವರ ಜತೆ ಗ್ರಾಮದೇವತೆಗಳ ವಿಶ್ವಕೋಶದ ತಯಾರಿಕೆಗೆ ತಳ್ಳಲ್ಪಟ್ಟೆ. ಬರೆಬರೆದು ಕೈ ಬಾತವು. ಬೆರಳಿಗೆ ಬಟ್ಟೆ ಸುತ್ತಿಕೊಂಡು ದಿನಕ್ಕೆ ಹತ್ತಾರು ತಾಸು ಬರೆದೆ. ಗೆಳೆಯರ ಜತೆಗೂಡಿ ನಿರ್ಧಾರಿತ ಅವಧಿಯಲ್ಲಿ ಮುಗಿಸಿದೆ. ಇಷ್ಟೊತ್ತಿಗಾಗಲೇ ಗೆಳೆಯರಿಗಾದ ಅನ್ಯಾಯದ ವಿರುದ್ಧ ಮಾತಾಡಿ ಬಿಳಿಮಲೆಯ ವರೂ ಅವಕೃಪೆಗೊಳಗಾಗಿದ್ದರು. ಪ್ರಕಾಶ ಕಂಬತ್ತಳ್ಳಿ ಬೀದಿಪಾಲಾಗಿದ್ದರು. 'ವ್ಯವಸ್ಥೆಗೆ' ಬಿಳಿಮಲೆಯವರ ಯೋಜನೆ ಮುಗಿಯುವ ಅಗತ್ಯವಿರಲಿಲ್ಲ. ನನ್ನನ್ನು ಕರ್ತವ್ಯವಿಮುಖನನ್ನಾಗಿ ಮಾಡಲು ಸಾಹೇಬರ ಸಮೀಪ ವರ್ತಿಗಳು ಯತ್ನಿಸಿದರು. 'ಕನ್ನಡದ ಅನ್ನ ತಿನ್ನುತ್ತಿದ್ದೇನೆ. ವಿಶ್ವವಿದ್ಯಾಲಯದಲ್ಲಿ ನನ್ನನ್ನು ಉಳಿಸಿಕೊಳ್ಳದಿದ್ದರೂ ಚಿಂತೆಯಿಲ್ಲ ಕೆಲಸ ಪೂರೈಸುತ್ತೇನೆ' ಎಂದೆ. ಕಷ್ಟಗಳ ಮಧ್ಯೆ ಮನುಷ್ಯ ಬೆಳೆಯುತ್ತಾನಂತೆ. ನನ್ನನ್ನು ಹೊರ ಹಾಕುತ್ತಾರೆಂಬ ಆತಂಕದ ಕೊನೆಯ ದಿನಗಳು. ಕೈಲಿದ್ದ ಕೆಲಸ ಮುಗಿಯಲು. ಒಂದು ತಿಂಗಳುಳಿಯಿತು. ಲೈಬ್ರರಿಯಲ್ಲಿ ಪಟ್ಟುಹಿಡಿದು ಕೂತೆ. 'ಮಾನವಪದಶಾಸ್ತ್ರ' ಸಿದ್ಧವಾಯಿತು.

ಕಂಬಾರರಿಗೆ ಸಾಕಷ್ಟು ಕೃತಜ್ಞನಾಗಬೇಕು ನಾನು. ಉತ್ತಮ ವಿದ್ವಾಂಸರ ಒಡನಾಟ ಕಲ್ಪಿಸಿದರು. ಗ್ರಂಥಾಲಯದ ಉಪಯೋಗ ಪಡೆಯುವ ಅವಕಾಶ ಒದಗಿಸಿದರು. ಈ ದೃಷ್ಟಿಯಿಂದ ಒಂದು ವರ್ಷದ ಅನುಭವ 'ರಿಫ್ರೆಶರ್ ಕೋರ್ಸ್'ನಂತಿತ್ತು. ಜತೆಗೆ ದೊಡ್ಡವರ ಸಣ್ಣತನ, ಸಣ್ಣವರಲ್ಲಿಯ ದೊಡ್ಡತನ, ಸಾಂಸ್ಕೃತಿಕ ಲೋಕದ ಸರದಾರರ ಅಟ್ಟಹಾಸ, ಆಡಂಬರ ಒಣಪ್ರತಿಷ್ಠೆ ಇಂಥವನ್ನೆಲ್ಲ

## ಕರದಂಟು

ನಲ್ಲೆ
ಬೇಡ ನನಗೆ
ಬೆಳಗಾವಿ ಕರದಂಟು;
ಹೀಗೆ ಇದ್ದರೆ ಸಾಕು
ನನ್ನ ನಿನ್ನ ನಂಟು!

– ಗೋಪಾಲಕೃಷ್ಣ ವಂಡ್ಸೆ

## ಕಾಪಿ ಸಚಿವರು

ಕರ್ನಾಟಕ ಘನ ಸರ್ಕಾರದ ಉನ್ನತ ಶಿಕ್ಷಣ ಸಚಿವ ಸೋಮಶೇಖರ್ ಎಲ್ಲರಂತಲ್ಲದ ಅಪರೂಪದ ರಾಜಕಾರಣಿ. ಸಾಮಾನ್ಯವಾಗಿ ರಾಜಕಾರಣಿಗಳ ಮೇಲೆ ಬರುವ ಭ್ರಷ್ಟಾಚಾರ ಸ್ವಜನಪಕ್ಷಪಾತದ ಆರೋಪಕ್ಕೆ ಅವರು ಈಡಾಗಿಲ್ಲ. ಬದಲಾಗಿ ಎಲ್.ಎಲ್.ಬಿ. ಓದುವಾಗ ನಕಲು ಮಾಡಿದ ಆರೋಪ ಹೊತ್ತಿದ್ದಾರೆ. ಆಗ ಅವರು ಡಿಬಾರ್ ಕೂಡ ಆಗಿದ್ದರಂತೆ.

ಈಗ ನಾಡಿನ ವಿದ್ಯಾರ್ಥಿಗಳ ಭವಿಷ್ಯ ರೂಪಿಸುವ ಖಾತೆಯಲ್ಲಿ ವಿರಾಜಮಾನರಾಗಿದ್ದಾರೆ?

ಇದೇ ಜನತಾದಳ ಸರ್ಕಾರದಲ್ಲಿ ಬಂದಿಖಾನೆ ಸಚಿವರಾಗಿರುವ ವಿ.ಸೋಮಣ್ಣನವರ ಮೇಲೆ ಇಂಥ ಆಪಾದನೆಯನ್ನು ಬೇರೆ ಯಾರೂ ಮಾಡಿಲ್ಲ. ವಿದ್ಯಾರ್ಥಿ ದೆಸೆಯಲ್ಲಿ ಕಾಪಿ ಮಾಡುವಾಗ ಡಾ.ರಾಮೇಗೌಡರ ಕೈಗೆ ಸಿಕ್ಕುಬಿದ್ದುದನ್ನು ತಾವೇ ಬಹಿರಂಗವಾಗಿ ಒಪ್ಪಿಕೊಂಡಿದ್ದಾರೆ. ಆ ಬಗ್ಗೆ ಅವರಿಗೆ ಬಹಳ ಹೆಮ್ಮೆ!

ಸಾರ್ವಜನಿಕ ಬದುಕು ಅಧೋಗತಿಗಿಳಿದಿರುವಾಗ ಸಚಿವರು ಕಾಪಿ ಮಾಡಿದ ಸಂಗತಿ ಜನರನ್ನು ಬೆಚ್ಚಿಬೀಳಿಸದಿರಬಹುದು. ಆದರೆ ಇಂದಿನ ವಿದ್ಯಾರ್ಥಿಗಳು ಸಚಿವರನ್ನೇ ಕಾಪಿ ಮಾಡಿದರೆ.....?

ಸಮೀಪದಿಂದ ನೋಡುವ ಅವಕಾಶ....

ಸಾವಿರಾರು ವರ್ಷಗಳಿಂದ ಕನ್ನಡ ಭಾಷೆ ಸಾಮಾನ್ಯ ಜನರಿಂದ ಬದುಕಿದೆ. ಈ ಭಾಷೆಯಷ್ಟೇ 'ದ್ರಾವಿಡ' ವರ್ಗಕ್ಕೆ ಸೇರಲ್ಲ, ಕನ್ನಡ ಜನಕುಲಗಳೂ ಬೃಹತ್ ದ್ರಾವಿಡ ಜನ ಸಂಸ್ಕೃತಿಯ ಭಾಗವಲ್ಲವೇ ? ಈ ಹಿನ್ನೆಲೆಯಲ್ಲಿ 'ಕನ್ನಡ ದ್ರಾವಿಡತನ'ದ ಶೋಧನೆಯಾಗ ಬೇಕು, ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯನ್ನು ವೈಜ್ಞಾನಿಕವಾಗಿ ಬರೆಯಬೇಕು, ಚಿಂತನೆಯ ದಿಕ್ಕು ಬದಲಬೇಕು ಎಂಬ ಕನಸು ಕಟ್ಟಿಕೊಂಡಿದ್ದೆ. ಕಂಬಾರರ ಮಾತುಗಳಲ್ಲಿ ಈ ಬಗೆಯ ವಾದವಿರುವುದನ್ನು ಅನೇಕ ಸಲ ಕೇಳಿದ್ದೆ. ಈ ನಿಟ್ಟಿನಲ್ಲಿ ವಿಶ್ವವಿದ್ಯಾಲಯಕ್ಕೆ ಬರುವ ಮೊದಲೇ 'ಕರ್ನಾಟಕ ಸಂಸ್ಕೃತಿ ಭಾಗ-೧(ಹಬ್ಬಗಳು)' ಪ್ರಕಟಿಸಿದ್ದೆ.'ಕರ್ನಾಟಕ ದಲಿತ ಸಂಸ್ಕೃತಿ ಪರಂಪರೆ ಭಾಗ-೨ (ಜಾತ್ರೆಗಳು)' ಟೈಪ್ ಮಾಡಿಸಿ ವಿ.ವಿ.ಗೆ ಬಂದ ದಿನವೇ ಮುನ್ನುಡಿಗೆಂದು ಕಂಬಾರರಿಗೇ ಕೊಟ್ಟಿದ್ದೆ. ಅವರು ಬರಕೊಡುವುದಿಲ್ಲವೆಂದು ಗೊತ್ತಾದಾಗ ಬಿಳಿಮಲೆಯವರಿಂದ ಬರೆಯಿಸಿ ಅಚ್ಚಿಸಿದೆ. ಗ್ರಾಮ ದೇವತೆಗಳ ವಿಶ್ವಕೋಶದ ರಚನೆಗಿದ್ದ ಮಾಹಿತಿ ಗ್ರಂಥಗಳನ್ನು ಪ್ರಸಾರಾಂಗ ದಲ್ಲಿದ್ದಾಗಲೇ ಸಂಬಂಧಪಟ್ಟವರನ್ನು ಕೇಳಿ ನೋಡಿ ಅಲ್ಪಸ್ವಲ್ಪ ಬಳಸಿಕೊಂಡಿದ್ದೆ. ಉದ್ಧರಣೆ ಗಳನ್ನು ಕೃತಜ್ಞತೆಯಿಂದ ನಮೂದಿಸಿದ್ದೆ. ಜಾನಪದ ವಿಭಾಗಕ್ಕೆ ನಾನು ಬರುವಷ್ಟೊತ್ತಿಗೆ 'ಜಾತ್ರೆಗಳು' ಅಚ್ಚಾಗಿತ್ತು. ಇಷ್ಟೆಲ್ಲ ಆಗಿಯೂ ಮಾಹಿತಿ ಕದ್ದು ಪುಸ್ತಕ ಪ್ರಕಟಿಸಿದೆನೆಂದು ಕಲಂಕ ಹಚ್ಚಿದರು. ಸಂಶೋಧನೆ ಮುಂದುವರೆಸುವ ಅವಕಾಶವಿದ್ದುದರಿಂದ ಎಷ್ಟೆಲ್ಲ ಹಿಂಸೆ ಅಪಮಾನವಾದರೂ 'ಪ್ರೊಫೆಸರ್, ರೀಡರ್ ಅಲ್ಲ ಯಾವ ಕೆಲಸವಾದರೂ ಕೊಡಿ' ಎಂದು ಗೋಗರೆದೆ. ಕಂಬಾರ ನನ್ನನ್ನು ವೈರಿಯೆಂದೇಕೆ ತಿಳಿದರೋ ಗೊತ್ತಾಗಲೇ ಇಲ್ಲ. ಕನ್ನಡದ ಕೈಂಕರ್ಯದ ಆಶೆಯಿಂದ ಸ್ವಾಭಿಮಾನ ಬಿಟ್ಟೆ. ಆದರೂ ಕಂಬಾರರ ಹೃದಯ ಕರಗಲಿಲ್ಲ. 'ನಿಮ್ಮ ಬಂಡಾಯದ ಮಿತ್ರರೇ ನಿಮ್ಮ ವಿರುದ್ಧ ಇದ್ದಾರೆ' ಅಂದರು. 'ನಿಮ್ಮನ್ನು ಖಂಡಿತ ಉಳಿಸಿಕೊಳ್ಳುತ್ತೇನೆ' ಎಂದು ಕೊನೆಯವರೆಗೂ ಹೇಳುತ್ತ ಕಡೆದಿನ ಪ್ಯೂನನ ಕೈಲಿ ಬಿಡುಗಡೆ ಆದೇಶ ಕಳಿಸಿದರು. ಕುಲಸಚಿವ ಕೆ.ವಿ. ನಾರಾಯಣರನ್ನು ಕಂಡೆ. ತಮ್ಮ ಅಸಹಾಯಕತೆ ವ್ಯಕ್ತ ಮಾಡಿದರು. ನಂತರದ ದಿನಗಳಲ್ಲಿ ಕೆ.ವಿ. ನಾರಾಯಣರನ್ನು ಹೊರಹಾಕುವ ಹುನ್ನಾರ ನಡೆದಾಗ ವಿಶ್ವವಿದ್ಯಾಲಯದ ಒಳಗಿನ, ಹೊರಗಿನ ಗೆಳೆಯರ ಜತೆ ಬೀದಿಗಿಳಿದು ಹೋರಾಡಿದೆ. ನಾರಾಯಣ ಉಳಿದರು. ಆದರೆ ವಿ.ವಿ. ಸಲುವಾಗಿ ತಮ್ಮ ಭೂಮಿ ಕಳಕೊಂಡಿದ್ದ ದಿನಗೂಲಿ ನೌಕರರ ಸಮಸ್ಯೆ ಹಾಗೇ ಉಳಿಯಿತು. ಅಲ್ಲಮಪ್ರಭು ಬೆಟ್ಟದೂರ ಮೊದಲಾದ ಗೆಳೆಯರೊಂದಿಗೆ ಕಂಬಾರರ ಆಡಳಿತದ ವಿರುದ್ಧ ಹೋರಾಟಕ್ಕಿಳಿದೆ. ಜಿಲ್ಲೆಯ ಎ.ಐ.ಎಸ್.ಎಫ್; ಅಂಬೇಡಕರ ಸಂಘ; ಮೊದಲಾದ ಹಲವಾರು ಸಂಘಟನೆಗಳು, ಕವಿಗಳು, ಕೊಪ್ಪಳದ ಗೆಳೆಯರು ಕೂಡಿ ಮೆರವಣಿಗೆ ತೆಗೆದೆವು. ಆಗಿನ ಕುಲಸಚಿವ ಕರೀಗೌಡ ಬೀಚನಹಳ್ಳಿಯವರಿಂದ ಕಾಲೇಜು ನಿರ್ದೇಶನಾಲಯದ ಜಂಟಿ ನಿರ್ದೇಶಕರಿಗೆ ಪತ್ರ ಹೋಯಿತು: 'ಕಂಡಕ್ಟ್‌ರೂಲ್ಸ್ ಪ್ರಕಾರ ಅಲ್ಲಮಪ್ರಭು ಬೆಟ್ಟದೂರ, ಹಿರೇಮಠರ ವಿರುದ್ಧ ಕ್ರಮಕೈಕೊಳ್ಳಬೇಕು...'

ಪತ್ರಿಕೆಗಳಲ್ಲಂತೂ ಹಲವಾರು ಬಾರಿ ಕಂಬಾರರ ವಿರುದ್ಧ ವರದಿಗಳು ಪ್ರಕಟವಾದವು. ನಾವಿಟ್ಟ ಹಲವಾರು ಬೇಡಿಕೆಗಳನ್ನು ಸದ್ದಿಲ್ಲದೇ ಈಡೇರಿಸಿದರೂ, ಹೊಸ ಹೊಸ ತಪ್ಪುಗಳಾ ಗುತ್ತಲೇ ಹೋದವು. ಸಾಧನೆಗಳ ಶುಭ್ರ ಮುಖವನ್ನು ಸಣ್ಣ ತಪ್ಪೂ ಕಪ್ಪಾಗಿಸಬಲ್ಲ ದಲ್ಲವೇ?

ರಾಜಕೀಯದಲ್ಲಿ ಶಾಶ್ವತ ವೈರಿ ಅಥವಾ ಸ್ನೇಹಿತರಿಲ್ಲ ಅನ್ನುತ್ತಾರೆ. ಸಾಂಸ್ಕೃತಿಕ ಕ್ಷೇತ್ರವೂ ರಾಜಕೀಯವಾಗಿ ಹೋಗಿದೆ. ಅಲ್ಲಿಯೂ ಶಾಶ್ವತ ಗೆಳೆಯರಿಲ್ಲ, ವೈರಿಗಳಿಲ್ಲ. ಕನ್ನಡ ವಿ.ವಿ. ಹೇಗೆ ಬೆಳೆಯಬೇಕೆಂಬ ಕನಸು ಬಳ್ಳಾರಿ ಬಿಸಿಲಿನಷ್ಟೇ ಇನ್ನೂ ಪ್ರಖರವಾಗಿದೆ. ಆದರೆ ಮನಸ್ಸುಗಳು ಛಿದ್ರಗೊಂಡಿವೆ. ವಿದ್ವಾಂಸರು ದಿಕ್ಕೆಟ್ಟಿದ್ದಾರೆ. ಗುಂಪುಗಳು ಕತ್ತಿ ಮಸೆಯುತ್ತಿವೆ. ಇದಕ್ಕೆಲ್ಲ ಕಾರಣರಾಗಿರುವ ಕಂಬಾರರೇ ವಿ.ವಿ. ದಿಂದ ಪ್ರಕಟವಾಗುವ ಪ್ರತಿಯೊಂದು ಪುಸ್ತಕ ದಲ್ಲಿ ಹೇಳುವಂತೆ, "..ಇದು ತಿಳುವಳಿಕೆಗೆ ಪರಿಪ್ರೇಕ್ಷ್ಯವನ್ನು ಕಟ್ಟುವ ಕೆಲಸ. ನಾಡಿನ ಪ್ರಕೃತಿಯಂತೆ ನಾಡಿನ ಸಂಸ್ಕೃತಿ ಕೂಡ ಈ ಪರಿಪ್ರೇಕ್ಷ್ಯವಿಲ್ಲದೇ ತನ್ನ ಅರ್ಥವನ್ನು ಕಳೆದು ಕೊಳ್ಳುತ್ತಿದೆ..." ಹೌದು, ಕಳೆದುಕೊಳ್ಳುತ್ತಿದೆ...

ವಿ.ವಿ.ದೊಳಗೆ ಏನೇ ರಾಜಕೀಯ ನಡೆ ಯಲಿ, ಎಷ್ಟೇ ಕಷ್ಟ ನಷ್ಟಗಳು ಸಂಭವಿಸಲಿ ಅವೆಲ್ಲವನ್ನು ಮೀರಿನಿಲ್ಲುವ 'ಸಂಶೋಧನಾತ್ಮಕ ಸಂಗಾತಿತನ', ಕನ್ನಡ ದ್ರಾವಿಡಪರ ಬದ್ಧತೆ, ಪೂರ್ವಗ್ರಹ, ಹೊಟ್ಟೆಕಿಚ್ಚುಗಳಿಂದ ಮುಕ್ತವಾಗಿ

ರುವ ಆರೋಗ್ಯಕರ ಮನಸ್ಸುಗಳ ತುಯ್ತ, ಒಕ್ಕಟ್ಟು; ವಾದ ಸಂವಾದದ ಮುಕ್ತ ನೆಲೆ ಕಡ್ಡಾಯವಾಗಿರಬೇಕಿದೆ. ಕ.ವಿ.ವಿ.ದ ಮೂಲ ಆಶಯಗಳಿಗೆ ದುಡಿಯುವ ಹುಮ್ಮಸ್ಸುಳ್ಳ ಹಲವಾರು ಮನಸ್ಸು ಅಲ್ಲಿವೆ, ಎಲ್ಲೆಲ್ಲಿಯೋ ಇವೆ, ಅವೆಲ್ಲ ಒಂದಾಗಬೇಕು. ಕೆಡಿಸುವುದು ತುಂಬ ಸುಲಭ; ತಿರುಗಿ ಕಟ್ಟಬೇಕಾದರೆ ಬಹಳ ಕಳಕೊಳ್ಳಬೇಕಾಗುತ್ತದೆ, ಕಷ್ಟಪಡಬೇಕಾಗುತ್ತದೆ.

*

ಕನ್ನಡ ವಿಶ್ವವಿದ್ಯಾಲಯ ೧೯೯೧ ನವಂಬರ್ ೧ ರಂದು ಪ್ರಾರಂಭವಾಯಿತು. ಆರು ವರ್ಷಗಳ ಈ ಅವಧಿಯಲ್ಲಿ ಕಂಬಾರರು ಮಾತುಮಾತಿಗೂ 'ಹಲವಾರು ಕನಸುಗಳಿವೆ, ಜವಾಬ್ದಾರಿಗಳಿವೆ' ಎಂದು ಹೇಳುತ್ತಿರುತ್ತಾರೆ. ಅವರು ಮಹಾಕವಿಯಲ್ಲವೇ? (ಚಕೋರಿ). ಕನಸುಗಳಿಲ್ಲದಿರಲಿಕ್ಕಾಗದು. ಆದರೆ ಬರಿ ಕನಸುಗಳ ಹಳವಂಡದಿಂದ ಕಟು ವಾಸ್ತವವನ್ನು ಎದುರಿಸುವ ಬಲ ಬಂದೀತೇ? 'ಜನತೆಯ ಅನುಭವ ವಿವೇಕಗಳ ನೆರವಿನಿಂದ' ತನ್ನ ಯೋಜನೆಗಳು ರೂಪುಗೊಂಡಿವೆ, 'ತಿರುಗಿ ಮತ್ತೆ ಜನರಿಗೇ ಉಪಯೋಗವಾಗುವ ಗುರಿಹೊಂದಿವೆ' ('ಕನ್ನಡ ವಿಶ್ವವಿದ್ಯಾಲಯ ಹೆಜ್ಜೆ ಗುರುತು') ಎಂದು ಕಾವ್ಯಾತ್ಮಕ ಶೈಲಿಯಲ್ಲಿ ದೊಡ್ಡಮಾತು ಹೇಳಿ ನಾಲ್ಕು ವರ್ಷಗಳಾಗಿವೆ. ಇವರ ದೃಷ್ಟಿಯಲ್ಲಿ 'ಜನತೆ', 'ಕನ್ನಡದ ಸಮಸ್ತ ದೈವ' ('ನೆಲದ ಮರೆಯ ನಿದಾನ')ಯಾರು ? ನಿರಕ್ಷರ ಜನಕೋಟಿಯೇ? ಅಕ್ಷರಸ್ಥ ಸಮೂಹವೇ? ಮೂರು ಜನವಿಭಾಗಗಳು ಅವರ ನೆದರಿನಲ್ಲಿದ್ದಾರೆ: 'ನಮ್ಮ ಯೋಜನೆಗಳ ಮೂಲಕ ಕ.ವಿ.ವಿ.ದ ಫಲಗಳು ಮೂರು ಹಂತದ ಜನರಿಗೆ ತಲುಪಬೇಕೆಂಬುದು ನಮ್ಮ ಉದ್ದೇಶವಾಗಿದೆ. ಒಂದು ಜನಸಾಮಾನ್ಯರಿಗೆ, ಎರಡು ವಿದ್ಯಾರ್ಥಿಗಳಿಗೆ, ಮೂರು ಗಂಭೀರ ಓದುಗರಿಗೆ ಅಂದರೆ ವಿದ್ವಾಂಸರಿಗೆ, ಅಧ್ಯಾಪಕರಿಗೆ'. ಆರು ವರ್ಷಗಳ ಕ.ವಿ.ವಿ.ಯ ಪ್ರಕಟನೆಗಳು, ವಿವಿಧ ಬಗೆಯ ಕಾರ್ಯ ಚಟುವಟಿಕೆಗಳನ್ನು ಗಮನಿಸಿದರೆ ಕೊನೆಯ ಎರಡು ಗುಂಪುಗಳಿಗೆ ಸ್ವಲ್ಪಮಟ್ಟಿನ ಪ್ರಯೋಜನವಾದಂತೆ ತೋರುತ್ತದೆ. ಅಲ್ಲಿಯೂ ಭಿನ್ನಾಭಿಪ್ರಾಯ, ಕೊರಗು, ಇತಿಮಿತಿಗಳಿಲ್ಲವೆಂದಲ್ಲ. ಜನಸಾಮಾನ್ಯರಿಗೆ ಕನ್ನಡ ವಿಶ್ವವಿದ್ಯಾಲಯ ಏನು ಮಾಡಿದೆ? ಏನು ಮಾಡಬಯಸುತ್ತದೆ? ಕಮಲಾಪುರದಿಂದ ಹರದಾರಿ ದೂರದ ಗುಡ್ಡದಲ್ಲಿರುವ ವಿ.ವಿ.ದ ಕೆಲವು ಕಾರ್ಯಕ್ರಮಗಳಾದರೂ ಹೊಸಪೇಟೆಯಲ್ಲಿ ನಡೆದರೆ 'ಜನಸಾಮಾನ್ಯರು' ಪಾಲ್ಗೊಳ್ಳಲಿಕ್ಕಾದೀತು ಎಂದು ಎಷ್ಟುಸಲ ಬೇಡಿಕೊಳ್ಳಲಿಲ್ಲ? ವಿವಿಧ ಸಂಘ ಸಂಸ್ಥೆಗಳು, ಕ್ರಾಂತಿಕಾರಿ ಸಂಘಟನೆಗಳು ಮತ್ತು ಸ್ಥಳೀಯ ಆಸಕ್ತರ ಈ ಬೇಡಿಕೆಗೆ ಕಂಬಾರರು ಕ್ಯಾರೇ ಅನ್ನಲಿಲ್ಲ. 'ಕ್ಯಾಂಪಸ್ ಬೆಳೆಯುವುದು ಹೇಗೆ? ಎಂದು ಅವರ ವಾದ, ನಾಟಕ ನೋಡಲು; 'ಮುಖ್ಯ' ಅನಿಸಿದ ಸಭೆಗಳಿಗೆ ಕೇಳುಗರಾಗಲು ಕಷ್ಟಪಟ್ಟು ಬೆರಳೆಣಿಕೆಯ ಜನ ಕಾಡಿಗೇ ಹೋಗುತ್ತಾರೆ, ಬವಣೆ ಪಡುತ್ತಾರೆ. 'ನವ ಸಾಕ್ಷರಮಾಲೆ'ಯ ಮೂಲಕ ಜನಸಾಮಾನ್ಯರನ್ನು ತಲುಪಿರುವೆನೆಂದು ವಿ.ವಿ. ಹೇಳಬಹುದು. ನಾನು ಕೇಳುವುದು ನಿರಕ್ಷರ ಜನಕೋಟಿಯನ್ನು ವಿ.ವಿ. ತಲುಪುವುದು ಹೇಗೆ ಎಂದು?

ಇದು ತುಂಬ ಮುಖ್ಯ ಪ್ರಶ್ನೆ. ಕ.ವಿ.ವಿ.ಯ ಪ್ರಥಮ ಕಾಳಜಿ ಈ ವರ್ಗದ ಬಗೆಗಿರಬೇಕಿತ್ತು. ಕಂಬಾರರು ಪ್ರತಿಯೊಂದು ಪುಸ್ತಕದಲ್ಲಿ ಬರಕೊಳ್ಳುವ 'ಹಳೆಯ ಕಾಲದ ತಿಳಿವಳಿಕೆ' ಈ ಜನಕೋಟಿಯಲ್ಲೇ ಇದೆ. ಯಾವ ನಿಕಾಯ ಅಥವಾ ವಿಭಾಗ ನೇರವಾಗಿ ಈ ಬಹುಸಂಖ್ಯಾತ ಕನ್ನಡಿಗರಿಗೆ ಸಂಬಂಧಿಸಿದೆ ? ಅದು ಎಲ್ಲ ನಿಕಾಯ, ವಿಭಾಗಗಳ ಕೇಂದ್ರವಾಗಿದೆಯೇ? ಎಲ್ಲ ನಿಕಾಯ, ವಿಭಾಗಗಳ 'ಉತ್ಪನ್ನ' ಈ ಕೇಂದ್ರದಿಂದ ಜನಕೋಟಿಯನ್ನು ತಲುಪಲು ಮಾರ್ಗವೇನಾದರೂ ಕಲ್ಪಿತವಾಗಿದೆಯೇ? ಮೇಲುಮಟ್ಟದ ಮತ್ತು ಮೇಲುಪದರದ ಸೋಕಾಲ್ಡ್ ವಿದ್ಯಾವಂತ ಜನವಿಭಾಗವನ್ನು ಮಾತ್ರ ತನ್ನ ಗುರಿಯಾಗಿಟ್ಟುಕೊಂಡರೆ ಅಪರಾಧವಲ್ಲವೇ? ನಾಡಿನ ಇತರ ವಿಶ್ವವಿದ್ಯಾಲಯಗಳು 'ಪ್ರಸಾರೋಪನ್ಯಾಸ'ಗಳ ಮೂಲಕ ಜನಸಾಮಾನ್ಯರ ಸಂಪರ್ಕವಿಟ್ಟುಕೊಂಡಿರುವ ಯೋಜನೆಯನ್ನು ಈವರೆಗೂ ನಡೆಸಿಕೊಂಡು ಬಂದಿವೆ. ಇಂಥ 'ಕನಸು-ಕಲ್ಪನೆ' ಕ.ವಿ.ವಿ.ಗೇಕೆ ಹೊಳೆಯಬಾರದು? ಕ.ವಿ.ವಿ.ಯ ನಾಲ್ಕು ನಿಕಾಯಗಳಲ್ಲಿ ೨೪ ವಿಭಾಗಗಳಿದ್ದು ಸಮಾಜ ವಿಜ್ಞಾನ ನಿಕಾಯದಲ್ಲಿ ಮಾನವಶಾಸ್ತ್ರ, ಇತಿಹಾಸ ವಿಭಾಗ ಸೇರಿರುವಾಗ ಸಮಾಜಶಾಸ್ತ್ರ, ಭೂಗೋಲಶಾಸ್ತ್ರ, ರಾಜ್ಯಶಾಸ್ತ್ರ, ವಾಣಿಜ್ಯಶಾಸ್ತ್ರ ವಿಭಾಗಗಳೇಕಿಲ್ಲ? ಈ ಕ್ಷೇತ್ರದ ಅನುಭವ ಕನ್ನಡದ ಮೂಲಕ ಬರಬೇಡವೇ? ಭಾಷಾನಿಕಾಯದಲ್ಲಿ 'ವಿದೇಶಿ ಮತ್ತು ಭಾರತೀಯ ಭಾಷೆಗಳಂಥ ವಿಭಾಗವಿರುವು

## ಕುಂದೂರು

ಪಾಂಡವರು ೧೨ ವರ್ಷ ವನವಾಸ ಮುಗಿಸಿ ಅಜ್ಞಾತವಾಸ ಪ್ರಾರಂಭಿಸಿದಾಗ ಈಗಿನ ಹಾನಗಲ್ ನಗರವೇ ಅಂದಿನ ವಿರಾಟನಗರ, ಬಂಕಾಪುರವೇ ಹಸ್ತಿನಾವತಿ ಆಗಿತ್ತೆಂಬುದು ಒಂದು ಪ್ರತೀತಿ. ಈ ಬಂಕಾಪುರ ನಗರದಲ್ಲಿ ಪಾಂಡವರು ತಲೆ ಮರೆಸಿಕೊಂಡಾಗ ಹತ್ತಿರದ ಗುಡ್ಡದಲ್ಲಿ ಬಕನೆಂಬ ರಾಕ್ಷಸ ವಾಸವಾಗಿದ್ದ. ಈ ರಾಕ್ಷಸನಿಗೆ ಸುತ್ತಲಿನ ಗ್ರಾಮಸ್ಥರು, ಪ್ರತಿ ದಿನ ಸರತಿಯಂತೆ ೨ ಕೋಣ ೧ ಮನುಷ್ಯ ಮತ್ತು ೧ ಭಂಡಿ ಅನ್ನವನ್ನ ಕಳಿಸಬೇಕೆಂಬ ಒಪ್ಪಂದದಂತೆ ತಪ್ಪದೇ ಕಳಿಸುತ್ತಿದ್ದರು. ಒಂದು ದಿನ ಬಂಕಾಪುರದ ಒಬ್ಬನೇ ಮಗನಿದ್ದ ಬಡ ಬ್ರಾಹ್ಮಣ ದಂಪತಿಯ ಸರತಿ ಬಂದಿತು. ಇದ್ದ ಒಬ್ಬ ಮಗನನ್ನು ಕಳೆದುಕೊಳ್ಳಲಾರದೆ ದಂಪತಿ ದುಃಖಿಸಹತ್ತಿದರು. ಹತ್ತಿರದ ಮನೆಯಲ್ಲಿ ವಾಸವಾಗಿದ್ದ ಪಾಂಡವರು ಇದನ್ನು ಗಮನಿಸಿ. ಅಂದಿನ ಸರತಿಗೆ ಭೀಮನನ್ನು ಕಳಿಸಲು ಒಪ್ಪಿದರು. ಅನ್ನ ತುಂಬಿದ ಭಂಡಿಯನ್ನೇರಿ ಹೊರಟ ಭೀಮನು ಭಂಡಿಯಲ್ಲಿದ್ದ ಅನ್ನವನ್ನು ದಾರಿಯಲ್ಲಿ ತಾನೇ ಭಕ್ಷಿಸುತ್ತ ಹೊರಟನು. ಅಲ್ಲಿ ಇಬ್ಬರಿಗೂ ಭಯಂಕರವಾದ ಕಾದಾಟವಾಗಿ ಕೊನೆಗೆ ಭೀಮನು ಬಕಾಸುರನನ್ನು ಕೊಂದು ಹೆಣವನ್ನು ಪುರದ ಹತ್ತಿರವಿದ್ದ ಗಿಡಕ್ಕೆ ತೂಗು ಹಾಕಿದ್ದರಿಂದ ಈ ಗ್ರಾಮಕ್ಕೆ ಕೊಂದುರು ಎಂಬ ಹೆಸರು ಬಂತು. ಕಾಲಕ್ರಮೇಣ ಅದು ಕುಂದೂರು ಆಗಿ ಮಾರ್ಪಟ್ಟಿತು.

– ಕೆ. ಬಸವಣ್ಣೆಪ್ಪ

ದಾದರೆ, ಅಗತ್ಯವಾಗಿ ಇರಬೇಕಿದ್ದುದು 'ದ್ರಾವಿಡಭಾಷಾ ವಿಭಾಗ'ವಲ್ಲವೇ? ಇದೇ ನಿಕಾಯದ 'ಡಿಪಾರ್ಟ್‌ಮೆಂಟ್ ಆಫ್ ಕನ್ನಡ ಡೆವಲಪ್‌ಮೆಂಟ್' (ಕನ್ನಡ ಯುನಿವರ್ಸಿಟಿ ಎ ಪ್ರೊಫೈಲ್) ಎಂಬುದನ್ನು 'ಕನ್ನಡ ಭಾಷಾಭಿವೃದ್ಧಿ ವಿಭಾಗ'ವೆಂದು (ಪ್ರಜಾವಾಣಿ ೨-೩-೯೭ರ ಜಾಹೀರಾತು) ಹೇಳಿರುವದೆಷ್ಟು ಸರಿ? ವಿಜ್ಞಾನ ನಿಕಾಯದಲ್ಲಿ ಭೌತಶಾಸ್ತ್ರ ರಾಸಾಯನಶಾಸ್ತ್ರ, ಗಣಿತ, ಜೀವಶಾಸ್ತ್ರ ಗಳೆಲ್ಲಿವೆ? 'ರಸಸಿದ್ಧಿ', 'ಅಶ್ವಶಾಸ್ತ್ರ', 'ಗಜಶಾಸ್ತ್ರ' ದಂಥ ಪಾರಂಪರಿಕ ದೇಸಿ ವಿಜ್ಞಾನಗಳ ಅಧ್ಯಯನಕ್ಕೆ ಅವಕಾಶವೆಲ್ಲಿ?

ಕೋಟ್ಯಾಂತರ ರೂಪಾಯಿ ಖರ್ಚು ಮಾಡುತ್ತಿರುವ ವಿ.ವಿ.ಗೆ ಪ್ರಯೋಗಶಾಲೆ ಇಟ್ಟುಕೊಳ್ಳಲು ಕಷ್ಟವಾಗಬಾರದು. ಸುಮಾರು ೧೩೦ರ ವರೆಗಿರುವ ದ್ರಾವಿಡ ಭಾಷೆಗಳಲ್ಲಿ ಲಿಪಿಯಿರುವ ನಾಲ್ಕು ಭಾಷೆಗಳಲ್ಲಿ 'ಕನ್ನಡ' ಒಂದು. 'ದ್ರಾವಿಡ' ಭಾಷೆಗಷ್ಟೇ ಸೀಮಿತವಾದ ಪರಿಕಲ್ಪನೆಯಲ್ಲ. ಹಿಂದೊಮ್ಮೆ ದೇಶವ್ಯಾಪಿ ಯಾಗಿದ್ದ ದ್ರಾವಿಡ ಜನಕುಲಗಳ ಪ್ರಧಾನ ಅಂಗ 'ಕನ್ನಡ ಜನ'. ದೇಸಿ ನೆಲೆಯ ಸಂಶೋಧನೆಯ ನಿಜವಾದ ಕಾಳಜಿ ಕ.ವಿ.ವಿಗಿರುವುದಾದರೆ ಮೊದಲು ಒಂದು ಕಾರ್ಯವನ್ನು ಕೈಗೆತ್ತಿಕೊಳ್ಳುವ ಜರೂರಿದೆ. ಕನ್ನಡ ಜನಕುಲಗಳು ಬುಡಕಟ್ಟು ಮತ್ತು ಜಾತಿಗಳಲ್ಲಿ ವಿಭಜನೆಗೊಂಡಿವೆಯಷ್ಟೇ. 'ಬುಡಕಟ್ಟು ವಿಭಾಗ' ಕನ್ನಡ ಬುಡಕಟ್ಟುಗಳ ಸಮಾಜ ಮತ್ತು ಸಂಸ್ಕೃತಿ ಶೋಧನೆಯನ್ನು ಕೈಗೆತ್ತಿಕೊಳ್ಳ ಬಹುದು. ಆದರೆ 'ಜಾತಿ ಘಟಕರೂಪಿ' ಕನ್ನಡ ಸಮಾಜದ ಸಾಮಾಜಿಕಾರ್ಥಿಕ, ಸಾಂಸ್ಕೃತಿಕ ದಾಖಲೀಕರಣ ಮತ್ತು ಸಂಶೋಧನೆಯಾಗ ಬೇಕಿದೆ. ವಿವಿಧ ಶಾಸ್ತ್ರ ಶಿಸ್ತುಗಳ ಪಂಡಿತವರ್ಗ ಇದಕ್ಕಾಗಿ ಗ್ರಾಮಗಳ ತಲಸ್ಪರ್ಶಿ ಕ್ಷೇತ್ರಕಾರ್ಯ ಕ್ಕಿಳಿಯಬೇಕು. ಈ ಬಗೆಯ ಕೆಲವು ಆಲೋಚನೆ ಕಂಬಾರರಿಗಿತ್ತೆನ್ನಲು ಅವರ 'ನೆಲದ ಮರೆಯ ನಿದಾನ' ಪುಸ್ತಿಕೆಯಲ್ಲಿ ಸಾಕ್ಷಿಯಿದೆ. (೨೧ನೇ ಪುಟ). ಆದರೆ ಇದು ಎಲ್ಲಿ ಕಾರ್ಯರೂಪಕ್ಕಿಳಿ ದಿದೆ? ಈ ಶತಮಾನದ ಆದಿಯಲ್ಲಿ ಥರ್ಸಟನ್ ಮತ್ತು ನಂಜುಂಡಯ್ಯ, ಅನಂತಕೃಷ್ಣ ಅಯ್ಯರ್‌ಗಳು ತಮ್ಮ ಪರಿಮಿತಿಯಲ್ಲಿ ಮಾಡಿದ ಕೆಲಸ ಬಿಟ್ಟರೆ ಈ ವರೆಗೆ ಈ ಕ್ಷೇತ್ರದಲ್ಲಿ ಏನಾಗಿದೆ? ಈ ಗ್ರಂಥಗಳು ಕನ್ನಡಕ್ಕೆ ಬರಬೇಡವೇ? ವಸಾಹತುಶಾಹಿ ಕಾಲದ ಯುರೋಪಿನ ವಿದ್ವಾಂಸರು ಕರ್ನಾಟಕದ ಬಗ್ಗೆ ಬೇರೆ ಭಾಷೆಗಳಲ್ಲಿ ಬರೆದಿರುವ ಲೇಖನಗಳು, ಗ್ರಂಥಗಳು ಕನ್ನಡಕ್ಕೆ ಬರಬೇಕಿದೆ. 'ಮಧು ರಚನ್ನರ ಲೇಖನಗಳ'ನ್ನು ಪ್ರಕಟಿಸಿರುವಂತೆ ಇತರ ಹಲವಾರು ಲೇಖಕರ ಅಪರೂಪದ ಲೇಖನಗಳ ಸಂಗ್ರಹಗಳು ಪ್ರಕಟವಾಗಬೇಕಿವೆ. 'ಲೋಕಾಯತ' (ದೇವಿಪ್ರಸಾದ ಛಟೋಪಾಧ್ಯಾಯ); ದಿ ಫಂಡಾಮೆಂಟಲ್ಸ್ ಆಫ್ ರಿಲಿಜಿಯಸ್ ಲೈಫ್ (ಡರ್‌ಕ್ಯಾಂ), 'ಸ್ಟಡೀಸ್ ಇನ್ ತಂತ್ರಾಸ್ (ಭಾಗ್ಚಿ), 'ವೈಷ್ಣವಿಸಂ, ಶೈವಿಸಂ ಎಂಡ್ ಮೈ ನರ್ ರಿಲಿಜಿಯಸ್ ಸಿಸ್ಟಮ್ಸ್' (ಭಂಡಾರ್ಕರ), 'ದಿ ಮದರ್ಸ್' (ಬ್ರಿಫಾಲ್ಟ), 'ದಿ ಹಿಸ್ಟರಿ ಆಫ್ ಇಂಡಿಯನ್ ಫಿಲಾಸಫಿ' (ದಾಸಗುಪ್ತಾ) 'ಮದರ್ ರೈಟ್ ಇನ್ ಇಂಡಿಯಾ' (ಎಹರೆನೆಫೆಲ್ಸ), 'ಮೊಹೆಂಜೊದರೋ ಎಂಡ್ ದಿ ಇಂಡಸ್ ಸಿವಿಲಿಜೇಶನ್'(ಮಾರ್ಶಲಿ), 'ದಿ ತೋಡಾಸ್' (ರಿವರ್ಸ) ಮುಂತಾದ ಅನೇಕ ಗ್ರಂಥಗಳು 'ಕನ್ನಡ'ದ ಅಧ್ಯಯನಕ್ಕೆ ಅಗತ್ಯವಲ್ಲವೇ? ಇವು ಅನುವಾದವಾಗಬೇಡವೇ? ಸಂಸ್ಕೃತ, ತಮಿಳು,

ತೆಲುಗು ಮೊದಲಾದ ಭಾಷೆಗಳಲ್ಲಿರುವ ಸಹಾಯಕ ಗ್ರಂಥಗಳು ಕನ್ನಡಕ್ಕೆ ಬರ ಬೇಡವೇ? 'ಸಿದ್ಧ ಅಧ್ಯಯನ ಮಾದರಿಗಳನ್ನು' ನಿರಾಕರಿಸಿ, 'ಹೊಸ ಸಂಶೋಧನ ವಿಧಾನಗಳು' ಹುಟ್ಟಬೇಕೆನ್ನುವುದು ಕಂಬಾರರ ಆಶಯ. ಹೊಸ ಮಾದರಿ, ವಿಧಾನಗಳು ಹುಟ್ಟಬೇಕಾದರೆ ಹಳೆಯ ಮಾದರಿ, ವಿಧಾನಗಳ ಕನಿಷ್ಠ ಪರಿಚಯವಾದರೂ ಬೇಡವೇ? ಹಳೆಯ ಮಾದರಿ, ವಿಧಾನಗಳು ಸಾರಾಸಗಟಾಗಿ ತಿರಸ್ಕೃತಾರ್ಹವೇ?

ತಮಿಳು, ತೆಲುಗು, ಮಲಿಯಾಳಿ ಜನ ಭಾಷೆ, ಸಂಸ್ಕೃತಿಯ ಜತೆ; ಕನ್ನಡ ಜನ, ಭಾಷೆ, ಸಂಸ್ಕೃತಿಗಳ ತೌಲನಿಕ ಅಧ್ಯಯನದ ಬಗ್ಗೆ ವಿ.ವಿ. ಯಾವ ಯೋಜನೆ ಹಾಕಿಕೊಂಡಿದೆ? 'ಹೆಜ್ಜೆಗುರುತು' (೧೯೯೩) ಹೇಳಿಕೊಂಡಿರುವ 'ಕೃಷಿಪದಕೋಶ', 'ವಿಶ್ವಕರ್ಮ ಪಂಚಾಳರ ವೃತ್ತಿ ಪದಕೋಶ', 'ಪುರಾಣಕೋಶ', 'ಕರ್ನಾಟಕ ಕೋಶ', 'ಕಾವ್ಯಶಾಸ್ತ್ರ ಪಾರಿಭಾಷಿಕ ಕೋಶ', 'ಕರ್ನಾಟಕ ಗ್ರಾಮದೇವತೆಗಳ ವಿಶ್ವಕೋಶ', 'ತೋಂಡಿ ಮತ್ತು ಬರಹದ ಸಾಹಿತ್ಯ', 'ಕನ್ನಡ ಸಂಸ್ಕೃತಿಯ ಬಹುಮುಖಿ ಅಸ್ತಿತ್ವ ಮತ್ತು ಏಕಮುಖಿ ಮಂಡನೆ', 'ಸಾಹಿತ್ಯ ಮಾರ್ಗ', 'ಹಂಪಿ ಜಾನಪದ', 'ಅಮುಕ್ತ ಮೌಲ್ಯದ', 'ಸಾಹಿತ್ಯ ಮತ್ತು ಪರಿಸರ', 'ಜನಪದ ಕಲೆಗಳ ಆಧುನಿಕ ಸ್ಪಂದನ' ಎಂಬ ಅಧ್ಯಯನಗಳು, ಯೋಜನೆಗಳು, ಪೂರ್ಣ ಗೊಂಡುವೇ, ಗ್ರಂಥಗಳು ಪ್ರಕಟವಾದುವೇ? ಸುಧಾ, ಕರ್ಮವೀರ, ದಿಕ್ಸೂಚಿಗಳಂತೆ 'ವಿಜ್ಞಾನ ಸಂಗಾತಿ' ಜನಪ್ರಿಯವೇಕಾಗಲಿಲ್ಲ? ಒಂದೇ ವರ್ಷದ ಅರೆಕರ್ನಾಟಕದ ಪ್ರಯೋಗವಾಗಿ ನಿಂತುಹೋಗಿರುವ 'ರಾಜ್ಯೋತ್ಸವ-ಜ್ಞಾನೋತ್ಸವ'ದ ಗತಿಯೇನಾಯಿತು? 'ವಿಶ್ವದ ಎಲ್ಲ ಜ್ಞಾನ ಕನ್ನಡದ ಮುಖಾಂತರ ದೊರೆಯುವುದು', 'ಕನ್ನಡದ ತಿಳಿವಳಿಕೆ ಜಗತ್ತಿನ ಗಮನಕ್ಕೆ ತರುವ ಧ್ಯೇಯೋದ್ದೇಶ ('ಹೆಜ್ಜೆಗುರುತು') ಎಷ್ಟು ಫಲಪ್ರದವಾಗಿದೆ? ಈ ಎಲ್ಲ ಪ್ರಶ್ನೆಗಳು ಸಾರ್ವಜನಿಕರ ಚರ್ಚೆಯ ವಿಷಯವಾಗಬೇಕಿದೆ. 'ಕನ್ನಡ ಅಭಿವೃದ್ಧಿ ಪ್ರಾಧಿಕಾರ'ವಾದರೂ ನಾಡಿನ ಎಲ್ಲೆಡೆ ಕ.ವಿ.ವಿ.ದ 'ಶೋಧನೆ-ಸಾಧನೆ'ಗಳ ಕುರಿತು ಚರ್ಚಾಗೋಷ್ಠಿ, ವಿಚಾರ ಸಂಕಿರಣಗಳನ್ನು ಏರ್ಪಡಿಸಬೇಕು. ವಿಶ್ವವಿದ್ಯಾಲಯ ತುಳಿದ ಹಾದಿಯ ತಪ್ಪು ಒಪ್ಪುಗಳು ಗುರುತಿಸಲ್ಪಟ್ಟು ಮುಂದಿಡಬೇಕಾದ ಹೆಜ್ಜೆಗೆ ಮಾರ್ಗದರ್ಶನ ಸಿಗುವಂತಾಗಬೇಕು. ಬಹುಶಃ ಬಹಳಷ್ಟು ಕನ್ನಡ ವಿದ್ವಾಂಸರು ಇನ್ನೂ ಕ.ವಿ.ವಿ.ಯನ್ನು 'ಸಂದರ್ಶಿಸುವ' ಭಾಗ್ಯ ಪಡೆದಿರಲಿಕ್ಕಿಲ್ಲ. ಕೊನೇಪಕ್ಷ ನಾಡಿನೆಲ್ಲೆಡೆಯ ವಿದ್ಯಾವಂತ ಕನ್ನಡಿಗರು, ಸಂಘ ಸಂಸ್ಥೆಗಳು ವಿದ್ವಾಂಸರು ಮುಕ್ತ ಚರ್ಚೆಯಲ್ಲಿ ತೊಡಗಿಕೊಳ್ಳದಿದ್ದರೆ ಕ.ವಿ.ವಿ.ಯನ್ನು ನಿಜವಾದ ಕಾಡಿನಲ್ಲಿ ಬಿಟ್ಟಂತಾಗುತ್ತದೆ. ಹಾಗೆ ನೋಡಿದರೆ ಕನ್ನಡ ವಿ.ವಿ.ಯೇ ನಾಡಿನ ಜನತೆಯೆದುರು ಮುಕ್ತವಾಗಿ ತೆರೆದುಕೊಳ್ಳಬೇಕಿದೆ. ●

# ನೀವೂ ಬರೆಯಿರಿ

### ಏನಂತೀರಿ?

ಜನರ ದೂರುಗಳ ಬಗ್ಗೆ ಅಧಿಕಾರಿಗಳ, ಜನ ಪ್ರತಿನಿಧಿಗಳ ಗಮನ ಸೆಳೆಯಲು ಈ ಅಂಕಣದಲ್ಲಿ ಸದವಕಾಶ. ಓದುಗರ ದೂರು ದುಮ್ಮಾನಗಳನ್ನು ಪ್ರಕಟಿಸುವುದಷ್ಟೇ ಅಲ್ಲ ಸಂಬಂಧಿಸಿದವರನ್ನು ಸಂಪರ್ಕಿಸಿ ಅವರ ಉತ್ತರವನ್ನು ಪ್ರಕಟಿಸಲು ಪ್ರಯತ್ನಿಸಲಾಗುವುದು.

### ಕ್ಲಾಸ್ ರೂಂ

ಶಾಲೆ ಕಾಲೇಜುಗಳ ತರಗತಿ ಕೋಣೆಗಳಲ್ಲಿ ತಮಾಷೆಗಳಿಗೆ ಬರವುಂಟೆ? ಇಂಥ ಪ್ರಸಂಗಗಳು ಹಲವೊಮ್ಮೆ ಗಂಭೀರ ತಿರುವು ಪಡೆಯುವುದು ಅಸಂಭವವಲ್ಲ. ಈ ಬಗ್ಗೆ ವಿದ್ಯಾರ್ಥಿಗಳು, ಶಿಕ್ಷಕ ವೃಂದದವರು ಬರೆಯಬಹುದು.

### ಚೌ ಚೌ

"ಚೌ ಚೌ" ಅಂಕಣದಲ್ಲಿ ಓದುಗರ ಬರಹಗಳಿಗೆ ವಿಪುಲ ಅವಕಾಶ. ನೀವು ನಿಮ್ಮ ಊರು, ಕೇರಿ, ಜಿಲ್ಲೆ; ಅಲ್ಲಿಯ ಜನ, ಊಟ, ತೊಡುಗೆ, ಕಲೆ, ಸಂಸ್ಕೃತಿ, ಭಾಷೆ ಹೀಗೆ ಯಾವುದರ ಕುರಿತಾದರೂ ಬರೆಯಬಹುದು. ಬರಹ ಚಿಕ್ಕದಿರಲಿ. ಮಾಹಿತಿ ತುಂಬಿರಲಿ.

### ಕಲ್ಲಿನ ಕಥೆ

ನಿಮ್ಮ ಭಾಗದಲ್ಲಿ ಮಂತ್ರಿಮಹೋದಯರು ಹಾಕಿದ ಅತಿ ಹಳೆಯ ಅಡಿಗಲ್ಲುಗಳು ಬೇಕಾದಷ್ಟಿರಬಹುದು. ಇಂಥ ಒಂದು ಕಾರ್ಯಗತವಾಗದ ಯೋಜನೆಯ ಮಹತ್ವ, ಅಡಿಗಲ್ಲು ಹಾಕಿದ ಮಹಾಶಯರ ಪಾತ್ರ, ಅದರ ಪ್ರಸಕ್ತ ಸ್ಥಿತಿ ಬಗ್ಗೆ ಚುಟುಕಾಗಿ ಬರೆಯಿರಿ.

### ನಮ್ಮ ಮನೆಯ ಬೆಳಕು

ಐದು ವರ್ಷದೊಳಗಿನ ಮಕ್ಕಳ ಹುಟ್ಟುಹಬ್ಬದ ಶುಭಾಶಯಗಳನ್ನು ಈ ಅಂಕಣದಲ್ಲಿ ಭಾವಚಿತ್ರದೊಂದಿಗೆ ಪ್ರಕಟಿಸಲಾಗುವುದು. ನಿಮ್ಮ ಮಗುವಿನ ಉತ್ತಮ ಗುಣಮಟ್ಟದ ಭಾವಚಿತ್ರ, ಹುಟ್ಟಿದ ದಿನಾಂಕ ಹಾಗೂ ತಂದೆ-ತಾಯಿಯರ ಹೆಸರು ಕಳಿಸಿಕೊಡಿ.

### ಮಾಡಿದ್ದು - ಮಾಡದ್ದು

ವಿವಿಧ ಸಂಘ ಸಂಸ್ಥೆಗಳಿಗೆ, ಪಂಚಾಯಿತಿಗಳಿಗೆ, ಲೋಕಸಭೆ, ವಿಧಾನ ಮಂಡಳಗಳಿಗೆ ಪ್ರತಿನಿಧಿಗಳನ್ನು ಆರಿಸಿ ಕಳಿಸುತ್ತೇವೆ. ಚುನಾವಣೆಗೆ ಸ್ಪರ್ಧಿಸಿದಾಗ ಅವರು ನೀಡಿದ ಆಶ್ವಾಸನೆಗಳು ಒಂದೆರಡಲ್ಲ! ಅವರು ಗೆದ್ದ ನಂತರ ಅವುಗಳನ್ನೆಲ್ಲಾ ಪಾಲಿಸುತ್ತಾರೆಯೇ? ಈ ಬಗ್ಗೆ ನಿಗಾ ಇಡುವುದಕ್ಕಾಗಿಯೇ ಈ ಅಂಕಣ. ನಿಮ್ಮ ಪ್ರತಿನಿಧಿ ಯಾವ ಸಮಯದಲ್ಲಿ ಯಾವ ಆಶ್ವಾಸನೆ ನೀಡಿದರು? ಅದನ್ನು ಈಡೇರಿಸಿದರೇ? ಇಲ್ಲವೇ? ಈ ಬಗ್ಗೆ ಚಿಕ್ಕದಾಗಿ ಬರೆಯಿರಿ.

### ಅಡುಗೆ ಮನೆ

ಇದು ಮಹಿಳೆಯರ ಅಂಕಣ. ಮಹಿಳೆಯರು ತಮಗೆ ಗೊತ್ತಿರುವ ಅಡುಗೆಗಳ ಬಗ್ಗೆ ಅವುಗಳನ್ನು ತಯಾರಿಸುವ ವಿಧಾನದ ಬಗ್ಗೆ ಸಂಕ್ಷಿಪ್ತವಾಗಿ ಬರೆಯಬಹುದು. ಬರಹದ ಜತೆಗೆ ತಮ್ಮದೊಂದು ಭಾವಚಿತ್ರ ಕಳಿಸಿ.

ವಿಳಾಸ:

**ಬಿಸಿಲ ಬದುಕು** ಮಾಸ ಪತ್ರಿಕೆ

473, 1ನೇ ಕ್ರಾಸ್, 1ನೇ ಬ್ಲಾಕ್, 3ನೇ ಸ್ಟೇಜ್, ವಾಟರ್ ಟ್ಯಾಂಕ್ ಬಸ್‌ಸ್ಟಾಪ್ ಬಳಿ,
ಬಸವೇಶ್ವರ ನಗರ, ಬೆಂಗಳೂರು-560 079 ಅಂಚೆ ಪೆಟ್ಟಿಗೆ: 7951
ದೂರವಾಣಿ : 080-3358198

# ಸುನಿಲಕುಮಾರ್ ದೇಸಾಯಿ ಯಶಸ್ಸಿನ ರಹಸ್ಯ

**ಹದಿನೈದು ವರ್ಷಗಳ ಹಿಂದೆ ದೂರದ ಬಿಜಾಪುರ ಜಿಲ್ಲೆಯ ಹಳ್ಳಿಯೊಂದರಿಂದ ಬೆಂಗಳೂರಿಗೆ ಬಂದು ಬಿದ್ದ ಸುನಿಲಕುಮಾರ್ ದೇಸಾಯಿ ಎಂಬ ಹೈದ ಇಂದು ಸಿನಿಮಾ ಜಗತ್ತಿನಲ್ಲಿ ಸ್ಟಾರ್ ನಿರ್ದೇಶಕರಾಗಿ ಚಿಗಿತು ನಿಂತಿದ್ದಾರೆ. ಅವರು ಸವೆಸಿದ ಹಾದಿ ಎಂತಹದು? ಅವರ ಯಶಸ್ಸಿನ ಹಿಂದೆ ಏನಿದೆ? ಯಾರಿದ್ದಾರೆ?**

ಸಿನಿಮಾ ಎಂಬ ಮಾಯೆಯ ಬಗ್ಗೆ ಉತ್ತರ ಕರ್ನಾಟಕದ ಮಂದಿಗಿರುವಷ್ಟು ಆಕರ್ಷಣೆ, ಆಸಕ್ತಿ ಇನ್ಯಾರಿಗೂ ಇರಲಾರದು. ಇದಕ್ಕೆ ಮುಖ್ಯ ಕಾರಣವೆಂದರೆ ಹೆಚ್ಚಿನ ಕನ್ನಡ ಚಿತ್ರಗಳ ಚಿತ್ರೀಕರಣ ದಕ್ಷಿಣ ಕರ್ನಾಟಕಕ್ಕೇ ಸೀಮಿತವಾಗಿರುವುದು. ತೆರೆಯ ಮೇಲೆ ದೇವಾನುದೇವತೆಗಳಾಗಿ ಮೆರೆಯುವ ನಟ-ನಟಿಯರ ಅಸಲಿ ರೂಪದ ದರ್ಶನಭಾಗ್ಯ ಉ.ಕರ್ನಾಟಕದ ಜನರಿಗೆ ದಕ್ಕುವುದೇ ವಿರಳ. ಹೀಗಾಗಿ ಬೆಂಗಳೂರಿಗೆ ಪಿಕ್‌ನಿಕ್‌ಗೆ ಬರುವ ಆ ಭಾಗದ ಹುಡುಗರ ಕಾರ್ಯಕ್ರಮದ ಅಜೆಂಡಾದಲ್ಲಿ ಸ್ಟುಡಿಯೋ ಭೇಟಿಯೂ ಜಮೆಯಾಗಿರುತ್ತದೆ. ಆದರೆ ಸರಿಸುಮಾರು ೧೫ ವರ್ಷಗಳ ಹಿಂದೆ, ದೂರದ ಬಿಜಾಪುರದಿಂದ, ಹೆಗಲಿಗೊಂದು ಚೀಲ ತಗುಲಿ ಹಾಕಿಕೊಂಡು ಬೆಂಗಳೂರಿಗೆ ಬಂದ ೨೨ ವರ್ಷದ ಯುವಕನ ಕಣ್ಣಲ್ಲಿದ್ದದ್ದು ಒಂದೇ ಕನಸು. ತಾನೊಬ್ಬ ನಟನಾಗಬೇಕು. ಅಂದ ಹಾಗೆ ಆತನ ಹೆಸರು ಸುನಿಲಕುಮಾರ್ ದೇಸಾಯಿ. ಅಪರಿಚಿತರನ್ನು ಕಂಡಾಕ್ಷಣ ಚುರುಕಾಗುವ ಗಾಂಧಿನಗರದ ಕಣ್ಣಿಗೆ ಈತ ಕಂಡಿದ್ದು ಗೋಸಾಯಿಯಂತೆ.

ಬೆಂಗಳೂರಲ್ಲಿ ಮೆಜೆಸ್ಟಿಕ್ ಬಿಟ್ಟರೆ ಪಿಕ್‌ಪಾಕೆಟ್‌ಗೆ ಕುಖ್ಯಾತವಾಗಿರುವ ಜಾಗವೆಂದರೆ ಗಾಂಧಿನಗರ! ಮೆಜೆಸ್ಟಿಕ್‌ನಲ್ಲಿ ನಿಮ್ಮ ಪರ್ಸ್ ಮಾಯವಾಗಿದ್ದು ಗೊತ್ತೇ ಆಗುವುದಿಲ್ಲ, ಗಾಂಧಿ ನಗರದಲ್ಲಿ ಗೊತ್ತಾದರೂ ಏನು ಮಾಡುವಂತಿರುವುದಿಲ್ಲ. ಸುನಿಲಕುಮಾರ್ ದೇಸಾಯಿ



ಜೋಬಲ್ಲಿ ಎರಡು ವರ್ಷದ ಬದುಕಿಗಾಗುವಷ್ಟು ರೊಕ್ಕವಿತ್ತು. ಸಿನಿಮಾ ನಟನಾಗಬೇಕಾದರೆ ಹಣಬೇಕು ಎನ್ನುವ ದೂರದೃಷ್ಟಿಯಿಂದ ಮನೆಯಿಂದ, ಸ್ನೇಹಿತರ ಉಳಿತಾಯ ನಿಧಿಯಿಂದ ಒಂದಿಷ್ಟು ಜಮಾಯಿಸಿಕೊಂಡು ಬಂದಿದ್ದರು. ಇಂಥವರಿಗಾಗಿಯೇ ಕಾದಿರುವ ಜನ ದೇಸಾಯಿಯನ್ನು ಕ್ಷಣಾರ್ಧದಲ್ಲಿ ಯಾಮಾರಿಸಿದರು. ಹೀರೋ ಮಾಡ್ತೀವಿ ಅಂತ ನಕಲಿ ವಚನ ನೀಡಿ, ಚಿತ್ರದ ಹಾಡುಗಳ ಧ್ವನಿಮುದ್ರಣದ ನಾಟಕವಾಡಿ, ಒಂದು ಶುಭ ಮುಂಜಾನೆ ಕೈ ಎತ್ತಿದರು. ಹೀಗೆ ಬಿಜಾಪುರದ ಸುಡು ಬಿಸಿಲಲ್ಲಿ ಸ್ನಾನ ಮಾಡುತ್ತಾ ತನ್ನ ಪಾಡಿಗೆ ಕನಸು ಕಾಣುತ್ತಾ ಕುಳಿತಿದ್ದ ಬಯಲುಸೀಮೆಯ ಹುಡುಗನಿಗೆ ಬೆಂಗಳೂರೆಂಬ ಮಹಾ ನಗರಿಯಲ್ಲಿ ಬದುಕಿನ ಕ್ರೌರ್ಯದ ಜೊತೆ ಮುಲಾಖಾತ್ ಆಗಿ ಹೋಯಿತು.

ಇಲ್ಲಿರಲಾರೆ ಅಲ್ಲಿ ಹೋಗಲಾರೆ ಎಂಬ ಪರಿಸ್ಥಿತಿಯಲ್ಲಿ ದೇಸಾಯಿಯ ಕಣ್ಣಮುಂದೆ ಇದ್ದದ್ದು ಒಂದೇ ಹಾದಿ. ಅದೇ ಅನುಭವದ ಸಂಪಾದನೆ. 'ಅನುಭವ' ಚಿತ್ರದಲ್ಲಿ ಸಹನಿರ್ದೇಶಕ-ಕಂ-ಕಲಾ ನಿರ್ದೇಶಕನಾಗಿ ಈತ ಸೇರಿಕೊಂಡಿದ್ದು ಇದೇ ಕಾರಣಕ್ಕೆ. ಚಿತ್ರವೊಂದರ ದೃಶ್ಯಕ್ಕೆ ಯಾವ ಯಾವ ಪರಿಕರಗಳನ್ನು ಹಿನ್ನೆಲೆಯಲ್ಲಿರಿಸಬೇಕು ಎನ್ನುವುದನ್ನು ನಿರ್ಧರಿಸುವ ಕೆಲಸ ಕಲಾ ನಿರ್ದೇಶಕನದ್ದು. ಹೇಳಿಕೇಳಿ ದೇಸಾಯಿ ಮನೆತನಕ್ಕೆ ಸೇರಿದಾತ. ಬಿಜಾಪುರದ ವಾಡೆ ಮನೆ, ಹಳೇ ಕಾಲದ ಕಂಬ, ಕಿಟಕಿ ಇತ್ಯಾದಿಗಳ ಪರಿಚಯ

ತಾನಾಗಿಯೇ ಒದಗಿಬಂದಿತ್ತು. ಹೀಗೇ ದೇಸಾಯಿಯ ಒಳಗೊಬ್ಬ ಕಲಾ ನಿರ್ದೇಶಕ ಅವರಿಗರಿವಿಲ್ಲದಂತೆಯೇ ಕುಳಿತಿದ್ದ. ಕಾಶಿನಾಥ್ ಗರಡಿಯಿಂದ ದೇಸಾಯಿ ನೇರವಾಗಿ ಜಿಗಿದದ್ದು ಸುರೇಶ್ ಹೆಬ್ಳೀಕರ್ ಕೇರಾಫ್‌ಗೆ. ಹೆಬ್ಳಿಕರ್ ಕೂಡಾ ಉತ್ತರ ಕರ್ನಾಟಕದವರೇ ಆಗಿದ್ದರಿಂದ, ಇಬ್ಬರ ಮೆಂಟಾಲಿಟಿ ಸಲೀಸಾಗಿ ಹೊಂದಿಕೊಂಡಿತು.

ಅಂದಿನ ದಿನಗಳಲ್ಲಿ ದೇಸಾಯಿಯ ಜೊತೆಗಿದ್ದವರು ಅವರ ದಿನಚರಿಯನ್ನು ಇಂದಿಗೂ ನೆನೆಸಿಕೊಳ್ಳುತ್ತಾರೆ. ಮುಂಜಾನೆಯಿಂದ ಮುಸ್ಸಂಜೆ ತನಕ ಹೆಬ್ಳಿಕರ್ ನಿರ್ದೇಶನದ ಚಿತ್ರಗಳಲ್ಲಿ ಎಲ್ಲಾ ಥರದ ಕೆಲಸ ಮಾಡೋದು; ಅನಂತರ ಹೆಬ್ಳೀಕರ್ ಮನೆಯಲ್ಲೇ ಕುಳಿತು ಅವರ ಭಾಷಣ ಕೇಳುವುದು; ರಾತ್ರಿ ಊಟಕ್ಕಾಗಿ ಗೆಳೆಯರ ಮನೆ ಬಾಗಿಲು ತಟ್ಟುವುದು. ತುತ್ತು ಬಾಯಿಗಿಡುವಾಗಲೂ ಸಿನಿಮಾದ್ದೇ ಧ್ಯಾನ. ಯಾವುದೇ ವಸ್ತು ಕಣ್ಣಿಗೆ ಬಿದ್ದರೂ ಅದನ್ನು ಕ್ಯಾಮರಾ ಆ್ಯಂಗಲ್‌ನಲ್ಲೇ ನೋಡುತ್ತಾ, ಚಿತ್ರ-ವಿಚಿತ್ರ ಹಾವಭಾವಗಳೊಂದಿಗೆ ತನ್ನಷ್ಟಕ್ಕೆ ತಾನೇ ಮಾತಾಡಿಕೊಳ್ಳುತ್ತಿದ್ದ. ದೇಸಾಯಿಯನ್ನು ನೋಡಿ ಇತರರು ಬೆರಗಾಗುತ್ತಿದ್ದರು. ಅಕ್ಕ-ಪಕ್ಕದಲ್ಲಿದ್ದವರ ಜೊತೆ ಇವರು ಮಾತಾಡುವುದೇ ವಿರಳ. ಅಪ್ಪಿ-ತಪ್ಪಿ ಬಾಯ್ಬಿಟ್ಟರೂ ಅದು ಸಿನಿಮಾ ಭಾಷೆಯಾಗಿರುತ್ತಿತ್ತು. ದೇಸೀ ಹಿಂದಿಯಲ್ಲಿ ಯಾವುದೋ ಹೊಸ ಸಿನಿಮಾದ ತಾಂತ್ರಿಕ ಶ್ರೀಮಂತಿಕೆಯನ್ನು ವಿವರಿಸುವ ಚಟವೂ ಇತ್ತು. ಸ್ಫೂರ್ತಿ ಬಂದರೆ ಹಾಡು ಗುನುಗುತ್ತಿದ್ದ ದೇಸಾಯಿ ಇತರರಿಗೆಂದೂ ಕಿರಿಕಿರಿಯಾಗಿರಲೇ ಇಲ್ಲ. ಅದೇ ದೇಸಾಯಿ 'ತರ್ಕ' ಚಿತ್ರಕ್ಕೆ ಕೈ ಹಾಕುವ ಹೊತ್ತಿಗೆ ಅವರ ಕೈ ಖಾಲಿಯಾಗಿಯೇ ಇತ್ತು. ಆದರೆ ಸಿನಿಮಾ ಮಟ್ಟಿಗೆ ಆತನದ್ದೇ ವಿಚಿತ್ರ ತರ್ಕ. ಅದ್ಹೇಗೋ ಹಣ ಹೊಂದಿಕೆಯಾಯಿತು. ಭರವಸೆಯ ನಿರ್ದೇಶಕ ಎಂಬ ಬಿರುದೂ ಬಂತು. ಐದಡಿ ಎತ್ತರದ, ಕಾಶ್ಮೀರಿ ಆ್ಯಪಲ್ ಬಣ್ಣದ ದೇಸಾಯಿ ನಟನಾಗದೇ ಇದ್ದುದಕ್ಕೆ ಅನಂತರ ಎಂದೂ ಪಶ್ಚಾತಾಪ ಪಡಲಿಲ್ಲ. ಬಂಗಲೆಯ ಕನಸೂ ಕಾಣಲಿಲ್ಲ. ಜೇಬಲ್ಲಿ ಹಣವಿದ್ದಾಗ ಕಂಡವರನ್ನೆಲ್ಲಾ ಕರೆದು ಪಾರ್ಟಿಕೊಟ್ಟರು, ಹಣ ಇಲ್ಲದಿದ್ದಾಗ ನಿಸ್ಸಂಕೋಚದಿಂದ ಪೆಟ್ರೋಲಿಗೂ ಸಾಲ ಕೇಳಿದರು. ಇದೇ ಸಾಲ ಬೆಟ್ಟದಂತೆ ತಲೆಯ ಮೇಲೆ ಕುಳಿತಿದ್ದು 'ಬೆಳದಿಂಗಳ ಬಾಲೆ' ಚಿತ್ರ ಬಿಡುಗಡೆಯಾದ ನಂತರ. ಕನ್ನಡ ಚಿತ್ರರಂಗದಲ್ಲಿ ಹೊಸ ಹಾದಿಯನ್ನು ಕೊರೆದ ಈ ಚಿತ್ರ ಇಂದಿಗೂ ದುಃಸ್ವಪ್ನದಂತೆ ದೇಸಾಯಿಯನ್ನು ಕಾಡುತ್ತಿದೆ. ಸಿನಿಮಾವನ್ನು ಮನದನ್ನೆಯಂತೆ ಪ್ರೀತಿಸಿದ ದೇಸಾಯಿ ಅದಕ್ಕಾಗಿ ದುಬಾರಿ ಬೆಲೆಯನ್ನೇ ತೆರಬೇಕಾಯಿತು. ವೃಥಾ ಟೆನ್ಶನ್ ಮಾಡಿಕೊಳ್ಳುವ ಪ್ರವೃತ್ತಿಯಿಂದಾಗಿ ಹೃದಯ ಒಮ್ಮೆ ಆಘಾತವನ್ನು ಅನುಭವಿಸಿದೆ.




'ತರ್ಕ' ದಿಂದ 'ನಮ್ಮೂರ ಮಂದಾರ ಹೂವೆ' ತನಕ ದೇಸಾಯಿ ಬೆಳವಣಿಗೆಯನ್ನು ಗಮನಿಸಿದವರಿಗೆ, ಆತ ಆರಿಸಿಕೊಂಡ ಕಥಾ ವಸ್ತುವನ್ನು ಗಮನಿಸಿದವರಿಗೆ ಇವರ ಸಾಮರ್ಥ್ಯದ ಅರಿವಾಗುತ್ತದೆ. ತರ್ಕ, ಉತ್ಕರ್ಷ ಚಿತ್ರಗಳಲ್ಲಿ ಉದ್ದೇಶಪೂರ್ವಕವಾಗಿ ಒರಟು ನಿರೂಪಣೆಯನ್ನು ನೆಚ್ಚಿಕೊಂಡ ಇವರು ನಿಷ್ಕರ್ಷ, ಸಂಘರ್ಷಗಳಲ್ಲಿ ಪಕ್ಕಾ ಮೆಕಾನಿಕ್‌ನಂತೆ ತಾಂತ್ರಿಕ ವಿವರಗಳ ಬಗ್ಗೆ ಕಾಳಜಿ ತೋರಿದ್ದಾರೆ. ಬೆಳದಿಂಗಳ ಬಾಲೆ ಹಾಗೂ ನಮ್ಮೂರ ಮಂದಾರ ಹೂವೆ ಚಿತ್ರಗಳಲ್ಲಿ ಮಲ್ಲಿಗೆಯನ್ನು ನಾಚಿಸಬಲ್ಲ ನಯವಂತಿಕೆ. ಸಿನಿಮಾ ಮಾಧ್ಯಮದ ಮೇಲೆ ಈತನಿಗಿರುವ ಬಿಗಿಹಿಡಿತಕ್ಕೆ ಇದಿಷ್ಟು ಸಾಕ್ಷಿಯಾಗಬಹುದು. ವಿಷ್ಣುವರ್ಧನ್‌ರಂಥ ನಟರೇ ದೇಸಾಯಿ ಕೆಲಸದ ವೈಖರಿಗೆ ಬೆರಗಾಗಿ, ತನ್ನನ್ನು ತಾನೇ ಅವರಿಗೆ ಒಪ್ಪಿಸಿದ್ದುಂಟು.

'ದೇಸಾಯಿ ಸಿನಿಮಾ ಹೊರತಾಗಿ ಬೇರೇನನ್ನು ಯೋಚಿಸುವುದಿಲ್ಲ. ಮನೆ, ಮಠ, ಪತ್ನಿ, ಮಕ್ಕಳು ಇತ್ಯಾದಿ ಜವಾಬ್ದಾರಿಗಳು ಆತನಿಗಿಲ್ಲ ಹಾಗಾಗಿ ಕಾಂಪ್ರೋಮೈಸ್ ಎಂಬ ಪದಕ್ಕೆ ಆತನ ನಿಘಂಟಲ್ಲಿ ಜಾಗವಿಲ್ಲ' ಎನ್ನುತ್ತಾರೆ ಅವರ ಸಮಕಾಲೀನ ನಿರ್ದೇಶಕರೊಬ್ಬರು. ಸಿನಿಮಾವನ್ನೇ ಉಸಿರಾಡುವ ನಿರ್ದೇಶಕರು ಕನ್ನಡದಲ್ಲಿ ವಿರಳ. ಅದಕ್ಕೇ ದೇಸಾಯಿಯ ಪ್ರತಿ ನಡಿಗೆಯೂ ಕುತೂಹಲ ಮೂಡಿಸುತ್ತದೆ. ಒಂದುಕಾಲದಲ್ಲಿ ಮೌನ ಮುನಿಯಾಗಿದ್ದ ಇವರು ಈಗ ಮಾತಿನ ಮಹತ್ವವನ್ನು ಹೇಳುವ 'ಪ್ರೇಮ ರಾಗ ಹಾಡು ಗೆಳತಿ' ಚಿತ್ರದ ನಿರ್ದೇಶಕ. ಬಯಲು ಸೀಮೆಯ ಹುಡುಗ ಈಗ ಮಲೆನಾಡ ಬದುಕಿನ ಸೂಕ್ಷ್ಮತೆ, ಅಂದ ಚೆಂದಗಳನ್ನು ಹಿಡಿದಿಡುವ ಕಾಯಕದಲ್ಲಿ ಮಗ್ನ.

ಒಂದಲ್ಲ ಒಂದು ದಿನ ದೇಸಾಯಿ ತನ್ನ ಬೇರಿನ ಬಗ್ಗೆ, ಬಾಲ್ಯದ ಬಗ್ಗೆ, ಬಿಜಾಪುರದ ಬಿಸಿಲ ಬದುಕಿನ ಬಗ್ಗೆ ಸಿನಿಮಾ ನಿರ್ದೇಶಿಸುವಂತಾದರೆ ಅದು ನಿಜಕ್ಕೂ ವಸ್ತುನಿಷ್ಠವಾಗಿ ಮೂಡಿಬರಬಹುದು.

○ ಕೇಶವ

# ಬೆಳ್ಳಿ ತೆರೆಯ ಕಿರಿಯ ತಾರೆಗಳು

  





ಆ ಪುಟ್ಟ ಹುಡುಗಿ ಪಟಾಕಿಯಂತೆ. ಆದರೆ ಆತ ಮೌನಿ. ಇವರಿಬ್ಬರೂ ಅಣ್ಣ ತಂಗಿ. ಪಟಾಕಿಯಂತೆ ಪಟಪಟನೆ ಮಾತನಾಡುವ ಹುಡುಗಿ ಸುಚೇತಾ. ಇನ್ನು ಈಕೆಯ ಅಣ್ಣ ಸುಖೇಶ್ ಈಗಾಗಲೇ ದೂರದರ್ಶನ ಹಾಗೂ ಸಿನಿಮಾಗಳಲ್ಲಿ ನಟಿಸುವ ಮೂಲಕ ಹೆಸರು ಮಾಡಿರುವ ಅಣ್ಣ-ತಂಗಿಯರ ಜೋಡಿ ಜನರನ್ನು ಮೋಡಿ ಮಾಡಿದೆ.

ಹದಿಮೂರು ವರ್ಷದ ಸುಖೇಶ್ ಹಾಗೂ ಹನ್ನೊಂದು ವರ್ಷದ ಸುಚೇತಾ ವಯಸ್ಸಿನಲ್ಲಿ ಚಿಕ್ಕವರು. ಆದರೆ ವರ್ತನೆ, ಮಾತು, ಜಾಣ್ಮೆ ಎಲ್ಲದರಲ್ಲೂ ದೊಡ್ಡವರು. ಈಗಾಗಲೇ ಸಿನಿಮಾ ಹಾಗೂ ದೂರದರ್ಶನ ವಲಯದಲ್ಲಿ 'ಜೂನಿಯರ್ ಶ್ರುತಿ' ಎಂದೇ ಕರೆಸಿಕೊಳ್ಳುತ್ತಿರುವ ಸುಚೇತಾ ಮಾತಾಡಿಸಿದರೆ ಸಾಕು ತನ್ನ ಎಲ್ಲವನ್ನೂ ಹೇಳಿಕೊಳ್ಳುತ್ತಾಳೆ. ಇದಕ್ಕೂ ಮುನ್ನ ತನ್ನ ಅಣ್ಣನ ಬಯೋಡಾಟಾ ಜೊತೆಗೆ ತನ್ನದು ಸೇರಿಸಿ ನಮ್ಮ ಕೈಲಿಡುತ್ತಾಳೆ.

ನೀವು ಇವರ ಬಯೋಡಾಟಾ ನೋಡಿದರೆ ಸಾಕು. ನೀವು ಬೇರೇನೂ ವಿವರ ಬಯಸಲಾರಿರಿ. ಅಷ್ಟೊಂದು ವಿವರ. ಅಷ್ಟೊಂದು ಸಾಧನೆ ಇಬ್ಬರದು. ರಾಶಿಗಟ್ಟಲೆ ಪಡೆದ ಪ್ರಶಸ್ತಿ ಪತ್ರಗಳು, ಸಾಲಾಗಿ ಜೋಡಿಸಿಟ್ಟ ಪ್ರಶಸ್ತಿ ಫಲಕಗಳು. ಹೀಗೆ ಕಿರಿಯ ವಯಸ್ಸಿನಲ್ಲೇ ಹಿರಿದನ್ನು ಸಾಧಿಸಿದ

ಹೆಗ್ಗಳಿಕೆ ಈ ಮಕ್ಕಳದು.

ಇವರಿಬ್ಬರೊಂದಿಗೆ ಹೆತ್ತವರಾದ ಪಿ.ಎಂ.ಶಿವಮೂರ್ತಿ ಹಾಗೂ ಎಂ.ಡಿ. ಶಕುಂತಲಾ ಶೂಟಿಂಗ್‌ಗೆ ಹೋದಾಗ ನಟಿಸಿದ್ದೂ ಉಂಟು. ಜೊತೆಗೆ ಸಮಾರಂಭವೊಂದರಲ್ಲಿ ಸುಚೇತಾ ಮುಖ್ಯ ಅತಿಥಿಯಾಗಿದ್ದರೆ, ತಾಯಿ ಶಕುಂತಲಾ ಇವಳಿಂದ ಪ್ರಶಸ್ತಿ ಪತ್ರ ಪಡೆದದ್ದುಂಟು. ಹೀಗೆ ಇಂಥ ಘಟನೆಗಳು ಎಪಿಸೋಡ್‌ನಂತೆ ಸಾಕಷ್ಟಿವೆ.

ಸುಚೇತಾ ಈಗಾಗಲೇ ಭರತನಾಟ್ಯ, ಡ್ರಾಯಿಂಗ್, ಪೇಂಟಿಂಗ್, ಜನಪದ ನೃತ್ಯ, ಚರ್ಚಾ ಸ್ಪರ್ಧೆ, ವಾಲಿಬಾಲ್, ಚೆಸ್, ಕೇರಂ, ಅಲ್ಲದೆ ಪುಟ್ಟ ಕವನಗಳನ್ನು ರಚಿಸಿ ವಾಚಿಸುತ್ತಾಳೆ. ನೋಡುಗರಿಗೆ ತಾಳ್ಮೆಯಿದ್ದರೆ ನೃತ್ಯವನ್ನೂ ಮಾಡಿ ತೋರಿಸುತ್ತಾಳೆ.

ರಾಜ್ಯಮಟ್ಟದ ನಾಟಕ, ನೃತ್ಯ ಸ್ಪರ್ಧೆಗಳಲ್ಲಿ ಪಾಲ್ಗೊಂಡು ಅನೇಕ ಪ್ರಶಸ್ತಿಗಳನ್ನು ಪಡೆದುಕೊಂಡಿರುವ ಈ ಅಣ್ಣ-ತಂಗಿಯರ ಜೋಡಿ ಬೀದಿ ನಾಟಕ, ರಂಗ ನಾಟಕ, ರೇಡಿಯೋ ನಾಟಕಗಳಲ್ಲೂ ಪಾಲ್ಗೊಂಡಿದ್ದಾರೆ. ದೂರದರ್ಶನದ ಸಬೀನಾ, ಜಾಣ್ಮೆ ತಂದ ತಾಳ್ಮೆ, ಅದೃಷ್ಟದ ಹೋರಾಟ, ನಿಗೂಢ ಜಗತ್ತು, ಚಟಾಕಿ, ಪುಟಾಣಿಗಳ ಸಾಹಸ ಹೀಗೆ ಇದುವರೆಗೆ ನೂರಾರು ಧಾರಾವಾಹಿಗಳಲ್ಲಿ ನಟಿಸಿದ್ದಾರೆ. ಇವಲ್ಲದೆ ಜಾಹೀರಾತು, ಕಿರುಚಿತ್ರ, ಸಿನಿಮಾಕ್ಕೆ ಕಂಠದಾನ ಕೂಡಾ ನೀಡಿದ್ದಾರೆ. ಈಗಾಗಲೇ ಕ್ರೌರ್ಯ, ನಿರ್ಭಂಧ, ಕರಡಿಪುರ ಚಿತ್ರಗಳಲ್ಲಿ ನಟಿಸಿರುವ ಇವರು ಹಾಯ್ ಬೆಂಗಳೂರು ಹಾಗೂ ಮೊಮ್ಮಗ ಚಿತ್ರದಲ್ಲಿ ನಟಿಸುತ್ತಿದ್ದಾರೆ.

ರಾಜಾಜಿನಗರದ ವಿ.ವಿ.ಎಸ್.ಸರ್ದಾರ ಪಟೇಲ್ ಪ್ರೌಢಶಾಲೆಯಲ್ಲಿ ಓದುತ್ತಿರುವ ಸುಖೇಶ್ ಮತ್ತು ಸುಚೇತರ ಕನಸುಗಳಿಗೆ ಬರವಿಲ್ಲ. ಐ.ಎ.ಎಸ್. ಓದಬೇಕೆಂಬ ಹಂಬಲ ಸುಚೇತಾಳದು. ಖ್ಯಾತ ಕ್ರಿಕೆಟ್ ಪಟು ಆಗಬೇಕೆಂಬ ಆಸೆ ಸುಖೇಶನದು.

ಹೀಗೆ ದೂರದರ್ಶನ ಹಾಗೂ ಸಿನಿಮಾಗಳಲ್ಲಿ ಮಿಂಚುತ್ತಿರುವ ಈ ಅಣ್ಣ-ತಂಗಿಗೆ ಹೇಳಿಕೊಳ್ಳುವಂಥ ಸಿನಿಮಾ ಹಿನ್ನೆಲೆಯಿಲ್ಲ. ಹೆತ್ತವರೂ ರಂಗಭೂಮಿಯಲ್ಲಿ ಪಳಗಿದವರೇನಲ್ಲ. ಶಿವಮೂರ್ತಿ ಹಾವೇರಿ ತಾಲ್ಲೂಕಿನ ಕಾಟೇನಹಳ್ಳಿಯವರು. ಶಕುಂತಲಾ ಬಿಜಾಪುರ ಜಿಲ್ಲೆಯ ಮುಧೋಳದವರು. ಬಸವೇಶ್ವರನಗರದ ವಿ.ವಿ.ಎಸ್. ಕಾಲೇಜಿನಲ್ಲಿ ಗ್ರಂಥಪಾಲಕರಾಗಿದ್ದಾರೆ ಶಿವಮೂರ್ತಿ. ರಾಜಾಜಿನಗರದ ಇ.ಎಸ್.ಐ. ಆಸ್ಪತ್ರೆಯಲ್ಲಿ ಸ್ಟಾಫ್ ನರ್ಸ್ ಆಗಿದ್ದಾರೆ ಶಕುಂತಲಾ.

ಈ ಪುಟ್ಟ ಮಕ್ಕಳ ವಯಸ್ಸಿಗೆ ಮೀರಿದ ಸಾಧನೆ, ಕುಶಲತೆ ಕಂಡು ಖುಷಿಯಾಗುತ್ತದೆ. ಇವರು ಬರಿ ನಟನೆ, ಆಟ, ಓಟದಲ್ಲಷ್ಟೆ ಮುಂದು ಅಲ್ಲ ಓದುವುದರಲ್ಲೂ ಮುಂದು. ಪ್ರತಿ ವರ್ಷ ಐದು ರ್‍ಯಾಂಕ್‌ಗಳೊಳಗೆ ಪಾಸಾಗುತ್ತಾರೆ ಇಬ್ಬರು.

ಈ ಪ್ರಚಂಡ ಮಕ್ಕಳ ಕುರಿತು ಬರೆದಷ್ಟೂ ಕಡಿಮೆಯೆ.

●

| | |
|---|---|
| ಮೊದಲ ಬಹುಮಾನ | ರೂ. ೩೦೦/- |
| ಎರಡನೇ ಬಹುಮಾನ | ರೂ. ೨೦೦/- |
| ಸಮಾಧಾನಕರ ಬಹುಮಾನಗಳು (ಮೂರು) | ರೂ. ೧೦೦/- |

ವಿವರ :

- ಪಕ್ಕದಲ್ಲಿ ಕೇಳಿದ ಪ್ರಶ್ನೆಗಳಿಗೆ ಸರಿಯಾದ ಉತ್ತರವನ್ನು ಆಯಾ ಪ್ರಶ್ನೆಯ ಕೆಳಗೆ ನೀಡಲಾದ ಸ್ಥಳದಲ್ಲಿ ಬರೆಯಿರಿ.
- ಒಬ್ಬರು ಎಷ್ಟು ಪ್ರವೇಶ ಪತ್ರಗಳನ್ನಾದರೂ ಕಳಿಸಬಹುದು. ಆದರೆ ಪಕ್ಕದಲ್ಲಿರುವ ಪ್ರವೇಶ ಕೂಪನ್‌ನ್ನೇ ಬಳಸಬೇಕು. ಜೆರಾಕ್ಸ್‌ಪ್ರತಿ ಪರಿಗಣಿಸುವುದಿಲ್ಲ.
- ಮೊದಲ ಬಹುಮಾನ ಪಡೆದವರ ಭಾವಚಿತ್ರ ಪ್ರಕಟಿಸಲಾಗುವುದು.
- ಸರಿಯುತ್ತರಗಳ ಪ್ರವೇಶ ಪತ್ರಗಳನ್ನೆಲ್ಲಾ ಸೇರಿಸಿ ಲಾಟರಿ ಮೂಲಕ ಬಹುಮಾನಗಳನ್ನು ನಿರ್ಧರಿಸಲಾಗುವುದು.
- ಪ್ರವೇಶ ಪತ್ರ ತಲುಪಲು ಅಂತಿಮ ದಿನಾಂಕ ೦೫-೦೭-೧೯೯೭

# ಕ್ವಿಜ್ - ೧

೧. ಕೃಷ್ಣಾ ನದಿಯ ಉಗಮ ಸ್ಥಳ ಯಾವುದು? ಯಾವ ರಾಜ್ಯದಲ್ಲಿದೆ?

.............................................

೨. ಕರ್ನಾಟಕದ ಅತಿ ಚಿಕ್ಕ ಜಿಲ್ಲೆ ಯಾವುದು?

.............................................

೩. ರಂಗನ ತಿಟ್ಟು ಪಕ್ಷಿಧಾಮ ಯಾವ ಪಟ್ಟಣದ ಬಳಿ ಇದೆ?

.............................................

೪. ಐದು ನದಿಗಳು ಹರಿಯುವ ಕರ್ನಾಟಕದ ಏಕೈಕ ಜಿಲ್ಲೆ ಯಾವುದು?

.............................................

೫. ಕರ್ನಾಟಕ ಏಕೀಕರಣಕ್ಕೆ ಮುನ್ನ ಬಳ್ಳಾರಿ ಯಾವ ಪ್ರಾಂತ್ಯಕ್ಕೆ ಒಳಪಟ್ಟಿತ್ತು?

.............................................

ಹೆಸರು.............................................

ವಿಳಾಸ.............................................

.............................................

.............................................

ಪಿನ್ ಕೋಡ್........................ ದೂರವಾಣಿ........................

ಪ್ರವೇಶ ಪತ್ರಗಳನ್ನು ಕಳುಹಿಸಬೇಕಾದ ವಿಳಾಸ :

ಸಂಪಾದಕರು, **ಬಿಸಿಲ ಬದುಕು**, ಅಂಚೆ ಪೆಟ್ಟಿಗೆ ೭೯೫೧, ಬಸವೇಶ್ವರ ನಗರ, ಬೆಂಗಳೂರು-೭೯.

# ಸಂಬಂಧ ಸೇತುವೆ

**ಕ**ರ್ನಾಟಕದ ಉತ್ತರ ಹಾಗೂ ದಕ್ಷಿಣ ಭಾಗಗಳ ನಡುವೆ ಸಂಬಂಧ ಸೇತುವೆಯಾಗಿ ಪರಸ್ಪರ ಅರಿಯಲು ಅನುವು ಮಾಡಿಕೊಡಬೇಕೆಂಬ "ಬಿಸಿಲ ಬದುಕು" ಪತ್ರಿಕೆಯ ಆಶಯಕ್ಕನುಗುಣವಾಗಿ ಸಂಬಂಧ ಸೇತುವೆ ಅಂಕಣ ಪ್ರಾರಂಭಿಸುತ್ತಿದ್ದೇವೆ.

**ವಿವಾಹಿತರಿಗೆ**

ಉತ್ತರ ಹಾಗೂ ದಕ್ಷಿಣ ಕರ್ನಾಟಕದ ಜನರ ನಡುವಿನ ವೈವಾಹಿಕ ಸಂಬಂಧಗಳಿಗೆ ಕೊರತೆಯೇ ಇಲ್ಲ. ಇಂತಹ ಸಂಬಂಧ ಬೆಳೆಸಿ ಬದುಕಿನಲ್ಲಿ ಸಾಮರಸ್ಯ ಸಾಧಿಸಿದ ಗಂಡ-ಹೆಂಡತಿಯರು ತಮ್ಮ ಅನುಭವವನ್ನು ಈ ಅಂಕಣದಲ್ಲಿ ಹಂಚಿಕೊಳ್ಳಬಹುದು. ಭಾಷೆ, ಸಂಪ್ರದಾಯ, ಕೌಟುಂಬಿಕ ವಾತಾವರಣ ಇತ್ಯಾದಿ ಯಾವುದೇ ವಿಷಯದಲ್ಲಿ ತಮಗಾದ ಸ್ವಾರಸ್ಯಕರ ಅನುಭವವನ್ನು ಬರೆಯಲು ಗಂಡ-ಹೆಂಡತಿ ಇಬ್ಬರಿಗೂ ಇಲ್ಲಿ ಅವಕಾಶ. ಬರಹ ಹಸ್ತಪ್ರತಿಯಲ್ಲಿ ಒಂದು ಪುಟ ಮೀರದಿರಲಿ. ದಂಪತಿಯ ಭಾವಚಿತ್ರ ಅತ್ಯಗತ್ಯ.

**ನೌಕರರಿಗೆ**

ಕರ್ನಾಟಕದ ಉತ್ತರ ಭಾಗದವರು ದಕ್ಷಿಣ ಭಾಗದಲ್ಲೂ, ದಕ್ಷಿಣದವರು ಉತ್ತರದಲ್ಲೂ ನೌಕರಿ ಮಾಡಿದಾಗಿನ ಅನುಭವ ಹೇಗಿರುತ್ತದೆ? ನಿಮ್ಮ ಇಂಥ ವಲಸೆಯ ಸಂದರ್ಭದಲ್ಲಿ ಆದ ಅನುಭವವನ್ನು ಹಸ್ತ ಪ್ರತಿಯಲ್ಲಿ ಒಂದು ಪುಟ ಮೀರದಂತೆ ಬರೆದು ಕಳಿಸಿ. ಅನುಭವ ಸಿಹಿಯಾಗಿರಬಹುದು ಅಥವಾ ಕಹಿಯಾಗಿರಬಹುದು. ನಿಮ್ಮ ಭಾವಚಿತ್ರ ಜತೆಗಿರಲಿ.

**ವಿದ್ಯಾರ್ಥಿಗಳಿಗೆ**

ವಿದ್ಯೆಯನ್ನು ಅರಸಿ ರಾಜ್ಯದ ಒಂದು ಭಾಗದಿಂದ ಇನ್ನೊಂದು ಭಾಗಕ್ಕೆ ತೆರಳಿದ ವಿದ್ಯಾರ್ಥಿಗಳಿಗೆ ಈ ಅಂಕಣದಲ್ಲಿ ಅವಕಾಶವಿದೆ. ನೀವು ರಾಜ್ಯದ ಮತ್ತೊಂದು ಭಾಗದ ಕಾಲೇಜಿನಲ್ಲಿ ವಿದ್ಯಾಭ್ಯಾಸ ಮಾಡುವಾಗ ನಿಮಗೆ ಕಾಲೇಜಿನಲ್ಲಿ, ಹಾಸ್ಟೆಲ್‌ನಲ್ಲಿ, ಗೆಳೆಯರೊಂದಿಗೆ, ಸ್ಥಳೀಯರೊಂದಿಗೆ ಆದ ಸಿಹಿ-ಕಹಿ ಅನುಭವವನ್ನು ಹಸ್ತ ಪ್ರತಿಯಲ್ಲಿ ಒಂದು ಪುಟ ಮೀರದಂತೆ ಬರೆಯಿರಿ. ನಿಮ್ಮ ಫೋಟೋ ಕಳಿಸಿ.

ವಿಳಾಸ :

**ಬಿಸಿಲ ಬದುಕು** ಮಾಸ ಪತ್ರಿಕೆ

ಬಸವೇಶ್ವರನಗರ, ಬೆಂಗಳೂರು-560 079 ಅಂಚೆ ಪೆಟ್ಟಿಗೆ : 7951





# ಸೂಜಿ ಚಿಕಿತ್ಸೆ ಪರಿಣತ ಪ್ರಾಧ್ಯಾಪಕ ಎಂ.ಈಶ್ವರ್

ಕಳೆದ ೨೧ ವರ್ಷಗಳಿಂದ ಹುಬ್ಬಳ್ಳಿಯ ಗಂಗಾಧರ ವಾಣಿಜ್ಯ ಮಹಾವಿದ್ಯಾಲಯದಲ್ಲಿ ಉಪನ್ಯಾಸಕರಾಗಿರುವ ಪ್ರೊ.ಈಶ್ವರ್ ಮೆಣಸಿನಕಾಯಿ ತಮ್ಮ ಯೋಗ ಶಿಬರಗಳಿಂದ ಉತ್ತರ ಕರ್ನಾಟಕದಲ್ಲೇ ಮನೆಮಾತಾಗಿದ್ದಾರೆ. ಇತರ ಯೋಗ ಪಟುಗಳು ಅಂಗ ಸಾಧನೆಗೆ ಮಹತ್ವ ನೀಡುತ್ತಿದ್ದರೆ ಇವರು ಯೋಗ ಥೆರಪಿಗೆ ಪ್ರಾಶಸ್ತ್ಯ ಕೊಡುತ್ತಾರೆ.

ಈ ಹಿಂದಿ ಪ್ರೊಫೆಸರ್ ಪತಂಜಲಿಯ 'ರಾಜಯೋಗ', ಅರವಿಂದರ 'ಪೂರ್ಣ ಯೋಗ' ಸ್ವಾಮಿ ಶಿವಾನಂದರ 'ಶಿವಯೋಗ', 'ಮಂತ್ರಯೋಗ' ಹಾಗೂ 'ಲಯ ಯೋಗ' ಗಳನ್ನು ಅರಗಿಸಿಕೊಂಡು ಅನುಷ್ಠಾನಕ್ಕೆ ತರುವ ಪರಿ ಬೆರಗುಗೊಳಿಸುವಂಥದು.

ಉಪಯುಕ್ತ ಗ್ರಂಥಗಳ ಅಧ್ಯಯನ, ಸದಾ ಉನ್ನತ ಚಿಂತನ, ರುದ್ರಸ್ವಾಮಿಗಳ ಪ್ರೇರಣೆಯಿಂದ ಮಾಡಿದ ಯೋಗ ಸಾಧನ, ಆಯುರ್ವೇದ, ಹೋಮಿಯೋಪಥಿ, ಆಕ್ಯುಪಂಕ್ಚರ್‌ಗಳ ದರ್ಶನ... ಪ್ರೊ.ಎಂ.ಈಶ್ವರ್ ಇದೀಗ ನಿವೃತ್ತಿಯ ಅಂಚಿನಲ್ಲಿರುವಾಗಲೂ ಬಹು ಬಗೆಯಲ್ಲಿ ಪ್ರವೃತ್ತರಾಗಿದ್ದಾರೆ (ಜನನ:೨೬-೧೧-೧೯೩೯).

ಸುಮಾರು ೫೦,೦೦೦ ಮಕ್ಕಳಿಗೆ ಯೋಗ



ಶಿಕ್ಷಣ ನೀಡಿದ್ದಾರೆ. ಹದಿನೈದು ಸಾವಿರಕ್ಕೂ ಮೇಲ್ಪಟ್ಟು ಮಹಿಳೆಯರು ಹಾಗೂ ಪುರುಷರಿಗೆ ಯೋಗ ತರಬೇತಿ ಒದಗಿಸಿದ್ದಾರೆ. ನಿಸರ್ಗ ಚಿಕಿತ್ಸೆಯ ಅಂಗವಾಗಿ ಯೋಗ ಸಾಧನೆ ಮಾಡಿ ಗುಣ ಪಡಿಸಿದ ರೋಗಿಗಳ ಸಂಖ್ಯೆ ಐದು ಸಾವಿರಕ್ಕೂ ಅಧಿಕ. ಇವರ ಶಿಷ್ಯೆಯರಾದ ಕುಮಾರಿ ಲಲಿತಾ ಹಾಗೂ ರಶ್ಮಿ ಯೋಗಾಸನ ಸ್ಪರ್ಧೆಯಲ್ಲಿ ರಾಷ್ಟ್ರಮಟ್ಟದ ಪ್ರಶಸ್ತಿ ಪಡೆದಿರುವುದು ಒಂದು ಹೆಗ್ಗಳಿಕೆ.

ಹುಬ್ಬಳ್ಳಿಯ ಲಿಂಗರಾಜ ನಗರದಲ್ಲಿ 'ಯೋಗ ಅಧ್ಯಯನ ಕೇಂದ್ರ'ವನ್ನು ನಡೆಸುತ್ತಿರುವ ಪ್ರೊ.ಈಶ್ವರ್ ರೋಗಿಗಳ ಸೇವೆಯನ್ನು 'ಈಶ ಸೇವೆ' ಎಂದೇ ಪರಿಗಣಿಸುತ್ತಾರೆ. ಪತ್ನಿ ದಾಕ್ಷಾಯಿಣಿ ಜತೆ ಆದರ್ಶಮಯ ಬದುಕನ್ನು ಸಾಗಿಸುತ್ತಿರುವ ಶ್ರೀಯುತರು ಬರಹಗಳ ಮೂಲಕ, ಬಾನುಲಿ ಭಾಷಣಗಳ ಮೂಲಕ, ಉಪನ್ಯಾಸಗಳ ಮೂಲಕ ಆರೋಗ್ಯವಂತ ಸಮಾಜ ನಿರ್ಮಾಣದಲ್ಲಿ ತೊಡಗಿದ್ದಾರೆ. ಸೂಜಿ ಚಿಕಿತ್ಸೆಯನ್ನು ಕಳೆದೆರಡು ವರ್ಷಗಳಿಂದ ನೀಡುತ್ತಿರುವ ಇವರು 'ಡಿಪ್ಲೊಮಾ'ವನ್ನು ಆಕ್ಯುಪಂಕ್ಚರ್‌ನಲ್ಲಿ ಮುಗಿಸಿರುತ್ತಾರೆ. ಸರಳ, ಸುಲಭ ಚಿಕಿತ್ಸೆಯಿಂದ ಬಡ ಮಧ್ಯಮ ವರ್ಗೀಯ ಜನತೆಯ ಆದರ, ಅಭಿಮಾನ ಗಳಿಸಿದ್ದಾರೆ.

ಮೊನ್ನೆ (ಫೆಬ್ರುವರಿ.೯೭) ಖಜುರಾಹೋದಲ್ಲಿ ನಡೆದ 'ಅಂತಾರಾಷ್ಟ್ರೀಯ ಸೂಜಿ ಚಿಕಿತ್ಸಾ ಸಮ್ಮೇಳನದಲ್ಲಿ ಇವರು ಮಂಡಿಸಿದ ಪ್ರೌಢ, ಸಂಶೋಧನಾ ಪ್ರಬಂಧಕ್ಕೆ ("Pain Management through Nature Cure, Yoga And Acupuncture") ಅಮೆರಿಕೆಯ ನೋವು ನಿವಾರಣಾ ಸಂಸ್ಥೆ ಹಾಗೂ ಭಾರತೀಯ ಸೂಜಿ ಚಿಕಿತ್ಸಾ ಕೇಂದ್ರಗಳು ಫೆಲೋಶಿಪ್ ಹಾಗೂ ಚಿನ್ನದ ಪದಕದೊಂದಿಗೆ ಸ್ನಾತಕೋತ್ತರ ಪದವಿ ನೀಡಿ ಗೌರವಿಸಿರುವುದು ಅಭಿಮಾನದ ಸಂಗತಿ.

○ ಆರೂರು ಲಕ್ಷ್ಮಣ್ ಶೇಟ್

# ಪ್ರಗತಿಪರ ರೈತ ಎಸ್. ಆರ್. ಕಲ್ಲೂರ

ಇತ್ತೀಚೆಗೆ ತೋಟಗಾರಿಕೆ ಇಲಾಖೆ ನಡೆಸಿದ ಬಿಜಾಪುರ ಜಿಲ್ಲೆಯ ರೈತರ ತೋಟಗಾರಿಕೆ ಪ್ರದರ್ಶನದಲ್ಲಿ ಬಸವನ ಬಾಗೇವಾಡಿಯ ಪ್ರಗತಿಪರ ರೈತ ಸಿದ್ದಣ್ಣ ಆರ್.ಕಲ್ಲೂರ ಪ್ರಥಮ ಬಹುಮಾನ ಬಾಚಿದ್ದಾರೆ. ಅವರು ಬೆಳೆದ ಥಾಮಸ್‌ನ ಸೀಡ್‌ಲೆಸ್ ದ್ರಾಕ್ಷಿ ಬೆಳೆಗೆ ಈ ಪ್ರಶಸ್ತಿ ಲಭಿಸಿದೆ.



ದ್ವಿತಿಯ ಬಹುಮಾನವನ್ನು ಇದೇ ರೈತರ ಸಹೋದರ ಅಶೋಕ ಕೆ.ಕಲ್ಲೂರ ಅವರು ಗಳಿಸಿ ಬಸವನ ಬಾಗೇವಾಡಿಗೆ ಕೀರ್ತಿ ತಂದಿದ್ದಾರೆ.

ಕೆಲವು ದಶಕಗಳಿಂದ ತೋಟಗಾರಿಕೆಯಲ್ಲಿ ಅಪಾರ ಅನುಭವ ಗಳಿಸಿರುವ ಸಿದ್ದಣ್ಣ ಕಲ್ಲೂರರು ವಿವಿಧ ಮಾದರಿಯ ಹಣ್ಣು ಹೂಗಳನ್ನು ಬೆಳೆಯುತ್ತಿದ್ದು ಹನಿ ನೀರಾವರಿ ತಂತ್ರಜ್ಞಾನದೊಂದಿಗೆ ಉತ್ತರ ಕರ್ನಾಟಕದಲ್ಲಿಯೇ ಮಾದರಿಯ ತೋಟ ನಿರ್ಮಿಸಲು ಹಗಲಿರುಳು ಶ್ರಮಿಸುತ್ತಿರುವರು. ಅವರು ಕಳೆದ ಶಿವರಾತ್ರಿ ದಿನ ತಮ್ಮ ತಾಯಿ ದಿವಂಗತ ಶಾಂತಮ್ಮನವರ ಸ್ಮರಣಾರ್ಥ ಗ್ರಾಹಕರಿಗೆ ರಿಯಾಯಿತಿ ದರದಲ್ಲಿ ೪೦ ಕ್ವಿಂಟಾಲ್ ದ್ರಾಕ್ಷಿ ಮಾರಾಟ ಮಾಡಿದ್ದಾರೆ. ತಾಲೂಕಿನ ಮುಖ್ಯ ಬೆಳೆಗಳೆಂದರೆ ಉಳ್ಳಗಡ್ಡಿ, ಬಳುಳ್ಳಿ, ಬಾಳೆಹಣ್ಣು. ನಿಶ್ಚಿತ ಲಾಭ ತರದ ಇಂತಹ ಬೆಳೆಗಳಿಗೆ ಅಂಟಿಕೊಳ್ಳದೆ ದ್ರಾಕ್ಷಿ, ದಾಳಿಂಬೆಯಂತಹ ಬೇಡಿಕೆ ಬೆಳೆಗಳನ್ನು ವೈಜ್ಞಾನಿಕ ವಿಧಾನಗಳಿಂದ ಕೃಷಿಗೈದರೆ ನಮ್ಮ ರೈತರು ಅಭಿವೃದ್ಧಿ ಸಾಧಿಸಬಹುದೆಂದು ಸಿದ್ಧ ಮಾಡಿ ತೋರಿಸಿದ್ದಾರೆ ಕಲ್ಲೂರ. ಈ ದೆಸೆಯಲ್ಲಿ ಮುಂದಾಗುವ ರೈತರಿಗೆ ಮಾರ್ಗದರ್ಶನ ನೀಡಲೂ ಅವರು ಮುಂದೆ ಬಂದಿದ್ದಾರೆ.

○ ಸಿ.ಸಿ. ಹಿರೇಮಠ

# ಇಗೋ ಇದು ಹರಪನಹಳ್ಳಿ

- ೧೯೧೪ರಲ್ಲಿ ಪ್ರಥಮ ಬಾರಿಗೆ ಹರಪನಹಳ್ಳಿಯಲ್ಲಿ ''ಶಿವಾನಂದ'' ಮುದ್ರಣಾಲಯವನ್ನು ಹೊಳೆಬಸವ ಶಾಸ್ತ್ರಿಗಳು ಸ್ಥಾಪಿಸಿದರು.
- ಹಾಸ್ಯ ಸಾಹಿತ್ಯಕ್ಕೆ ಮತ್ತೊಂದು ಹೆಸರಾದ ''ಬೀಚಿ'' ಹರಪನಹಳ್ಳಿಯವರು.
- ೧೨ ಕರಗಲ್ಲು, ೧೨ ಗರಡಿಮನೆ, ೧೨ ಆಂಜನೇಯ ದೇವಸ್ಥಾನ ಹರಪನಹಳ್ಳಿಯ ವೈಶಿಷ್ಟ್ಯ
- ದಾಸ ಸಾಹಿತ್ಯಕ್ಕೆ ಮಹತ್ವದ ಕೊಡುಗೆಯನ್ನು ನೀಡಿದ ''ಭೀಮವ್ವ'' ಹರಪನಹಳ್ಳಿಯ ಅನಕ್ಷರಸ್ಥೆ.
- ಬಸವಣ್ಣನವರ ವಚನಗಳನ್ನು ಆಂಗ್ಲಭಾಷೆಗೆ ಪ್ರಥಮವಾಗಿ ಅನುವಾದ ಮಾಡಿದ ಟಿ.ಹೆಚ್.ಎಂ. ಸದಾಶಿವಯ್ಯನವರು ಹರಪನಹಳ್ಳಿಯವರು.
- 'ಜಾನಪದ ತಜ್ಞ' ಮುದೇನೂರು ಸಂಗಣ್ಣನವರು ಹರಪನಹಳ್ಳಿ ತಾಲೂಕು ಚಿಗಟೇರಿ ಗ್ರಾಮದವರು.
- ರಾಜ್ಯದಲ್ಲೇ ಹೆಚ್ಚು ಸಿಲಿಕಾನ್ ಸಿಗುವುದು ಹರಪನಹಳ್ಳಿ ತಾಲೂಕಿನಲ್ಲಿ
- 'ಅನುಭವಾಮೃತ'ದ ಮಹಲಿಂಗರಂಗನ ಸಮಾಧಿ ಹರಪನಹಳ್ಳಿ ತಾಲೂಕಿನ ಉಚ್ಚಂಗಿದುರ್ಗದಲ್ಲಿದೆ.
- ಮಹಾತ್ಮಾಗಾಂಧಿ, ವಿನೋಬಾಭಾವೆ ತಂಗಿದ್ದ ಶತಮಾನೋತ್ಸವ ಕಂಡ ಕಾಲೇಜ್ ಹರಪನಹಳ್ಳಿಯಲ್ಲಿದೆ.
- ಬಳ್ಳಾರಿಯ ಅರೆಮಲೆನಾಡು ಹರಪನಹಳ್ಳಿ.

(ಸಂಗ್ರಹ : ಪುನಬಗಟ್ಟಿ ಕೊಟ್ರಯ್ಯ)

# ಬ್ಲ್ಯಾಕ್-ಮೇಲ್ ಗಾಡಿ!




○ ಎಸ್.ಕೆ. ಕುಲಕರ್ಣಿ
''ಪರಿಮಳ''
ರೇಲ್ವೆ ಗೂಡ್ಸ್ ಶೆಡ್ ಬಳಿ, ಧಾರವಾಡ - ೭.

'Black mail ಅಂದರ ಇದೂ ಒಂದು ಮೇಲ್‌ಗಾಡಿ ರೈಲು ಏನ್ರೀ?' ಎಂದು ಪ್ರಶ್ನಿಸಿದ ನನ್ನ ಸನ್ಮಿತ್ರ ಸಣ್ಣಪ್ಪ ಅಷ್ಟೇನೂ ದಡ್ಡತನದ ಪ್ರಶ್ನೆ ಮಾಡಿರಲಿಲ್ಲ. ಇಂದಿನ ಬ್ರಾಡ್‌ಗೇಜೀಕರಣದ ದುಂದುಗಾರಿಕೆಯಲ್ಲಿ ಜನತಾಹಿತಕ್ಕೆ ಸಂದ ಕೊಡುಗೆಗಿಂತ, ಜನತಾ ಕರ ಸಂದಾಯದ ಹಡಗನ್ನೇ ನುಂಗಿದ ತಿಮಿಂಗಲುಗಳ ಬ್ಲ್ಯಾಕ್ ಹಣದ, ಬ್ಲ್ಯಾಕ್‌ಮೇಲಿನ ಸ್ವಹಿತ ಸಾಧನೆ ಅಧಿಕ. ಈ ಬ್ರಾಡ್‌ಗೇಜೀಕರಣದ ಹಿಂದಿನ ಯೋಜನೆಯ ಕೊನೆಯ ಬಾಲಾಗಸಿಯ ಪ್ರಕರಣ ಮೊನ್ನೆ ಹೊಳೆನರಸೀಪುರಕ್ಕೆ ಅರ್ಪಿಸಲ್ಪಟ್ಟಿತು. ಗದಗ ಸೊಲ್ಲಾಪುರ, ಹುಬ್ಬಳ್ಳಿ-ಕಾರವಾರಗಳನ್ನೆಲ್ಲಾ ಬಿಟ್ಟು ಈ ನರಸೀಪುರದ ಹೊಳೆಯಲ್ಲಿ ಹುಣಸೇಹಣ್ಣು ತೊಳೆದದ್ದೇಕೆ? ಬಿಡಿಸಿ ಹೇಳಬೇಕೆ? 'ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸೀ' ಹೊಳೆನರಸೀಪುರವೆಂದರೆ ಸ್ವರ್ಗದಾಯಕ ವಲ್ಲವೆ? ಜನ್ಮಭೂಮಿಯು ಸ್ವರ್ಗವನ್ನೆ ದಯಪಾಲಿಸುತ್ತದಂತೆ. ಅರ್ಥಾತ್ ಹುಟ್ಟೂರಲ್ಲಿಯೇ ವೃಂದಾವನವಾದರೆ ಅದೇ ಸ್ವರ್ಗಕ್ಕಿಂತ ಮಿಗಿಲು. ಬ್ರಾಡ್‌ಗೇಜೀಕರಣ ವೆಂದರೇನೆ ಸ್ವರ್ಗಾರೋಹಣವೆಂದು ಹೇಳ ಬಹುದು. ಅಲ್ಲಿಯ ಉಜ್ವಲ ಹಂಸಗೀತಾತ್ಮಕ ಭಾಷಣ ಬ್ಲ್ಯಾಕ್‌ಮೇಲ್ ಗಾಡಿಗಿಂತ, I mean ಬ್ರಾಡ್‌ಗೇಜ್‌ಗಾಡಿಗಿಂತಲೂ ವೇಗವಾಗಿತ್ತು.

ಒಟ್ಟಾರೆ, ಇಲ್ಲಿ ಓಡುವ ಬ್ರಾಡ್‌ಗೇಜ್ ರೈಲುಗಾಡಿಯೇ Blackmail ಗಾಡಿ ಎನ್ನಬಹುದು. ಇಂದಿನ (ಅ)ರಾಜಕೀಯ ಯುಗದಲ್ಲಿ ಬ್ಲ್ಯಾಕ್‌ಮೇಲ್ ಒಂದೇ ಸರ್ವತ್ರ ಸಾಧಕ! ಮಂತ್ರಿಯ ಮಗಳನ್ನು ಪ್ರೀತಿಸಿದರೆ ಮೊದಲು ಅಪಹರಣ, ಆಮೇಲೆ ರ್‍ಯಾನ್‌ಸಂ ಹಣದ ಬೇಡಿಕೆ. ಈಡೇರದಿದ್ದರೆ ಮಾಸ್ ಇಲ್ಲವೆ ಗ್ಯಾಂಗ್ ರೇಪ್ ನಡೆಸಿ ಬಲಿಯನ್ನು ಮಾಂಸ ಬೇಯಿಸುವ ಒಲೆಯಲ್ಲಿ ತುರುಕಿದರಾಯಿತು. ಆ ಮೇಲೆ ಒಲೆ ಸಾರಿಸಿ ರಂಗೋಲಿ ಹಾಕಿ ಬಿಟ್ಟರಾತು. ಪಬ್ಲಿಕ್ ಸರ್ವೀಸ್, ಐ.ಎ.ಎಸ್. ಇನ್ನಾವುದೇ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ತೇರ್ಗಡೆ ಮಾಡುವದಿದ್ದರೂ ಬ್ಲ್ಯಾಕ್‌ಮೇಲ್ ಒಂದೇ ಸಾಧನ ಮಾಧ್ಯಮ.

ಮಾಜಿ ಪ್ರಧಾನಿಯ ತರುಣ ಚೆಲುವೆಯನ್ನು ಆಗಲೆ ತಾನು ಮದುವೆಯಾಗಿದ್ದೇನೆಂದು ದರಿದ್ರ ಸುದಾಮನಂತಹ ಶ್ರೀಸಾಮಾನ್ಯ ನೊಬ್ಬನು ಸಾರ್ವಜನಿಕವಾಗಿ ಘೋಷಿಸುವ ಗಟ್ಸ್ ತೋರುತ್ತಾನಲ್ಲ ಸ್ವಾಮಿ, ಆದಲ್ಲವೆ ಬ್ಲ್ಯಾಕ್‌ಮೇಲ್? ಯಾವ ವರದಕ್ಷಿಣೆಯ ಬ್ಲ್ಯಾಕ್‌ಮೇಲ್ ಸಾವೂ ಇಷ್ಟು ಧಾಡಸೀತನ ದ್ದಾಗಿರಲು ಶಕ್ಯವಿಲ್ಲ.

ಬ್ಲ್ಯಾಕ್ ಎನ್ನುವುದೆಲ್ಲವೂ ''ಕಪ್ಪು'' ಎಂದೇ ತಿಳಿಯಬೇಡಿ. ಕೋಗಿಲೆ ಬ್ಲ್ಯಾಕ್ ಬರ್ಡ್ ಅಲ್ಲವೆ? ಆದರೆ ಬ್ಲ್ಯಾಕ್ ಬರ್ಡ್ ಎಲ್ಲಾ ಕೋಗಿಲೆಯಾಗಲಾರವು. ತಾನು ಕೋಗಿಲೆ ಯಾಗಬೇಕೆಂದು ಕಾಗೆ ಸ್ವರ ಎತ್ತಿದರೆ ಏನಾದೀತು?

ಮಾಫಿಯಾ, ಬ್ಲ್ಯಾಕ್‌ಮೇಲ್, ಲಾಕಪ್ ಡೆತ್, ಗ್ಯಾಂಗ್‌ರೇಪ್, ಕೋಣಯಜ್ಞ (ಹಿಂದೆ ಜ್ಞಾನೇಶ್ವರರು ಕೋಣದಿಂದ ವೇದಮಂತ್ರ ಹೇಳಿಸಿದ ಮಹಾಮಹಿಮರು) - ಇವೆಲ್ಲಾ ಇಂದಿನ ಡೆಮಾಕ್ರಸಿಯ ಅರ್ಥಾತ್ ದ್ಯಾಮವ್ವನ-ದ್ಯಾಮಪ್ಪನ ಮೆರವಣಿಗೆಯ ನಾನಾ ಮುಖಗಳು! ಈ ಬ್ಲಾಕ್ ಮೇಲ್ ಸಾಮರ್ಥ್ಯವಂತೂ ಒಮ್ಮೊಮ್ಮೆ Boomrang ಆಗಿ ಲೋಕಶಕ್ತಿ ರೂಪದಲ್ಲಿ ತಿರುಗುಬಾಣ ವಾಗಬಹುದು. ಬ್ಲಾಕ್‌ಮೇಲ್‌ನ ಮುಖ್ಯ ವೈಶಿಷ್ಟ್ಯವೆಂದರೆ ಬರಿ ಬಾಯಿಬಾಂಬು! (ಹೋಳೀ ಹುಣ್ಣಿಮೆಯ ಶಂಖವಾದ್ಯ ನೆನಪು). 'ನಾನು ಬೇಲ್ ಇಲ್ಲದ ಜೇಲಿಗೆ ಕಳಿಸಲ್ಪಟ್ಟರೂ ರಾಜೀನಾಮೆ ಕೊಡುವುದಿಲ್ಲ' ಎಂಬುದು ಬ್ಯಾಕ್‌ಮೇಲ್‌ಗೆ ಮೇಲ್ತರಗತಿಯ ಉದಾಹರಣೆ! ಬೋಫರ್ ಎಂಬ ಲೋಫರ್ ಮಂತ್ರಿಕ ಪೆಟ್ಟಿಗೆಯ ಮುಚ್ಚಳ ತೆಗೆದೇನು ಜೋಕೆ-ಎಂಬುದೇ ಬ್ಲ್ಯಾಕ್‌ಮೇಲಿನ ಬೆತ್ತ-cane ಉ! ಬ್ಲಾಕ್ ಮೇಲ್‌ಗಳ ಕೇನೋಪನಿಷತ್! ಕೇನ್ (cane) ಎಂಬುದು ಹೆಡ್‌ಮಾಸ್ತರರ ಕಾಮಧೇನು ಅಷ್ಟೇ ಅಲ್ಲ ಕೇನ್‌ಧಾರಿಗಳೆಲ್ಲರ ಕಾಮಧೇನು!

ಮಾಫಿಯ ಬರಿ ಮುಂಬಯಿಯಲ್ಲಿ ಮಾತ್ರ ವಲ್ಲ, ದಿಲ್ಲಿ ಮಾತ್ರವಲ್ಲ ಜಗತ್ತಿನ ಮಹಾ ಡೆಮಾಕ್ರಸಿಯಾದ ಭಾರತದ ಇಂಚು ಇಂಚಿಗೂ ಪರಮಾತ್ಮನಂತೆ ಸರ್ವಾಂತರ್ಯಾಮಿಯಾಗಿದೆ. ಪರಮಾತ್ಮನೆಂದರೆ ಬ್ರಹ್ಮ; ಬ್ರಹ್ಮನೆಂದರೆ ಸೋಮ; 'ಸೋಮರಸ'ವೆಂದರೆ 'ಮಧು'ರಸ! ಸೋಮನ ಮಿತ್ರ ಅಗ್ನಿ - ಈ ಅಗ್ನಿಹೊತ್ರಿಗಳು ಸದಾ ತುಟಿಗಳ ಮಧ್ಯದಲ್ಲೇ ಸಾರ್ಹಸ್ಥ್ಯ ಪೂಜೆ ಮಾಡುತ್ತಾರೆ. ಅಗ್ನಿ ಅಡುಗೆ ಮನೆ ಒಲೆ! ಎಂದ ಮೇಲೆ ಗೃಹಿಣಿಯರೂ ಅಗ್ನಿ ಪೂಜಕರೆ! ಏಕೆ ಇಂದಿನ ಗೃಹಿಣಿಯರೂ ಅಗ್ನಿ-ಸೋಮರನ್ನು ಗೃಹಸ್ಥ ಪುರುಷರಂತೆಯೇ ಉಪಾಸನೆ ಮಾಡುತ್ತಾರೆ! ವಿಶ್ವಸುಂದರಿಯ ಉಪಾಸಕರು ತೆಲುನಡುವಿನ ನಡುಹರೆಯದ ಅಡುಗೆ ಮನೆಯ ಅಬಲೆಯರನ್ನು ಎದೆಯ ಮೇಲೆ, ತಲೆಯ ಮೇಲೆ ಪುಸ್ತಕಗಳಂತೆ ಕೂಡಿಸಿಕೊಳ್ಳು ತ್ತಾರೆ. ಕೆಲವೊಂದು ಪುಸ್ತಕಗಳಂತೂ ಮಸ್ತಕದ ಮೇಲೆ ಇರಲು ಯೋಗ್ಯ!

ಪರೀಕ್ಷೆಗಳ ಸುಗ್ಗಿಯ ಕಾಲವಿದು! ರ್‍ಯಾಂಕ್ ಗಿಟ್ಟಿಸುವವರು, 'ಪ್ಯಾಸ್' ಗಿಟ್ಟಿಸುವವರು, ನಿರ್ಭಯವಾಗಿ copy ಜಡಿಯಬೇಕೆಂದು ಬಯಸುವವರು ಬ್ಲ್ಯಾಕ್ ಮೇಲ್ ಗಾಡಿ ಸವಾರರೇ ಆಗಬೇಕು. ಪತ್ರಿಕಾಕರ್ತರಿಗಷ್ಟೆ ಮಂತ್ರಿಗಳ Blackmail ಮಾಡುವ ವಿಶೇಷ ಹಕ್ಕು-ಬಾಧ್ಯತೆಗಳೆಲ್ಲ! ನಿರುದ್ಯೋಗ ನಿವಾರಣೆ, Opensite, ಅಪಾರ್ಟ್‌ಮೆಂಟೈಜೇಶನ್ ಗಿಟ್ಟಿಸುವ ಇಂಥವನ್ನೆಲ್ಲಾ ಸಿ ಸೀ ಮಾಡುವ, ಕೈಬಿಸಿ ಮಾಡುವ, buttering-polsoning ಮಾಡುವ, ಹಿತ್ತಿಲು ಬಾಗಿಲವಶೀಲಿ ಹಚ್ಚುವ, tactics ಗಿಂತ ಬ್ಲ್ಯಾಕ್‌ಮೇಲ್ ಸವಾರಿ ಮಾಡುವುದೇ ಲೇಸು! ಮಂತ್ರಿಗಳಿಗೆ ಪರಮ ಪೂಜ್ಯ ವಸ್ತು ಯಾವುದೆಂದರೆ ಪೃಷ್ಠದ ಬುಡದ ಪೀಠ-ಬ್ಲ್ಯಾಕ್‌ಮೇಲಿನಿಂದ ಈ ಪೃಷ್ಠವನ್ನೇ I mean ಪೀಠವನ್ನೇ ಉಡಾಯಿಸಬಹುದು.

ಲಂಚವು ಪರಬ್ರಹ್ಮನಂತೆ ಬಹುರೂಪಿ! ಲಂಚ, ಮಂಚ, ಮಡದಿ, ಹಡದಿ (ಅರ್ಥಾತ್ ನಡೆಮುಡಿ), ನಗದ್‌ನಾರಾಯಣ, ಲಾಕರ್‌ಶ್ರೀ, F.D.ಶ್ರೀ, ಇಂದಿರಾವಿಕಾಸಶ್ರೀ ಇಂತಹ ಎಷ್ಟೆಷ್ಟೊ ಇತಿಶ್ರೀಗಳೆಂದರೂ ಲಂಚಾತ್ ಲಂಚಮುದಚ್ಯತೇ! ಆದುದರಿಂದ ಯಾವುದೇ ಲಂಚಕ್ಕಿಂತ 'ಧುಣಕಿ' ಎಂಬ ಒದೆಯೇ ಲೇಸು - ದುನಿಯಾಕೋ ಲಾತ ಮಾರೇ ದುನಿಯಾ ಸಲಾಮ ಕರೇ! ಅದಕ್ಕಾಗಿಯೇ the last resort of an ambitions creature is BLACK MAIL! ●

# ಎಳೆಯ ಕವಿಗಳನ್ನು ನಿರ್ಮಿಸುತ್ತಿರುವ ರಾಘವೇಂದ್ರ ದಂಡಿನ್

ರಾಯಚೂರು ಜಿಲ್ಲೆಯಲ್ಲೇ ಮೊದಲ ಸ್ಥಾನದ ವಾಣಿಜ್ಯ ಕೇಂದ್ರವಾದ ಗಂಗಾವತಿಯಲ್ಲಿ ಸಾಹಿತ್ಯಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳು ನಡೆಯುವುದು ವಿರಳ. ಇಂತಹದರಲ್ಲಿ ೨೭ರ ಹರೆಯದರಲ್ಲಿರುವ ರಾಘವೇಂದ್ರ ದಂಡಿನ್ ಎಂಬ ಯುವಕ ಎಡೆಬಿಡದೇ ಎರಡೂ ಸ್ತರಗಳಲ್ಲಿ ಕಾರ್ಯಕಲಾಪಗಳನ್ನು ಮುಂದುವರೆಸಿಕೊಂಡು ಬರುತ್ತಿರುವ ಅಪರೂಪದ ವ್ಯಕ್ತಿ.



ಚಿಕ್ಕ ವಯಸ್ಸಿನಲ್ಲಿಯೇ ಖಾಸಗಿ ಪ್ರೌಢಶಾಲೆಯೊಂದರ ಮುಖ್ಯಾಧ್ಯಾಪಕ ಹುದ್ದೆಯಲ್ಲಿದ್ದಾಗ ದಕ್ಷವಾಗಿ ಕಾರ್ಯನಿರ್ವಹಿಸಿದ್ದು ತಮ್ಮ ವಿದ್ಯಾರ್ಥಿಗಳಿಗೆ ''ಚುಟುಕು ರಚನಾ ತರಬೇತಿ''ಯನ್ನು ನೀಡಿ ವಿದ್ಯಾರ್ಥಿ, ವಿದ್ಯಾರ್ಥಿನಿಯರ ತಂಡವನ್ನು ಎಳೆಯ ಕವಿಗಳ ಸೈನ್ಯವನ್ನಾಗಿ ಪರಿವರ್ತಿಸಿದ್ದಾರೆ. ವೃತ್ತಿಯಿಂದ ಕನ್ನಡ ಶಿಕ್ಷಕರಾದ ಸದರಿಯವರು ಸಮಯ ಸಿಕ್ಕಾಗಲೆಲ್ಲಾ ಚುಟುಕು ರಚನಾ ಕೌಶಲ್ಯವನ್ನು ಮಕ್ಕಳಿಗೆ ಮನದಟ್ಟಾಗುವಂತೆ ತಿಳಿಸಿದ್ದರ ಫಲವಾಗಿ ಮಕ್ಕಳ ಸಾಮರ್ಥ್ಯಕ್ಕೆ ನಿಲುಕುವ ಯಾವುದೇ ಒಂದು ವಸ್ತುವಿನ ಹೆಸರನ್ನು ಹೇಳಿದರೆ ಎರಡು ಅಥವಾ ಮೂರು ನಿಮಿಷಗಳಲ್ಲಿ ಒಂದು ಚುಟುಕು ಹೆಣೆಯುತ್ತಾರೆ ಆ ವಿದ್ಯಾರ್ಥಿಗಳು. ಇಂತಹ ಬಾಲ ಕವಿಗಳನ್ನು ತಮ್ಮ ಶಾಲೆಯಲ್ಲಿ ಮಾತ್ರವಲ್ಲದೇ ಬೇರೆ ಶಾಲೆಯಲ್ಲಿಯೂ ಕೂಡ ನಿರ್ಮಿಸಬೇಕೆಂಬ ಆಶೆಯಿಂದ ''ಚುಟುಕು ರಚನಾ ತರಬೇತಿ''ಗಳನ್ನು ಭಿನ್ನ-ಭಿನ್ನ ಶಾಲೆಗಳಿಗೆ ಹೋಗಿ ನೀಡುತ್ತಿದ್ದಾರೆ.

ಹಲವಾರು ಸಂಘ ಸಂಸ್ಥೆಗಳಿಗೆ ಭೇಟಿ ನೀಡಿ ಅವರು ನಡೆಸುವ ವಿಭಿನ್ನ ಕಾರ್ಯಕ್ರಮಗಳಲ್ಲಿ 'ಚುಟುಕು ರಚನಾ ತರಬೇತಿ'ಯನ್ನೂ ಸೇರಿಸಿ ಯಶಸ್ವಿಯಾಗಿ ನೆರವೇರಿಸುತ್ತಿದ್ದಾರೆ. ಇದಕ್ಕೆಲ್ಲ ಸ್ಫೂರ್ತಿ ದೊರೆಯಬೇಕೆಂದು ಶಾಲೆಯಲ್ಲಿನ ಮಕ್ಕಳಿಗೆ ಸ್ಪರ್ಧೆ ಏರ್ಪಡಿಸಿ ವಿಜೇತ ಬಾಲ ಚುಟುಕು ಕವಿಗಳಿಗೆ ಸ್ವಂತ ಖರ್ಚಿನಲ್ಲಿ ಬಹುಮಾನ ನೀಡಿ ಪ್ರೋತ್ಸಾಹಿಸುತ್ತಿದ್ದಾರೆ. ಅಲ್ಲದೇ ಸಾಹಿತ್ಯಕ ವಾತಾವರಣ ನಿರ್ಮಾಣಕ್ಕಾಗಿ ''ಭಾವ ವಿನಿಮಯ'' ಎಂಬ ಕವಿಗೋಷ್ಠಿ ಬಳಗವನ್ನು ಕಟ್ಟಿಕೊಂಡು ತಿಂಗಳಿಗೊಮ್ಮೆ ಕವಿಗೋಷ್ಠಿಗಳನ್ನು ನಡೆಸುತ್ತಾ ಬಂದಿದ್ದಾರೆ. ಕಳೆದ ವರ್ಷ ತಮ್ಮ ಶಾಲೆಯಲ್ಲಿ ಮಕ್ಕಳಿಗಾಗಿಯೇ ಒಂದು ಮಕ್ಕಳ ಕವಿ ಸಮ್ಮೇಳನವನ್ನು ಏರ್ಪಡಿಸಿ ಯಶಸ್ವಿಗೊಳಿಸಿದ್ದು ರಾಜ್ಯದ ಯಾವ ಶಾಲೆಯಲ್ಲೂ ಈ ಕಾರ್ಯಕ್ರಮ ನಡೆದಿರಲಿಕ್ಕಿಲ್ಲ.

ಬಾಲ್ಯದಿಂದಲೂ ನಾಟಕ, ಭಾಷಣ ಅಭಿನಯ, ಕಥೆ-ಕವನ, ಚುಟುಕು ರಚನೆಗಳನ್ನು ಮಾಡುತ್ತಾ ಬಂದಿರುವ ದಂಡಿನ್ ಮಕ್ಕಳಿಗಾಗಿಯೇ ಹಲವು ಕಥೆ-ಕವನ, ಚುಟುಕುಗಳನ್ನು ಬರೆದಿದ್ದಾರೆ. ''ಮಕ್ಕಳ ರಾಜ್ಯ''ಎಂಬ ಇವರ ಕಿರುಕೃತಿ ಈ ಮಾತನ್ನು ಹೌದಾಗಿಸುತ್ತದೆ. ಪ್ರೌಢಶಾಲಾ ಮಕ್ಕಳಿಗೆ ಸಾಹಿತ್ಯದ ಗೀಳನ್ನು ರಚನಾತ್ಮಕವಾಗಿ ಅಂಟಿಸುವ ಕೆಲಸ ಮಾಡುತ್ತಿರುವ ಇವರು ''ಭಾವನಾಕ್ಷರ'' ಎಂಬ ಭಾವಗೀತೆಗಳ ಸಂಕಲನವನ್ನು ಪ್ರಕಟಿಸಿದ್ದಾರೆ.

ಇಂದಿನ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾದ ಶಾಂತರಸರು ೧೯೭೨ರಲ್ಲಿ 'ಬೆನ್ನ ಹಿಂದಿನ ಬೆಳಕು' ಕೃತಿಯನ್ನು ಹೊರ ತಂದ ನಂತರ ಈಶಾನ್ಯ ಕರ್ನಾಟಕದಲ್ಲಿ ಇಂಥ ಬೇರೊಂದು ಕೃತಿ ೧೯೯೬ರವರೆಗೂ ಬೆಳಕು ಕಂಡಿರಲಿಲ್ಲ. ಇಂಥದ್ದರಲ್ಲಿ ಬೀದರ್, ಗುಲ್ಬರ್ಗಾ, ರಾಯಚೂರು, ಬಳ್ಳಾರಿ ಜಿಲ್ಲೆಗಳ ಹಿರಿ-ಕಿರಿ ಕವಿಗಳ ಕವನಗಳನ್ನು ಸಂಗ್ರಹಿಸಿ ಬಹಳ ಕಷ್ಟಪಟ್ಟು 'ನಕ್ಷತ್ರಗಳು' ಎಂಬ ಪ್ರಾತಿನಿಧಿಕ ಕವನ ಸಂಗ್ರಹವನ್ನು ಹೊರತಂದಿದ್ದಾರೆ. ಇಂತಹ ಈ ಯುವ ಪ್ರತಿಭೆಯನ್ನು ಇಲ್ಲಿರಿಸಿಕೊಂಡು ಬೆಳೆಸುವುದು ಗಂಗಾವತಿ ನಾಗರಿಕರ ಕರ್ತವ್ಯ.

○ ಕೆ. ವಿರೂಪಾಕ್ಷ ಗೌಡ

# ದಿಲ್ಲಿ ಗೆದ್ದ ಹಳ್ಳಿ ಸುಬೇದಾರ

ಕಳೆದ ಸೆಪ್ಟಂಬರ್ ೨೪, ೧೯೯೬ರಂದು ನವದೆಹಲಿಯ ಇಂದೂರ ಸ್ಟೇಡಿಯಂ ಮೈದಾನದಲ್ಲಿ ಡಾ. ಬಿ. ಆರ್. ಅಂಬೇಡ್ಕರ ಫೆಲೋಶಿಪ್ ರಾಷ್ಟ್ರೀಯ ಪ್ರಶಸ್ತಿಯನ್ನು ಹಳ್ಳಿಯ ಯುವಕ ತನ್ನ ಕೊರಳಿಗೆ ಹಾಕಿಸಿಕೊಳ್ಳುವುದರ ಜೊತೆಗೆ ಇಡಿ ಇಂಡಿಯಾದಲ್ಲೇ ರಾಯಚೂರು ಜಿಲ್ಲೆಯ ಪರಿಚಯ ಮಾಡಿಕೊಟ್ಟ. ಈ ಕೀರ್ತಿ ಕುಷ್ಟಗಿ ತಾಲೂಕಿನ ಹಿರೇಮನ್ನಾಪುರ ಗ್ರಾಮದ ಆರ್.ಕೆ. ಸುಬೇದಾರ ಅವರಿಗೆ ಸಲ್ಲುತ್ತದೆ.

ಗ್ರಾಮಾಂತರ ಪ್ರದೇಶದಲ್ಲಿ ಹುಟ್ಟಿ-ಬೆಳೆದ ಸುಬೇದಾರ ತನ್ನ ಚಿಕ್ಕ ವಯಸ್ಸಿನಿಂದಲೇ ಸಮಾಜದಲ್ಲಿನ ಮೂಢ ನಂಬಿಕೆ - ಅಜ್ಞಾನ - ಅಂಧಕಾರವನ್ನೆಲ್ಲಾ ವಿರೋಧಿಸುತ್ತ ಬೆಳೆದು ಬಂದ ವ್ಯಕ್ತಿ. ಸಮಾಜದಲ್ಲಿ ಸಮಾನತೆ ಕಾಣಬೇಕೆಂಬ ಇವರ ಬಯಕೆ ಬರಹದ ಮೂಲಕ ಕಾವ್ಯವಾಗಿ, ಕಥೆಯಾಗಿ ನೊಂದು ದಲಿತ ಕವಿಯಾಗಿ ಬಿಂಬಿಸಿದ. ತನ್ನ ಮನಸ್ಸಿನಾಳದ ಕ್ರಾಂತಿ ಕನಸನ್ನು ಕೆಂಪು ಕಾವ್ಯ ಮೂಲಕ ಹೊರ ಚೆಲ್ಲಿ ಈ ಭಾಗದ ದೀನ - ದಲಿತರ ಕುರಿತು ಬರೆದ ಸಾಹಿತ್ಯವೇ ಈಗ ರಾಷ್ಟ್ರೀಯ ಪ್ರಶಸ್ತಿ ನೀಡಿ ಗೌರವಿಸಿತು, ಸನ್ಮಾನಿಸಿತು. ಜನತೆಯಲ್ಲಿ ಪ್ರೀತಿ ಹುಟ್ಟಿಸಿತು. ಸುಬೇದಾರರಿಗೆ ಮತ್ತಷ್ಟು ಜವಾಬ್ದಾರಿ ನೀಡಿತು.

ಸದಾ ರಾಷ್ಟ್ರದ ಚಿಂತನೆ ಮೂಲಕ ಸಾಕ್ಷರತೆಗಾಗಿ - ಅನಕ್ಷರಸ್ಥರ ಅಂಧ ಬದುಕಿನ ವಿರುದ್ಧ ಹಗಲು ರಾತ್ರಿ ಪ್ರಚಾರಕನಾಗಿ ಯುವಕರ ನಾಯಕನಾಗಿ ಜಿಲ್ಲೆಯ ಮೂಲೆ ಮೂಲೆಯಲ್ಲಿ ತಿರುಗಿ ಬೀದಿ ಬೀದಿಯಲ್ಲಿ

ಅಕ್ಷರ - ಅರಿವು - ಸಮಾನತೆಯ ಘೋಷಣೆ ಕೂಗ್ಹಾಕಿದ ಸುಬೇದಾರ ಈ ರಂಗದಲ್ಲಿ ತನ್ನನ್ನು ತಾನೇ ದುಡಿಸಿಕೊಂಡ. ಅಭಿನಯದಲ್ಲೂ ತಾನೇನು ಕಡಿಮೆ ಇಲ್ಲ ಎಂದ್ಹೇಳುವ ಈ ಪ್ರತಿಭೆ ಸುಭದ್ರಮ್ಮ ಮನಸೂರು, ಸರೋಜಮ್ಮ ಧುತ್ತರಗಿ, ಚಿತ್ರನಟ ಡಿಂಗ್ರಿ ನಾಗರಾಜ ಇವರೊಂದಿಗೆ ಅಭಿನಯಿಸಿ ಶಭಾಶ್‌ಗಿರಿ ಪಡೆದಿದ್ದಾರೆ.

ಬರಹದ ಮೂಲಕ ರಾಜ್ಯದ ಹಲವು ಪತ್ರಿಕೆಗಳಲ್ಲಿ ಪರಿಚಯವಾಗಿರುವ ಸುಬೇದಾರ ಮನೆ - ಹೊಲ ಕೆಲಸದ ಬಿಡುವಿನಲ್ಲಿ ಯುವಕರನ್ನು ಸಂಘಟಿಸಿ ಕಥೆ - ಕವನ - ಲೇಖನದ ಕಲೆಯನ್ನು ತರಬೇತಿ ರೀತಿಯಲ್ಲಿ ಉಪನ್ಯಾಸ ಮಾಡಿ ಕನ್ನಡ ಸಾಹಿತ್ಯದ ಬೆಳವಣಿಗೆಗೆ ಶ್ರಮಿಸಿದುದಲ್ಲದೆ ತಾಲೂಕು ಜಿಲ್ಲಾ ಸಾಹಿತ್ಯ ಸಂಘಟನೆಯಲ್ಲಿ ಪದಾಧಿಕಾರಿಯಾಗಿ ಸೇವೆ ಸಲ್ಲಿಸುತ್ತಿದ್ದಾನೆ. ಭಾರತೀಯ ದಲಿತ ಸಾಹಿತ್ಯ ಅಕಾಡೆಮಿಯ ಕುಷ್ಟಗಿ ಸದಸ್ಯರಾಗಿರುವ ಆರ್.ಕೆ.ಸುಬೇದಾರ ಇವರಿಗೆ ಸಮಾಜ ಸೇವೆ ದಲಿತ ಬಂಡಾಯ ಸಾಹಿತ್ಯ ಬರಹ ಎಂದರೆ ಪಂಚಪ್ರಾಣ. ಇವರ ಸೇವೆ - ಬರಹ ಬದುಕು - ಕಲೆ ಅನಂತ ಅನಂತವಾಗಲಿ. ರಾಷ್ಟ್ರ-ಅಂತರ ರಾಷ್ಟ್ರ ಪ್ರಶಸ್ತಿ ಈ ಗ್ರಾಮಾಂತರ ಪ್ರತಿಭೆ ಪಾಲಿಗೆ ದೊರೆಯಲಿ ಎಂದು ಹಾರೈಸೋಣ.

**○ ಕನಕಗಿರಿ ಅಲ್ಲಾಗಿರಿರಾಜ**



**ನಾನು ಯಾರಿಗೂ ಹೆದರುವ ಏನಲ್ಲ... ಆದರೆ ಇತ್ತೀಚಿಗೆ ನಿನಗೆ ಮಾತ್ರ ಹೆದರಬೇಕಾಗಿದೆ.**

# 'ಬಸವಶ್ರೀ ಪ್ರಶಸ್ತಿ' ಪಡೆದ ಸಿದ್ಧರಾಮ ಶರಣ ಬೆಲ್ದಾಳ

೧೨ನೆಯ ಶತಮಾನದಲ್ಲಿ ಬಸವೇಶ್ವರ ಮಾಡಿದಂತಹ ಕೆಲಸ ಮುಂದುವರೆಯಿಸಿಕೊಂಡು ಹೋಗುತ್ತಿರುವ ಕೆಲವೇ ಕೆಲವು ಜನರಲ್ಲಿ ಭಾಲ್ಕಿಯ ಶತಾಯುಷಿ ಚನ್ನಬಸವ ಪಟ್ಟದ್ದೇವರು ಒಬ್ಬರು. ಇವರು ಅನ್ನ, ಜ್ಞಾನ ಮತ್ತು ಕಾಯಕ ಹೀಗೆ ತ್ರಿವಿಧ ದಾಸೋಹವನ್ನು ನಿರಂತರವಾಗಿ ನಡೆಯಿಸಿಕೊಂಡು ಬರುತ್ತಿದ್ದಾರಲ್ಲದೆ, ತುಳಿತಕ್ಕೊಳಗಾದ ಜನರಿಗೆ ಲಿಂಗ ದೀಕ್ಷೆ ಕೊಟ್ಟು 'ಇವನಾರವ ಇವನಾರವ ಎಂದೆನಿಸದಿರಯ್ಯ, ಇವ ನಮ್ಮವ ಇವ ನಮ್ಮವ ಎಂದೆನಿಸಿರಯ್ಯ' ಎಂದು ಬಸವಣ್ಣನವರು ಹೇಳಿದಂತೆ ಎಲ್ಲರನ್ನೂ ತಮ್ಮವರನ್ನಾಗಿ ಮಾಡಿಕೊಳ್ಳುತ್ತಿದ್ದಾರೆ. ಬೇರೆ ಬೇರೆ ಜಾತಿ, ಜನಾಂಗಕ್ಕೆ ಸೇರಿದ ಅಪಾರ ಬಳಗ ಇವರು ಹೊಂದಿದ್ದು, ಸಿದ್ಧರಾಮ ಬೆಲ್ದಾಳರು ಕೂಡ ಅವರಲ್ಲೊಬ್ಬರು.



೫೦ ವಸಂತಗಳನ್ನು ಕಂಡಿರುವ ಸಿದ್ಧರಾಮ ಶರಣರು ಮೂಲತಃ ದಲಿತ ಜನಾಂಗಕ್ಕೆ ಸೇರಿದವರು. ಸ್ಪೃಶ್ಯ, ಅಸ್ಪೃಶ್ಯ ಭಾವನೆಯ ನಿವಾರಣೆಗಾಗಿ ಶ್ರಮಿಸುತ್ತಿದ್ದಾರೆ.

೫೦ ವಸಂತಗಳನ್ನು ಕಂಡಿರುವ ಸಿದ್ಧರಾಮ ಶರಣರು ಮೂಲತಃ ದಲಿತ ಜನಾಂಗಕ್ಕೆ ಸೇರಿದವರು. ಬೀದರ ಜಿಲ್ಲೆಯ ಔರಾದ ತಾಲೂಕಿನ ಬೆಲ್ದಾಳ ಗ್ರಾಮ ಇವರ ಹುಟ್ಟೂರು. ಶರಣರು ಸಾರಿದ ಮಾನವೀಯ ಮೌಲ್ಯಗಳಿಗೆ ಮಾರು ಹೋದ ಇವರು ತಮ್ಮ ೨೮ನೆಯ ವಯಸ್ಸಿನಲ್ಲಿ ಅಂದರೆ, ೧೯೭೭ರಲ್ಲಿ ಭಾಲ್ಕಿ ಪಟ್ಟದ್ದೇವರಿಂದ ಜಂಗಮದೀಕ್ಷೆ ಪಡೆದು ಮೊದಲಿದ್ದ 'ವಿಠ್ಠಲ' ಎಂಬ ತಮ್ಮ ಹೆಸರನ್ನು ಬದಲಾಯಿಸಿ ಸಿದ್ಧರಾಮ ಶರಣರು ಎಂಬ ನಾಮಕರಣ ಮಾಡಿಕೊಂಡು ಸಂಪೂರ್ಣ ಶರಣರಾದರು. ಅಂದಿನಿಂದ ಸಾತ್ವಿಕತೆಯೇ ತಮ್ಮ ಬದುಕಿನ ರೀತಿಯನ್ನಾಗಿಸಿ, ಬಸವತತ್ವ ಪ್ರಸಾರವೇ ತಮ್ಮ ಜೀವನದ ಗುರಿಯನ್ನಾಗಿಸಿಕೊಂಡು ಕೌಠಾ(ಬಿ)ದಲ್ಲಿ ಆಶ್ರಮವೊಂದನ್ನು ಕಟ್ಟಿಕೊಂಡು ಬದುಕುತ್ತಿದ್ದಾರೆ. ಸ್ಪೃಶ್ಯ, ಅಸ್ಪೃಶ್ಯ ಭಾವನೆಯ ನಿವಾರಣೆಗಾಗಿ ಶ್ರಮಿಸುತ್ತಿದ್ದಾರೆ.

ಇದರ ಜೊತೆಯಲ್ಲಿಯೇ ಇವರು ಸಾಹಿತ್ಯ ಕೃಷಿಯಲ್ಲೂ ಕೂಡ ತೊಡಗಿದ್ದು, ಈಗಾಗಲೇ 'ವಚನ ತತ್ವಸಾರ' 'ಭಗವಾನ ಬುದ್ಧ' 'ವಚನ ತತ್ವಾನುಭವ' 'ಬೆಡಗಿನ ಬೆಳಕು' ಮುಂತಾದ ಬೃಹತ್ ಕೃತಿಗಳನ್ನು ರಚಿಸಿದ್ದಾರೆ.

ಇವರ 'ಬೆಡಗಿನ ಬೆಳಕು' ಅಲ್ಲಮ ಪ್ರಭು, ಬಸವಣ್ಣ, ಚನ್ನಬಸವಣ್ಣ, ಸಿದ್ಧರಾಮ ಮುಂತಾದವರ ಬೆಡಗಿನ ವಚನಗಳ ಸಂಗ್ರಹ ಮತ್ತು ಅರ್ಥ ವಿವರಣೆಯನ್ನು ಹೊಂದಿದ್ದು, ಬೆಡಗಿನ ವಚನಗಳ ರಹಸ್ಯ ಹಾಗೂ ಇತರೆ ಮಾಹಿತಿ ಈ ಕೃತಿಯಿಂದ ಪಡೆಯಬಹುದಾಗಿದೆ. ಈ ಕೃತಿಗೆ ಚಿತ್ರದುರ್ಗದ ಮುರುಘಾ ಮಠದಿಂದ ಕೊಡಲಾಗುವ ೯೭-೯೮ನೇ ಸಾಲಿನ 'ಬಸವ ಶ್ರೀ ಪ್ರಶಸ್ತಿ' ದೊರೆತಿದೆ. ೨೭-೦೨-೯೮ರಂದು ದಾವಣಗೆರೆಯಲ್ಲಿ ನಡೆದ ಸಮಾರಂಭವೊಂದರಲ್ಲಿ ಈ ಪ್ರಶಸ್ತಿಯನ್ನು ಸಿದ್ಧರಾಮ ಶರಣರಿಗೆ ಪ್ರದಾನ ಮಾಡಲಾಗಿದೆ.

ಒಂದು ಲಕ್ಷ ರೂಪಾಯಿ ಹಾಗೂ ತಾಮ್ರ ಪತ್ರವನ್ನೊಳಗೊಂಡ ಈ ಪ್ರಶಸ್ತಿ ಅತ್ಯಂತ ಪ್ರತಿಷ್ಠಿತವಾದುದು. ಈಗಾಗಲೇ ಹತ್ತಾರು ಪ್ರಶಸ್ತಿ - ಪುರಸ್ಕಾರಗಳನ್ನು ಪಡೆದು ಸನ್ಮಾನಿತರಾದ ಸಿದ್ಧರಾಮ ಶರಣರಿಗೆ 'ಬಸವ ಶ್ರೀ ಪ್ರಶಸ್ತಿ' ದೊರೆತಿದ್ದು ಕಿರೀಟವಾಗಿದೆ. ಇದರಿಂದ ಸಿದ್ಧರಾಮ ಶರಣರು ಮಾಡುತ್ತಿರುವ ಜನಪರ ಕಾರ್ಯಕ್ಕೆ ಮತ್ತು ಅವರೊಳಗಿನ ಸಾಹಿತಿಗೆ ಕೆಲಸ ಮಾಡಲು ಇನ್ನಷ್ಟು ಚಾಲನೆ ಕೊಟ್ಟಂತಾಗಿದೆ.

**○ ಮಾಣಿಕ ಆರ್. ಭುರೆ**


ಕಾಪಿ ಹೊಡೆದವನು ಶಿಕ್ಷಣ ಮಂತ್ರಿ, ಲೆಕ್ಕಾ ಬರದವ ವಿತ್ತ-
ಮಂತ್ರಿ, ಅಪರಾಧಿ ಜೈಲು ಮಂತ್ರಿ, ಅಂತೀಯಲ್ಲೇ..
ನಾಚಿಕೆಯಾಗಲ್ವಾ ನಿನಗೆ.. ಥೂ...


ನೀವೇ ಪಿಕ್ ಪಾಕೆಟರ್. ನಿಮ್ಮ ಜೇಬು ಯಾರು
ಕತ್ತರಿಸಿದರು? ಪಕ್ಷದ ಕಛೇರಿಗೇನಾದರೂ ಹೋಗಿದ್ರಾ
ನೆನಪು ಮಾಡಿಕೊಳ್ಳಿ...


ಪೆಟ್ರೋಲ್ ಬಂಕ್ ಹಗರಣ
ದೇಶಸೇವೆ ಮಾಡಲು ಪೆಟ್ರೋಲ್
ಬಂಕ್ ಮಾಡಿಸಿಕೊಂಡೆ. ಸೊಸೆಗೊಂದು
ಮೊಮ್ಮಗನಿಗೊಂದು. ಮೊಮ್ಮಗ ಇನ್ನೂ ಹುಟ್ಟಿಲ್ಲ
ವನೀಗ!
CBI


33
—ತೇಜಸ್ವಿ


ಕಾಣಲ್ವಾ. ಸೊಂಪಾಗಿ ಮೇವು
ಮೇಯ್ದಿದಾರೆ...


ಹರ್ ಮಾಸ್ಟರ್ಸ್ ವಾಯ್ಸ್
ಸೋನಿಯಾ

BISILA BADUKU Kannada Monthly No. MAG (2) PRB.DECL / 3 / 97-98 JULY 1997

